# ವಿಧಿಯ ವೈಚಿತ್ರ್ಯ



ಗ್ರಂಥಕರ್ತ

**ಉಳ್ಳಾಲ ಮಂಗೇಶರಾವ್**



ಬಾಲಸಾಹಿತ್ಯ ಮಂಡಲ ಲಿಮಿಟೆಡ್, ಮಂಗಳೂರು
ಇವರಿಂದ ಪ್ರಕಟಿಸಲ್ಪಟ್ಟಿತು.



(ದ್ವಿತೀಯ ಮುದ್ರಣ)







[Price 0–12–0

ಸರಸ್ವತೀ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್, ಮಂಗಳೂರು.

# ಮುನ್ನುಡಿ

---

ಈ ಗ್ರಂಥವು 'ಅಲೆಕ್ಸಾಂಡರ್ ಡೂಮಾ' ಎಂಬ ಫ್ರೆಂಚ ಕಾದಂಬರಿಕಾರರ 'ಕೌಂಟ್ ಆಫ್ ಮೊಂಟಿಕ್ರಿಸ್ಟೊ' ಎಂಬ ಗ್ರಂಥದ ಆಧಾರದಿಂದ ಬರೆಯಲ್ಪಟ್ಟಿದೆ. ಆದರೆ ಮುಂಬಯಿ ಸಂಸ್ಥಾನದ ಒತ್ತಿಗಿರುವ ನಾಂಗಲಿ ಎಂಬಲ್ಲಿಯ ಒಂದು ಕಥೆ ಎಂಬಂತೆ ರೂಪಿಸಲ್ಪಟ್ಟಿದೆ. ಸಾಧ್ಯವಿದ್ದ ಮಟ್ಟಿಗೆ ಮೂಲದಲ್ಲಿರುವ ವ್ಯಕ್ತಿಗಳ ರೂಪನ್ನು ಚಿತ್ರಿಸಲು ಅವಕಾಶ ಕೊಟ್ಟಿದೆ.

ಇಂಗ್ಲಿಷ ಭಾಷೆಯ ಹಲವು ಕಾದಂಬರಿಗಳನ್ನು ಈ ರೀತಿಯಲ್ಲಿ ನೂತನ ರೂಪದಿಂದ ಚಿತ್ರಿಸಲು ಸಾಧ್ಯವಿದೆ. ಮತ್ತು ಆ ಕೆಲಸವನ್ನು ನಾನು ಕೈಕೊಂಡಿದ್ದೇನೆ. ಈ ಬಗೆಯ ಪ್ರಯತ್ನವು ಎಷ್ಟರ ಮಟ್ಟಿಗೆ ಪೂರೈಸೀತು, ಎಷ್ಟರ ಮಟ್ಟಿಗೆ ಯಶಸ್ವಿಯಾದೀತು ಹೇಳಲು ಅಸಾಧ್ಯ.

ಈ ಕಥೆಯು ಮೂಲದಲ್ಲಿ ಕಣ್ಣಿಗೆ ಹೊಳೆಯುವದೆ. 'ಕೌಂಟ್ ಆಫ್ ಮೊಂಟಿಕ್ರಿಸ್ಟೊ' ತನ್ನ ಸೇಡಿನ ಇಚ್ಛೆ ಮುಗಿದೊಡನೆ ತನ್ನ ಹಡಗಿನಲ್ಲಿ ಕುಳಿತು ಎಲ್ಲಿಗೋ ಹೋಗಿ ಬಿಟ್ಟ' ಎನ್ನುವುದರ ಬದಲಾಗಿ ಇದರಲ್ಲಿಯ ಜಂಗಬಹದ್ದೂರ ಅರ್ಥಾತ್ ತ್ರೈಲೋಕ್ಯನಾಥನು ತನ್ನ ಸರ್ವಸ್ವವನ್ನು ಯೋಗ್ಯ ವ್ಯಕ್ತಿಗಳಿಗೆ ಹಂಚಿಕೊಟ್ಟು ಬದರಿಕಾಶ್ರಮಕ್ಕೆ ತೆರಳಿದನೆಂದು ಹೇಳಿದೆ. ಇದರಿಂದ ಕಥಾವಸ್ತು ಕೆಡದು ಎಂಬುದೇ ನನ್ನ ಸಮಾಧಾನ.

**ಉಳ್ಳಾಲ ಮಂಗೇಶರಾವ್.**

# ವಿಧಿಯ ವೈಚಿತ್ರ್ಯ

## ಒಂದನೆ ಅಧ್ಯಾಯ

### ಬಡ ದಂಪತಿಗಳು

"ಕತ್ತಲಾಯಿತು; ಒಂದೆರಡು ಗಳಿಗೆ ದಾಟಿತು; ಮನೆಯಲ್ಲಿ ಜವಾರಿ ಕಾಳು ಹೆಚ್ಚಿದೆ ಎಂದು ಮಧ್ಯಾಹ್ನವೇ ಹೇಳಿದ್ದೆ. ಓದುವ ಭರದಲ್ಲಿ ಮರವೆಯಾಯಿತೇ?"

"ಅನ್ನಪೂರ್ಣಾ! ನಿಜವಾಗಿ ಮರೆತೆ! ಆರಂಭಿಸಿದ ಈ ಗ್ರಂಥವನ್ನು ಕೆಳಗಿಡಲು ಮನಸ್ಸೆ ಬರಲಿಲ್ಲ, ನೋಡು. ರಾತ್ರಿಯಾದದ್ದೂ ಗೊತ್ತಾಗಲಿಲ್ಲ. ಹಸಿವೆಯು ಪಿಪಾಸೆಯೂ ಕೂಡ ಇಲ್ಲ. ನಿನಗೇನಾದರೂ ಒಂದಿಷ್ಟು ಫಲಾಹಾರ ಮಾಡಿಕೋ."

"ಅಪ್ಪಯ್ಯ! ತಮಗೇ ಬೇಡವಂತೆ. ನನಗಿನ್ನು ಏನು ಬೇಕು? ಒಳಗೆ ಒಂದಿಷ್ಟು ರಾಗಿ ಹಿಟ್ಟು ಇದೆ. ಉಪವಾಸ ಮಲಗಬೇಡಿ ನನ್ನಾಣೆ. ಎರಡು ಭಾಕರಿಗಳನ್ನು ಸುಡುತ್ತೇನೆ. ಸಾಯಂಕಾಲದ ಆಹ್ನಿಕವನ್ನು ಬೇಗ ಮುಗಿಸಿ ಒಂದಿಷ್ಟು ಫಲಾಹಾರ ಮಾಡ ಬನ್ನಿರಿ. ಮಗ್ಗುಲ ಮನೆಗಳ ಜನರು ನಿದ್ದೆಹೋಗುತ್ತಿರುವಂತೆ ಕಾಣುತ್ತದೆ."

ಈ ಸಂಭಾಷಣೆಯು ದಂಪತಿಗಳೊಳಗೆ ನಡೆಯುತ್ತಿತ್ತೆಂದು ವಾಚಕರು ತಿಳಿಯ ಬೇಕು. ಅವರ ಪರಿಚಯವನ್ನು ನಾವು ಈಗ ಮಾಡಿಸಿ ಕೊಡಬೇಕಾಗಿದೆ. ನಾಗರವಳ್ಳಿಯು ತೀರಾ ಹಳ್ಳಿಗಾಡಿನ ಒಂದು ಚಿಕ್ಕ ಹಳ್ಳಿ. ಇದರಲ್ಲಿ ಒಂದೇ ಚಿಕ್ಕ ಅಗಲಕಿರಿದಾದ ಬೀದಿ. ಎರಡು ಮಗ್ಗುಲಲ್ಲಿ ಒಟ್ಟಿಗೆ ಹತ್ತು ಹನ್ನೆರಡು ಗುಡಿಸಲುಗಳು ಇರುವುದರಿಂದಲೇ ಇದೊಂದು ಬೀದಿ. ಬೀದಿಯು ಒಂದು ಕೊನೆಯಲ್ಲಿ

ಮಾರುತಿಯ ಒಂದು ಹರುಕು ಮುರುಕು ಗುಡಿ. ಹಳ್ಳಿಯ ಮಗ್ಗು ಲಲ್ಲಿ ದಟ್ಟವಾದ ಪೊದೆಗಳಿಂದ ಕೂಡಿದ ಕಾಡು. ಅದರಲ್ಲಿ ಭೂತ ಪಿಶಾಚಿಗಳ ಸಂಚಾರವಿದೆ ಎಂದು ನಾಗರವಳ್ಳಿಯ ಜನರ ನಂಬಿಕೆ ಇದ್ದುದರಿಂದ ಅವರು ಹಗಲಲ್ಲಿ ಕೂಡ ಅದರೊಳಗೆ ಸುಳಿಯುತ್ತಿರಲಿಲ್ಲ. ಕಳ್ಳಕಾಕರಿಗೆ ದರೋಡೆ ಕಳ್ಳರಿಗೆ ಇದು ನಿವಾಸಸ್ಥಳವೆಂದೂ ಕೆಲವರ ಅಂಬೋಣ. ರಾತ್ರಿಕಾಲದಲ್ಲಿ ಅಲ್ಲಿಂದ ಕೂಗು ಕೇಳಿಸುವ ಭಯ ಒಂದು ಕಡೆ, ಬಡತನದ ದೆಸೆಯಿಂದ ಬಹಳ ಹೊತ್ತು ದೀಪ ಉರಿಸಲಾರದೆ ಇರುವ ಕಷ್ಟ ಒಂದು ಕಡೆ, ಇವುಗಳ ನಿಮಿತ್ತ ನಾಗರವಳ್ಳಿಯ ಜನರು ಕತ್ತಲಾಗುವ ಮುಂಚೆಯೇ ತಮ್ಮ ರಾತ್ರಿಯ ಊಟಗಳನ್ನು ಮುಗಿಸಿ ನಿದ್ದೆಹೋಗುತ್ತಿದ್ದರು. ಅಂತಹ ದಾರಿದ್ರ್ಯವೆ ಈ ಬ್ರಾಹ್ಮಣ ದಂಪತಿಗಳ ಪದರಿನಲ್ಲಿ ಬಿದ್ದಿತ್ತು. ಪತಿಯ ಹೆಸರು ಮೋರೋಪಂತ, ಪತ್ನಿಯ ಹೆಸರಂತು ಹಿಂದೆಯೇ ಕೇಳಿರುವಿರಿ.

ಮೋರೋಪಂತನು ತಾತ್ವಿಕನೂ ಸಾತ್ವಿಕನೂ ಆದ ಬ್ರಾಹ್ಮಣನು. ದಾರಿದ್ರ್ಯವು ಅವನ ದೇಹವನ್ನು ಕೃಶವಾಗಿ ಮಾಡಿದ್ದರೂ, ಮುಖದಲ್ಲಿ ಒಂದು ಬಗೆಯ ವಿಚಿತ್ರವಾದ ಕಾಂತಿ; ಅರೆತೆರೆದ ಕಣ್ಣುಗಳಲ್ಲಿ ವಿಶೇಷವಾದ ಶಾಂತಿ. ಅವನ ವಯಸ್ಸು ಮೂವತ್ತರೊಳಗಿರಬಹುದು. ಆದರೂ ಅವನು ಸಂಸ್ಕೃತದಲ್ಲಿ ಕಾವ್ಯ, ತರ್ಕ, ಜ್ಯೋತಿಷ್ಯ, ವೈದ್ಯ ಮುಂತಾದ ಹಲವು ಭಾಗಗಳನ್ನು ಮಗುಚಿದ್ದನು. ಸರಸ್ವತಿಯೂ, ಲಕ್ಷ್ಮಿಯೂ ಯಾವಾಗಲೂ ಒಂದೇ ಸ್ಥಾನದಲ್ಲಿ ಸೇರುವುದಿಲ್ಲವೆಂಬುದಕ್ಕೆ ಮೋರೋಪಂತನು ಒಂದು ನಿದರ್ಶನವಾಗಿದ್ದನು. ಅನ್ನಪೂರ್ಣೆಯ ವಯಸ್ಸು ಇಪ್ಪತ್ತೈದು. ಅನ್ನಪೂರ್ಣೆ ಮೋರೋಪಂತನಿಗೆ ಅನುರೂಪಳಾದ ಸತಿ. ಬಡತನದಿಂದ ಮನೆಯಲ್ಲಿ ಏಕಾದಶಿಯ ವ್ರತವೇ ನಿತ್ಯಾಚರಣೆಯಂತೆ ಇದ್ದರೂ, ಒಂದು ದಿನವಾದರೂ ಸಿಡುಕು ಮೋರೆಯನ್ನು ತೋರಿಸಿದ್ದಿಲ್ಲ; ಹುಬ್ಬುಗಂಟನ್ನೂ ಹಾಕಿದ್ದಿಲ್ಲ. ತನ್ನ ದಿನಚರ್ಯದ ಕೆಲಸ ಬೊಗಸೆಗಳು ಮುಗಿದ ತರುವಾಯ, ತನ್ನ ಪತಿಯ ಮರಾಠಿ ಗ್ರಂಥಗಳಲ್ಲಿ ಭಕ್ತವಿಜಯ, ಪಾಂಡವ ಪ್ರತಾಪ ಇತ್ಯಾದಿಗಳನ್ನು ಓದುವುದರಲ್ಲಿಯೇ ಅವಳು ಕಾಲಕಳೆಯುವಳು.

ಇಂಥ ದಂಪತಿಗಳಿಗೆ ನಾಗರವಳ್ಳಿಯ ಆ ಒಂದೇ ಬೀದಿಯ ಕೊನೆಯಲ್ಲಿ ಒಂದು ಹರಕು ಮುರುಕು ಗುಡಿಸಲಿನಲ್ಲಿ ವಾಸ. ಇವರಿಗೆ ಇನ್ನೂ ಮಕ್ಕಳಿಲ್ಲ. ನಾಗರವಳ್ಳಿಯಿಂದ ಎಂಟು ಮೈಲು ದೂರವಿರುವ ಸೋಮವಾರಸಂತೆಗೆ ವಾರಕ್ಕೊಮ್ಮೆ ಮೋರೋಪಂತನು ಹೋಗುತ್ತಿದ್ದನು. ಅಲ್ಲಿ ನೆರೆಯುವ ಕೃಷಿಕ ಜನರಿಗೆ ಮೋರೋಪಂತನೆಂದರೆ ತುಂಬಾ ವಿಶ್ವಾಸ. ತಮ್ಮ ಮನೆಯ ಕಷ್ಟಗಳನ್ನು ಕುರಿತು ಆತನೊಡನೆ ಅವರು ಪ್ರಶ್ನೆ ಕೇಳುವರು. ಗ್ರಹಚಾರ ಪರಿಹಾರಕ್ಕೆ ಆತನಿಂದಲೇ ಶಾಂತಿ ಮಾಡಿಸಿ, ಯಥಾಶಕ್ತಿ ಧಾನ್ಯ, ಕಾಳು ಮುಂತಾದ ಜೀವನದ ಸಾಹಿತ್ಯಗಳನ್ನು ಆತನಿಗೆ ಕೊಡುತ್ತಿದ್ದರು. ಅವನ್ನು ಬಡ ಕೂಲಿ ಆಳುಗಳು ತಾವೇ ಹೊತ್ತು ತಂದು, ಆತನ ಮನೆಗೆ ಮುಟ್ಟಿಸುವುದೂ ಇತ್ತು. ಹೀಗೆ ವಾರಕ್ಕೊಂದು ಸಲ ಸಂಗ್ರಹಿಸಿದ ಸಾಮಗ್ರಿಗಳಿಂದ ಈ ದಂಪತಿಗಳ ಜೀವನವು ಸಾಗಬೇಕಾಗಿತ್ತು. ಉಳಿದ ಆರು ದಿನಗಳನ್ನು ಗ್ರಂಥವಾಚನದಲ್ಲಿಯೆ ಮೋರೋಪಂತನು ಕಳೆಯುತ್ತಿದ್ದನು.

ಮೇಲಿನ ಸಂಭಾಷಣೆ ನಡೆದ ಸಾಯಂಕಾಲ ಮೋರೋಪಂತನು ತನ್ನ ಗುಡಿಸಲಿನ ಕಿರುಜಗಲಿಯ ಮೇಲೆ ಕುಳಿತು ತುಕಾರಾಮ ಸಾಧುವಿನ ಅಭಂಗಗಳ ಓಲೆ ಪ್ರತಿಯನ್ನು ಓದುತ್ತಿದ್ದನು.

ಜೆ ಕಾಂ ರಂಜಲೆ ಗಾಂಜಲೆ । ತ್ಯಾಂಸೀ ಮ್ಹಣೆ ಜೋ ಆಪುಲೆ ॥
ತೋಚಿ ಸಾಧು ವೋಳಖಾವಾ । ದೇವ ತೇಥೆಂಚ ಜಾಣಾವಾ ॥
ಮೃದು ಸಬಾಹ್ಯ ನವನೀತ । ತೈಸೆ ಸಜ್ಜನಾಂಚೆ ಚಿತ್ತ ॥
ಜ್ಯಾಸಿ ಅಪಂಗಿತಾ ನಾಹಿಂ । ತ್ಯಾಸಿ ಧರಿ ಜೋ ಹೃದಯಿಂ ॥
ದಯಾ ಕರಣೆ ಜೆ ಪುತ್ರಾಸಿ । ತೋಚಿ ದಾಸ ಆಣಿ ದಾಸೀ ॥
ತುಕಾಮ್ಹಣೆ ಸಾಂಗು ಕಿತೀ । ತೋಚಿ ಭಗವಂತಾಚಿ ಮೂರ್ತಿ ॥

ಮೋರೋಪಂತನು ಈ ಅಭಂಗಗಳನ್ನು ಓದುತ್ತಿದ್ದುದು ಇದೇ ಮೊದಲನೆಯ ಸಲವಲ್ಲ. ಎಷ್ಟೋ ಸಲ ಅವನು ಓದಿದ್ದನು. ಪುನಃ ಪುನಃ ಓದಿದಷ್ಟಕ್ಕೆ ಈ ಮಾತುಗಳ ವಿಷಯದಲ್ಲಿ ಅವನಿಗೆ ಹೊಸ ವಿಚಾರಗಳು ಮೂಡುತಿದ್ದುವು. ಆದುದರಿಂದ ಬೇಸರಿಕೆ ಹುಟ್ಟಿದಾಗ

ಲಿಲ್ಲ, ಆತನು ತುಕಾರಾಮನಂಥ ಸಾಧುಸಂತರ ಪವಿತ್ರೋಕ್ತಿಗಳನ್ನು ಪಠಿಸಿ ಆನಂದಗೊಳ್ಳುತ್ತಿದ್ದನು.

ಈ ದಿನ ಸಂತೆಯ ದಿನವಾಗಿದ್ದರೂ, ಅವನು ಸಂತೆಗೆ ಹೋಗಲಿಲ್ಲ. ಮೈಯಲ್ಲಿ ಸ್ವಲ್ಪ ಆಲಸ್ಯವು ಕಂಡು ಬಂದುದರಿಂದ, ಅದನ್ನು ಸತಿಗೆ ತಿಳಿಸದೆ, ಚಿತ್ತಶಾಂತಿಗಾಗಿ ತುಕಾರಾಮನ ಅಭಂಗಗಳನ್ನು ಓದುತ್ತ, ಮನಸ್ಸಿನಲ್ಲಿ ಮಥಿಸುತ್ತ ಇದ್ದನು. ಈ ಮಥನದಲ್ಲಿ ಆತನಿಗೆ ಹೆಂಡತಿಯ ಮಾತುಗಳು ಮರೆತು ಹೋದುವು. ರಾತ್ರೆಯಾದುದೂ ಗೊತ್ತಾಗಲಿಲ್ಲ. ಕತ್ತಲಾದೊಡನೆ ಅನ್ನಪೂರ್ಣೆ ಉರಿಸಿಟ್ಟ ಚಿಕ್ಕ ಕಾಲುದೀಪದ ಬೆಳಕಿನಲ್ಲಿ ಓದುತ್ತ ಇದ್ದು, ಶ್ರೀ ಭಗವಂತನ ಮೂರ್ತಿಯು ಈ ಸಾಧುಗಳ ಹೃದಯದಲ್ಲಿ ಸಾರ್ವದಾ ನಲಿಯುತ್ತಿರುವುದರಿಂದಲೇ, ಅವರು ಸಂಸಾರದಲ್ಲಿದ್ದೂ ಸಂಸಾರಯಾತನೆಯಿಂದ ಅಲಿಪ್ತರಾಗಿದ್ದರು ಎಂಬುದನ್ನು ಚಿಂತಿಸುತ್ತ ಕುಳಿತಿದ್ದನು.

ಹೆಂಡತಿಯ ಮಾತು ಕಿವಿಗೆ ಬಿದ್ದಿತೋ ಇಲ್ಲವೋ, ಆತನ ಆ ಏಕಾಗ್ರತೆಗೆ ಭಂಗವಾಯಿತು. ಕಣ್ಣುಗಳನ್ನು ಅರಳಿಸಿ ಸತಿಯ ಕಡೆಗೆ ನೋಡಿ, ನಸುನಕ್ಕು, ಕೊನೆಯ ಮಾತುಗಳನ್ನು ಹೇಳಿ, ಪುನಃ ಓದಲಾರಂಭಿಸಿದನು.

ಅನ್ನಪೂರ್ಣೆ ತಂಬಿಗೆಯಲ್ಲಿ ನೀರು ತಂದಿಡಲು ಒಳಗೆ ಹೋದಳು. ಮೋರೋಪಂತನು ಮುಂದೆ ಓದುತ್ತ ಕುಳಿತನು. ಅಷ್ಟರಲ್ಲಿ ಯಾರೋ ಜಗಲಿ ಹತ್ತಿ ಬಂದಂತೆ ಮೋರೋಪಂತನಿಗೆ ಭಾಸವಾಯಿತು. ಮೋರೋಪಂತನು ತಲೆಯನ್ನು ಆ ಕಡೆಗೆ ತಿರುಗಿಸಿದನು. ಗಾಢಾಂಧಕಾರದ ರಾತ್ರಿಯಲ್ಲಿ, ಕಂಬಳಿ ಮುಸುಕು ಹಾಕಿದ ದೀರ್ಘಾಕಾರದ ವ್ಯಕ್ತಿಯೊಬ್ಬನು ಜಗಲಿಯನ್ನು ಹತ್ತಿ ಬಂದನು. ಮೋರೋಪಂತನಿಗೆ ಭೂತ ಪಿಶಾಚಿಗಳ ಭಯವೆಂದರೆ ಗೊತ್ತೇ ಇರಲಿಲ್ಲ. ಕಳ್ಳರಂತೂ ಆತನನ್ನು ಪೀಡಿಸುವವರೇ ಅಲ್ಲ. ಕಾರಣವಿಷ್ಟೇ. ಆತನು ಬಡವ. ಅವನಲ್ಲಿ ಏನಿದೆ ಕದಿಯುವುದಕ್ಕೆ? ಆದುದರಿಂದ ನಿರ್ಭೀತನಾದ ಮೋರೋಪಂತನು, ತನ್ನ ವಿಚಾರಸರಣಿಗೆ ತೊಡಕನ್ನುಂಟುಮಾಡಿದ ಆ ವ್ಯಕ್ತಿಯನ್ನು

ಎಸೆಯಿಕ್ಕದೆ ನೋಡಿದನು. ಅಷ್ಟರಲ್ಲಿ ಆ ವ್ಯಕ್ತಿ ಮಾರ್ಗಾಯಾಸ ದಿಂದ ತೀರಾ ಕಂಗೆಟ್ಟವನಂತೆ ಧೊಪ್ಪನೆ ಕುಳಿತುಕೊಂಡು, ಕೈಜೋಡಿಸಿ,

"ದೇವರು! ಎಂಟು ದಿನಗಳಿಂದ ಅನ್ನಾಹಾರವಿಲ್ಲದೆ ಅಲೆಯುತಿದ್ದ ಭಿಕ್ಷುವೊಬ್ಬನು, ಈ ಅಕಾಲದಲ್ಲಿ ತಮ್ಮ ಮನೆಹೊಕ್ಕಿದ್ದಾನೆ. ಗಂಟಲು ಒಣಗಿದೆ; ಕಣ್ಣುಕತ್ತಲೆ ಬರುತ್ತಿದೆ, ಕೈಕಾಲುಗಳು ಬಿದ್ದುಹೋಗಿವೆ, ಅವನ ಪ್ರಾಣವನ್ನು ಉಳಿಸಬೇಕು!" ಎಂದನು.

ಉಪವಾಸ ಬಿದ್ದವರಿಗೆ ಪರರವರ ಹೊಟ್ಟೆಯ ಗೋಳು ಗೊತ್ತು. ಮೋರೋಪಂತನು ಸ್ವಾಭಾವಿಕವಾಗಿಯೂ ಕರುಣಾರ್ದ್ರಹೃದಯನು. ಉಪವಾಸವಂತೂ ಅವನ ಮನೆಗೆ ಬರುವ ನಿತ್ಯ ಅತಿಥಿ. ಅಂದ ಮೇಲೆ ಆಗಂತುಕನ ಸ್ಥಿತಿಯನ್ನು ಕಂಡಾಗ ಅವನ ಕರುಳು ಕರಗಿದರೆ ಆಶ್ಚರ್ಯ ವೇನು?

ಮೋರೋಪಂತನು ತನ್ನ ಹೆಂಡತಿಯನ್ನು ಕರೆದು, "ಅನ್ನಪೂರ್ಣಾ! ಯಾರೋ ವಾಂಛನೊಬ್ಬನು ಈ ರಾತ್ರಿಯಲ್ಲಿ ಹಸಿದು ಬಂದಿದ್ದಾನೆ. ನನಗಂತೂ ಹಸಿವೆಯಿಲ್ಲ. ನನಗಾಗಿ ಮಾಡಿಟ್ಟ ಭಾಕರಿ ಎಲ್ಲಿ? ತಾ ಅದನ್ನು, ಒಂದು ಬಿಂದಿಗೆ ಬಿಸಿನೀರನ್ನೂ ಹೊರಗೆ ತಂದು ಕೊಡು."

**ಅನ್ನಪೂರ್ಣಾ**:—"ಅಯ್ಯೊ! ಪಾಪ! ಚೆನ್ನಾಗಿ ಹಸಿದು ಬಂದಿ ರಬಹುದು. ಅಂಥವನಿಗೆ ಒಂದು ಭಾಕರಿ ಎಲ್ಲಿಗೆ ಸಾಕು? ಇದೋ! ನನ್ನ ಪಾಲಿನ ಭಾಕರಿಯನ್ನೂ ತರುತ್ತೇನೆ! ತಿನ್ನಲಿ!" ಎಂದು ಎರಡು ಭಾಕ ರಿಗಳನ್ನೂ, ಒಂದು ಬಿಂದಿಗೆ ಬಿಸಿನೀರನ್ನೂ ತಂದು ಹೊರಗಿಟ್ಟು, ಒಳಗೆ ಹೋದಳು.

ಕಂಬಳಿ ಮುಸುಕಿನ ವ್ಯಕ್ತಿ ತನ್ನ ಕಂಬಳಿಯನ್ನು ಎಸೆದು ಆ ಬಿಸಿನೀರನ್ನು ಮೊದಲು ಸ್ವಲ್ಪವಾಗಿ ಬಾಯೊಳಗೆ ಸುರಿದುಕೊಂಡು ತುಟಿಗಳನ್ನೂ ಗಂಟಲನ್ನೂ ತೊಯಿಸಿದನು. ಅನಂತರ ಭಾಕರಿಯನ್ನು ಗಬಗಬನೆ ಕಡಿಯುತ್ತ ಅರೆಕ್ಷಣದಲ್ಲಿ ನುಂಗಿ, ತಂಬಿಗೆ ನೀರನ್ನು ಕುಡಿದು ಬಿಟ್ಟು "ಉಸ್ಸ್" ಎಂದು ಒಮ್ಮೆ ಉಸುರುಗರೆದನು. ಅವನ ಹಸಿವೆಯು ತೀರಾ ಅಣಗದಿದ್ದರೂ, ಬೆವರೂ ಕೊಳೆಯೂ ತುಂಬಿದ

ಆ ಮುಖದ ಮೇಲೆ ಸ್ವಲ್ಪ ಕಾಂತಿಯು ಬಂದಿತು. ಆಯಾಸದಿಂದ ಅರೆಮುಚ್ಚಿದ ಕಣ್ಣುಗಳು ಚೆನ್ನಾಗಿ ತೆರೆದವು. ಈ ಕಣ್ಣುಗಳಲ್ಲಿ ವಿಚಿತ್ರವಾದ ಮೋಹನಶಕ್ತಿ ಇದೆ ಎಂದು ಮೋರೋಪಂತನಿಗೆ ಕಂಡಿತು. ಮುಖದ ಮುದ್ರೆಯು ಪ್ರಫುಲ್ಲಿತವಾಗುವಷ್ಟಕ್ಕೆ ಅವನ ಅಗಲವಾದ ಎದೆ, ಚೆನ್ನಾಗಿ ಬಲಿತ ಭುಜಗಳು ನವಚೇತನವನ್ನು ಹೊಂದಿದವು. ಅವನನ್ನು ನೋಡುತ್ತಿದ್ದ ಹಾಗೆ ಮೋರೋಪಂತನಲ್ಲಿ ನೂತನ ವಿಚಾರ ತರಂಗಗಳು ತಲೆಯಿಕ್ಕಿದವು. "ಈತನು ಸಾಮಾನ್ಯ ಭಿಕ್ಷುವಲ್ಲ. ಬೆವರು ತುಂಬಿದ ಮುಖದ ಮೇಲೆ ಸಲ್ಲಕ್ಷಣಗಳೇ ಕಾಣುತ್ತಿವೆ. ಇಂಥವನಿಗೆ ಈ ದುರ್ದಶೆ ಯಾವ ಪೂರ್ವಕರ್ಮ ವಿಪಾಕದಿಂದ ಉಂಟಾಗಿರಬಹುದು?" ಎಂದು ಮೋರೋಪಂತನು ಕುತೂಹಲಚಿತ್ತನಾದನು. ಆಗಂತುಕನನ್ನು ಕರುಣೆಯಿಂದ ತುಂಬಿದ ದೃಷ್ಟಿಯಿಂದ ನೋಡುತ್ತಾ—"ಅಪ್ಪಾ! ನಿನ್ನನ್ನು ನೋಡಿದರೆ ಹುಟ್ಟು ತಿರುಕನ ಹಾಗೆ ತೋರದು. ಏನೋ ಗ್ರಹಚಾರದ ಪೀಡೆಗೆ ಸಿಲುಕಿ ಈ ಅವಸ್ಥೆಗೆ ಬಂದಿರುವಂತೆ ಕಾಣುವೆ. ನಿನ್ನ ಕಥೆಯನ್ನು ಹೇಳಲಾರೆಯಾ?"

ಈ ಮೃದುನುಡಿಗಳಿಂದ ವ್ಯಕ್ತಿಯ ಮುಖದ ಮೇಲೆ ಮುಗುಳ್ನಗೆ ಕಾಣಿಸಿತು. ಆತನು ಕೈಜೋಡಿಸಿ "ದೇವರು! ಚೆನ್ನಾಗಿ ಹೇಳಿದಿರಿ! ನನ್ನ ಪೂರ್ವಕಥೆ ವಿಚಿತ್ರವಾಗಿದೆ, ದೊಡ್ಡದಿದೆ. ಹೇಳಲು ಈಗ ಅವಕಾಶವಿಲ್ಲ. ತಮ್ಮ ಉಪಕಾರವು ನನ್ನ ತಲೆಯ ಮೇಲಿದೆ. ದಂಪತಿಗಳು ನನಗೋಸ್ಕರ ಉಪವಾಸ ಮಾಡಿದಿರಿ. ತಮ್ಮಂಥ ದಯಾಮಯರಿಗೆ ದೇವರು ಸುಖಶಾಂತಿಗಳನ್ನು ಕೊಡದೆ ಇರಲಾರನು. ತಮ್ಮನ್ನು ಇನ್ನೊಮ್ಮೆ ಕಾಣುವುದು ನನ್ನ ಅದೃಷ್ಟದಲ್ಲಿದ್ದರೆ, ನನ್ನ ಪೂರ್ವಕಥೆಯನ್ನು ಸಾಂಗವಾಗಿ ನಿವೇದಿಸುವೆನು. ಹೊತ್ತು ಮೂಡುವಷ್ಟರಲ್ಲಿ ದೂರದ ಊರಿಗೆ ಮುಟ್ಟುವ ಅವಸರದ ಕೆಲಸವಿದೆ. ಕ್ಷಮಿಸಬೇಕು" ಎಂದು ನಮಸ್ಕರಿಸಿ ಜಗಲಿಯಿಂದ ಕೆಳಗಿಳಿದು ವ್ಯಕ್ತಿಯು ಮಾಯವಾದನು.

ಅನ್ನಪೂರ್ಣೆ ಇದನ್ನೆಲ್ಲ ನೋಡುತ್ತ ಬಾಗಿಲ ಅಡ್ಡವಾಗಿ ನಿಂತಿದ್ದಳು. ಆ ವ್ಯಕ್ತಿಯು ಇಳಿದು ಹೋದೊಡನೆ, ಮೋರೋಪಂತನಿಗೆ ಆಹ್ನಿಕದ ವೇಳೆ ಮೀರಿತೆಂದು ಅನ್ನಪೂರ್ಣೆ ಎಚ್ಚರಿಸಿದಳು. ಮೋರೋ

ಪಂತನು ಕಾಲ್ತೊಳೆದು, ನಿತ್ಯ ನೈಮಿತ್ತಿಕಗಳನ್ನು ಮುಗಿಸಿ, ಒಂದಿಷ್ಟು ಬಿಸಿನೀರನ್ನು ಕುಡಿದು, ಹೊರಜಗಲಿಗೆ ಬಂದನು. ಅನ್ನಪೂರ್ಣೆ ತನ್ನ ಪತಿಯಂತೆಯೇ ಅಖಂಡ ಉಪವಾಸವನ್ನು ಮಾಡಿ, ಹೊರಜಗಲಿಗೆ ಬಂದು ಪತಿಯ ಕಾಲು ಬುಡದಲ್ಲಿ ಕುಳಿತಳು. ಇಬ್ಬರ ಮನಸ್ಸಿನಲ್ಲಿಯೂ ಆ ಅಪರಿಚಿತ ವ್ಯಕ್ತಿಯ ವಿಷಯವಾಗಿಯೇ ವಿಚಾರವು ತಲೆದೋರಿತ್ತು.

**ಮೋರೋ**—"ಕೇಳಿದೆಯಾ! ಈಗ ಬಂದವನು ಒಂದು ಕಾಲದಲ್ಲಿ ಸಂಪನ್ನನಾಗಿರಬೇಕು. ಏನು ಕಾರಣದಿಂದ ಹೀಗಾದನೋ! ವಿಧಿಯು ಅವನನ್ನು ಏಕೆ ಈ ದುರ್ದಶೆಗೆ ಇಳಿಸಿದನೋ? ಮನುಷ್ಯಾವಸ್ಥೆಯೇ ಹೀಗೆ. ಕಾಲಚಕ್ರ ತಿರುಗಿದ ಹಾಗೆ ಆ ಚಕ್ರದ ಅಂಚಿನಲ್ಲಿರುವವರು ಮೇಲೂ ಕೆಳಗೂ ತಿರುಗುತ್ತಲೇ ಇರಬೇಕು. ಇದು ವಿಧಿ ನಿಯಮ."

ಅನ್ನಪೂರ್ಣೆಗೆ ಏನು ಉತ್ತರ ಕೊಡುವುದಕ್ಕೂ ತೋಚಲಿಲ್ಲ. ಕಣ್ಣುಗಳಿಂದ ಒಂದೆರಡು ಹನಿಗಳು ತೊಟ್ಟಿಕ್ಕಿದವು; ಅವು ಆ ಬಡ ವ್ಯಕ್ತಿಗಾಗಿ. ಇದರಲ್ಲಿ ಅನ್ನಪೂರ್ಣಾದೇವಿಗೆ ತಮ್ಮ ಚಿರಸ್ಥಾಯಿಯಾಗಿದ್ದ ದಾರಿದ್ರ್ಯವು ಈಗ ಅಷ್ಟು ದೊಡ್ಡದಾಗಿ ಕಾಣಿಸಲಿಲ್ಲ. ಇತರರ ಕಷ್ಟಗಳಲ್ಲಿ ಅನುತಾಪ ಪಡುವ ನಿಸ್ವಾರ್ಥಿಗಳಿಗೆ ಸ್ವಂತ ವಿಚಾರವು ಕ್ಷುಲ್ಲಕ ಎನಿಸುತ್ತದೆ.

ಅನ್ನಪೂರ್ಣೆಯೂ, ಮೋರೋಪಂತನೂ ಕೆಲಸಮಯ ಅವಾಕ್ಕಾಗಿ ಏನೇನೋ ವಿಚಾರತರಂಗಗಳ ಸುಳಿಯಲ್ಲಿ ಸಿಲುಕಿ ತೇಕುಮುಳುಗಾದರು. ಫಕ್ಕನೆ ಅನ್ನಪೂರ್ಣೆ ಜಾಗ್ರತಳಾಗಿ "ಸ್ವಾಮಿ! ರಾತ್ರಿ ಹೊತ್ತು ಮೀರಿತು. ತಮಗೂ ಉಪವಾಸ; ದೇಹವು ಬಳಲಿರಬೇಕು. ಕೊಂಚ ವಿಶ್ರಮಿಸಬಾರದೇ?"

**ಮೋರೋಪಂತ**:—"ಏನು ವಿಶ್ರಾಮ! ಈ ಗ್ರಂಥವೂ ಈಗ ಕಂಡ ನೋಟವೂ ನನ್ನ ಮನಸ್ಸನ್ನು ವಿಹ್ವಲವಾಗಿ ಮಾಡಿವೆ. ಈಗಲೇ ನಿದ್ದೆ ಬರುವಂತಿಲ್ಲ. ತುಸು ಹೊತ್ತು ಇಲ್ಲಿ ಓದುತ್ತಾ ಇರುತ್ತೇನೆ. ನೀನು ಒಳಗೆ ಹೋಗು, ಅಗಳಿ ಹಾಕಿ ನಿದ್ದೆಮಾಡು."

ಅನ್ನಪೂರ್ಣೆಗೆ ಪತಿಯ ವಾಕ್ಯಕ್ಕೆ ಮಿಾರಿದ ವೇದವಾಕ್ಯವಿಲ್ಲ. ಅವಳು ಹಾಗೆಯೇ ಹೋಗಿ ಮಲಗಿದಳು. ಮೋರೋಪಂತನು ಅಲ್ಲೆ ಓದುತ್ತಾ ಯೋಚಿಸುತ್ತಾ ಬಿದ್ದುಕೊಂಡಿರುವಲ್ಲಿ ಜೊಂಪು ಹತ್ತಿತು. ದೀಪದೊಳಗಿನ ಎಣ್ಣೆ ಮುಗಿದು ದೀಪವು ತನ್ನಷ್ಟಕ್ಕೆ ಆರಿಹೋಗಿತ್ತು.

ಅರೆನಿದ್ದೆಯಲ್ಲಿರುವ ಮೋರೋಪಂತನಿಗೆ ತನ್ನ ತಲೆಯ ಬಳಿಯಲ್ಲಿ ಏನೋ ಮೇಲಿಂದ ಬಿದ್ದಂತೆ ಭಾಸವಾಗಿ, ಫಕ್ಕನೆ ಎಚ್ಚೆತ್ತು "ಅನ್ನಪೂರ್ಣಾ! ದೀಪ ಹಚ್ಚು. ಇಲ್ಲೇನೋ ಸದ್ದಾಯಿತು" ಎಂದು ಗಡಿಬಿಡಿಯಿಂದ ಎದ್ದು ಕುಳಿತನು. ಅನ್ನಪೂರ್ಣೆ ಜಗ್ಗನೆ ಎದ್ದು ದೀಪಹಚ್ಚಿ, ಗಾಳಿಗೆ ಅದು ಆರದಂತೆ ಕೈಯನ್ನು ಅಡ್ಡಹಿಡಿದು ಹೊರಗೆ ಬಂದಳು.

**ಮೋರೋ**:—"ಅನ್ನಪೂರ್ಣಾ! ಮಲಗಿದವನಿಗೆ ಜೊಂಪು ಹಿಡಿದದ್ದೇ ಗೊತ್ತಾಗಲಿಲ್ಲ. ನೀನು ದೀಪ ಆರಿಸಲು ಹೊರಗೆ ಬಂದೆಯಾ?"

**ಅನ್ನ**:—"ಅಯ್ಯಯ್ಯಾ! ಇದೇನು ಅನ್ನುತ್ತೀರಿ! ಉಪವಾಸ ಮಲಗಿದವರಿಗೆ ಏನೊ ಕನಸು ಕಂಡಿರಬೇಕು. ಈ ಅರ್ಧ ರಾತ್ರಿಯಲ್ಲಿ ನಾನೇಕೆ ಹೊರಗೆ ಬಂದೇನು?"

**ಮೋರೋಪಂತ**:—"ಖಂಡಿತವಾಗಿಯೂ ಕನಸಲ್ಲ. ಯಾರೋ ಮೆಟ್ಟಲು ಹತ್ತಿಬಂದ ಶಬ್ದವಾಯಿತು." ಎನ್ನುತ್ತ ತನ್ನ ತಲೆದಿಂಬಿನ ಕಡೆಗೆ ನೋಡಿ—"ಇದೇನು ಗಂಟು? ಇದನ್ನು ಇಲ್ಲಿ ಯಾರು ಎಸೆದರು?" ಎಂದು ಚೀಲದ ಬಾಯಿಯ ಗಂಟನ್ನು ಬಿಚ್ಚಿ—"ಎಲಾ! ಇದೇನು ಚೋದ್ಯ! ಇವರಲ್ಲಿ ಬಗೆಬಗೆಯ ಜವಾಹೀರುಗಳಿವೆ. ಅನ್ನಪೂರ್ಣಾ! ಈ ದಿನ ಅಖಂಡ ಏಕಾದಶಿ ಉಪವಾಸ ವ್ರತವನ್ನು ನೀನೂ ನನ್ನೊಂದಿಗೆ ಮಾಡಿದೆ. ನಾಳೆ ಈ ರತ್ನಗಳನ್ನು ಹುರಿದು ಒಗ್ಗರಣೆ ಹಾಕು!"

**ಅನ್ನಪೂರ್ಣೆ**:—(ಚಕಿತಳಾಗಿ) "ಇದೇನು ವಿಚಿತ್ರ! ಇದು ಆ ಭಿಕ್ಷುವಿನ ಚಮತ್ಕಾರವೇ? ಈ ಹರಕು ಚೀಲದಲ್ಲಿ ಇಂಥ ರತ್ನಗಳು ಎಲ್ಲಿಂದ ಬಂದವು?"

**ಮೋರೋಪಂತ**:—(ಸ್ವಲ್ಪ ಆಲೋಚಿಸಿ)—"ಅನ್ನಪೂರ್ಣಾ! ಆ ಭಿಕ್ಷು ಭಿಕ್ಷುವಲ್ಲವೆಂದು ನಾನು ಆಗಲೇ ನಿನಗೆ ಹೇಳಿದೆ. ಅವನು ಸಾಮಾನ್ಯ ಪುರುಷನಲ್ಲವೆಂದು ನನಗೆ ಹೊಳೆದಿತ್ತು. ತನ್ನ ಪರಿಚಯು ವನ್ನು ಇನ್ನೊಮ್ಮೆ ಬಂದಾಗ ನಮಗೆ ಮಾಡಿಸುತ್ತೇನೆಂದು ಆತನು ಹೇಳಿಲ್ಲವೆ? ಇದು ಆತನದೇ ಕೃತ್ಯವಾಗಿರಬೇಕು. ಆತನು ಛದ್ಮ ವೇಷದಿಂದ ಬಂದ ಯಾವನೋ ಮಹಾ ಪುರುಷನು. ಹೇಗಿದ್ದರೂ ಈ ರತ್ನಗಳನ್ನು ಇಟ್ಟುಕೊಂಡು ಈ ಹಳ್ಳಿಗಾಡಿನಲ್ಲಿ ಇರಲು ಸಾಧ್ಯವಿಲ್ಲ. ನಾಳೆಯೇ ಪೂನೆಗೆ ನಾವು ಹೊರಡೋಣ. ದೇವರು ಕೊಟ್ಟದ್ದನ್ನು ಸುಖವಾಗಿ ವಿನಿಯೋಗಿಸೋಣ. ಈ ಚೀಲವನ್ನು ಒಳಗೆ ಒಯ್ಯಿದು."

ಇಬ್ಬರಿಗೂ ಆ ಮೇಲೆ ನಿದ್ರೆಹತ್ತಲಿಲ್ಲ. ಬಡತನವಿದ್ದಾಗ ಸುಖನಿದ್ರೆ ತನ್ನಂತೆ ಹತ್ತುತ್ತದೆ. ಸಂಪತ್ತು ಬಂದರೆ ಕರೆದರೂ ನಿದ್ರೆ ಹತ್ತಿರ ಸುಳಿವುದಿಲ್ಲ. ಏಕೆ? ಅದರೊಡನೆ ವಿಪತ್ತು ಸಿದ್ಧವಾಗಿಯೇ ಇದೆ. ಸಂಪತ್ತನ್ನು ಯಾರಾದರೂ ಕಿತ್ತುಕೊಂಡಾರು ಎಂಬ ಭಯ ವೂ ಸಂಶಯವೂ ನಮ್ಮನ್ನು ಸೇರಿಕೊಳ್ಳುವಾಗ ನಮಗೆ ಶಾಂತಿ ಎಲ್ಲಿ? ಸುಖನಿದ್ರೆ ಎತ್ತಣದು?

## ಎರಡನೆಯ ಅಧ್ಯಾಯ

## ರತ್ನಮ್ಮನ ಖಾನಾವಳಿ (ಹೋಟಲು)

ಮೋರೋಪಂತನನ್ನೂ, ಅನ್ನಪೂರ್ಣಾ ಬಾಯಿಯನ್ನೂ ಪೂನೆಗೆ ಕಳುಹಿಸಿ ವಾಚಕರು ನಮ್ಮೊಂದಿಗೆ ಸಾಂಗಲಿಗೆ ಪ್ರಯಾಣ ಮಾಡ ಬೇಕಾಗುವುದು. ಸಾಂಗಲಿಯು ದೊಡ್ಡ ಊರು. ಮರಾಠರ ಪ್ರಾಬಲ್ಯದ ಕಾಲದಲ್ಲಿ ತಲೆ ಎತ್ತಿದ ಈ ಊರು, ಹತ್ತೆಂಟು ಬೀದಿ ಗಳಿಂದಲೂ, ಮುನ್ನೂರು ನಾನ್ನೂರು ಮನೆಗಳಿಂದಲೂ ಕೂಡಿ ಸಂಪತ್ತಿ ನಿಂದ ಮೆರೆಯುತ್ತಿತ್ತು. ವ್ಯಾಪಾರದ ಮಳಿಗೆಗಳೂ, ಒಂದೆರಡು, ದೊಡ್ಡ ದೇವಸ್ಥಾನಗಳೂ, ತುರುಕರ ಒಂದೆರಡು ಮಸಜೀದಿಗಳೂ,

ಎರಡು ಅಂತಸ್ತಿನ ಹತ್ತಿಪ್ಪತ್ತು ಮನೆಗಳೂ ಇದ್ದು, ಅಚ್ಚುಕಟ್ಟಾಗಿ ರಚಿತ ವಾಗಿತ್ತು. ಈ ಊರಿನ ಸುತ್ತಲೂ, ಊರಿನ ರಕ್ಷಣೆಗಾಗಿ ಎತ್ತರವೂ, ಅಗಲವೂ, ಆದ ಒಂದು ಗೋಡೆ; ಗೋಡೆಯ ಸುತ್ತಲೂ ನೀರು ತುಂಬಿದ ಅಗಳು; ಊರಿನ ಪೂರ್ವ ಭಾಗದಲ್ಲಿ ಚಿಕ್ಕದೊಂದು ಗುಡ್ಡ; ಈ ಗುಡ್ಡವು ಪಶ್ಚಿಮ ಘಟ್ಟಗಳ ಒಂದು ಶಾಖೆಯಾಗಿದ್ದುದರಿಂದ, ಕಾಡು ಗಳಿಂದ ತುಂಬಿತ್ತು. ಈ ಊರಿನಿಂದ ಸುಮಾರು ಅರ್ಧ ಮೈಲು ದೂರದಲ್ಲಿ, ಸುಂದರವಾದ ಅರಮನೆಯಂತಿರುವ ಒಂದು ದೊಡ್ಡ ಮನೆಯು ಈ ಸಮಯದಲ್ಲಿ ಕುಸಿದು ಬಿದ್ದಿದ್ದು, ಅದರ ಭಗ್ನಾವಶೇಷ ಗಳು ಸಾಂಗಲಿಯ ಊರಿನ ಜನರಿಗೆ ಆ ಅರಮನೆಯ ವಿನಾಶದ ಭಯಂಕರ ಸಮಾಚಾರವನ್ನು ಆಗಾಗ ಸ್ಮರಣೆಗೆ ತರುವಂತಿದ್ದುವು. ಈ ಅರಮನೆಯು ಯಜ್ಞೇಶ್ವರನಿಗೆ ಹೇಗೆ ಆಹುತಿಯಾಯಿತು ಎಂಬು ದನ್ನು ಮುಂದೆ ಹೇಳಲಿರುವೆವು.

ಈ ಹಾಳುಬಿದ್ದ ಅರಮನೆಯನ್ನು ಬಿಟ್ಟು, ಊರಿನ ಉಕ್ಕಡವನ್ನು ಪ್ರವೇಶಿಸಿ ನಾಲ್ಕು ಹೆಜ್ಜೆ ನಮ್ಮೊಂದಿಗೆ ಮುಂದೆ ಬನ್ನಿರಿ. ಅಲ್ಲಿ ರಸ್ತೆಯ ಒಂದು ಮಗ್ಗುಲಲ್ಲಿ ಚಿಕ್ಕದೊಂದು ಮನೆ. "ರತ್ನಮ್ಮನ ಹೋಟಲು (ಖಾನಾವಳಿ) ಎಲ್ಲಿದೆ?" ಎಂದು ಅಲ್ಲಿ ಯಾರೊಡನೆ ವಿಚಾರಿಸಿದರೂ ಈ ಮನೆಯನ್ನು ಸುಲಭವಾಗಿ ತೋರಿಸುತ್ತಿದ್ದರು. ಪ್ರಸ್ತುತ ಸಂದ ರ್ಭದಲ್ಲಿ, ಸುಮಾರು ನಡುಪ್ರಾಯ ದಾಟಿದ ಒಬ್ಬ ಮನುಷ್ಯನು, ಈ ಮನೆಯ ಜಗಲಿಯ ಮೇಲೆ ಕುಳಿತು, ಹುಕ್ಕೆಯನ್ನು ಸೇದುತ್ತಾ, ಕೆಮ್ಮುತ್ತಾ, "ರಾಮ, ರಾಮ!" ಎನ್ನುತ್ತ ಗೋಡೆಗೆ ಒರಗಿದ್ದನು. ಇವನ ಕೆಮ್ಮನ್ನು ಕೇಳಿಕೊಂಡು ಒಳಗಿನಿಂದ ದಿಟ್ಟೆಯಾದ ಹೆಂಗಸೊಬ್ಬಳು ಛಕ್ಕನೇ ಹೊರಗೆ ತಲೆಯನ್ನು ಚಾಚಿ—

"ಏನಿರೇ, ಇನ್ನೂ ಪೇಟೆಯ ಕಡೆಗೆ ಹೊರಡಲಿಲ್ಲ? ಹೊರಡುವ ಯೋಚನೆ ಇಲ್ಲವೇ? ಹುಕ್ಕೆಯ ಹೊಗೆಯನ್ನೇ ನೋಡುತ್ತ ಕುಳಿತರೆ, ನಮ್ಮ ಒಲೆಯ ಹೊಗೆ ನೊಂದೀತಲ್ಲವೆ?"

ಈ ಮಾತುಗಳು ಕಿವಿಗೆ ಬಿದ್ದೊಡನೆ, ಆ ಮನುಷ್ಯನು ಜಗ್ಗನೆ ಎದ್ದು, ಬೆಚ್ಚಿಬಿದ್ದವನಂತೆ ಬಿರಬಿರನೆ ನೋಡುತ್ತಾ "ಇದೊ, ಹೊರಟೆ" ಎಂದು ತಲೆ ತುರಿಸತೊಡಗಿದನು.

ಆಗ ಹೆಂಗಸು, "ಏನು! ತಲೆ ತುರಿಸುತ್ತಾ ನಿಂತಿದ್ದೀರಿ! ತರಕಾರಿ ಬೇಳೆಕಾಳು ತಾರದಿದ್ದರೆ, ಬಂದ ಜನರಿಗೆ ಏನು ಬಡಿಸಲಿ?" ಎಂದು ಸೊಂಟದ ಮೇಲೆ ಕೈಯೂರಿ, ಜಗಲಿಗೆ ಬಂದು ಜಬರಿಸಿದಳು. ಇವರಿಬ್ಬರು ದಂಪತಿಗಳು; ಆದರೆ ಗಂಡನ ಹೆಸರು ಗಂಗಾರಾಮನೆಂದು ಆ ಪುಂಬಿದ ಊರಿನಲ್ಲಿ ತಿಳಿದವರೆ ಬಹಳ ಕಡಿಮೆ. ಎಲ್ಲರೂ "ರತ್ನಾವಳಿಯ ಖಾನಾವಳಿ" ಎಂದು ಆ ಹೊಟೆಲಿಗೆ ಹೆಸರಿಟ್ಟಿದ್ದರಲ್ಲದೆ, ಅವಳಿಗೊಬ್ಬ ಗಂಡ ಇದ್ದಾನೆ ಎಂಬುದೇ ಬಹು ಜನಕ್ಕೆ ತಿಳಿಯದು. ಹೆಂಡತಿಯ ಗದರಿಕೆಯ ಮಾತುಗಳನ್ನು ಕೇಳಿದಾಗ, ಗಂಗಾರಾಮನು ಸ್ವಲ್ಪ ವಿನೋದ ಮಾಡಿ ಅವಳ ಸಿಟ್ಟೆಳಿಸ ಬೇಕೆಂದು ಓರೆ ದೃಷ್ಟಿಯಿಂದ ಅವಳ ಕಡೆಗೆ ನೋಡುತ್ತ "ಏನೇ! ನಿನಗೆ ನನಗಿಂತಲೂ ಗಿರಾಕಿಗಳ ಸುಖದುಃಖ ಹೆಚ್ಚು" ಎಂದು ನಸು ನಕ್ಕನು. ಆಗ ರತ್ನಾಬಾಯಿ ಹುಬ್ಬುಗಂಟಿಕ್ಕಿ ತಲೆದೂಗುತ್ತಾ "ಹೂಂ! ಹೂಂ! ಗಿರಾಕಿಗಳು ಸರಾಗವಾಗಿ ಬಂದರೇ ನಮ್ಮ ಹೊಟ್ಟೆಪಾಡು, ಇಲ್ಲವಾದರೆ—

**ಗಂಗಾರಾಮ**:—ಇಲ್ಲವಾದರೇನು? ನಾನೇನು ಉಪವಾಸ ಬಿದ್ದೇನೇ? ಹಾಗೆ ತಿಳಿದಿಯಾ!

**ರತ್ನಾ**:—ಉಪವಾಸವೆ ಸರಿ! ಸೋಮಾರಿಯಾಗಿ, ಜಗಲಿಯ ಮೇಲೆ ಹಗಲೂ ರಾತ್ರಿ ಹುಕ್ಕೆ ಸೇದುತ್ತಾ ಕುಳಿತುಕೊಳ್ಳಿ; ನಿಮಗೆ ಯಾರೂ ಕರೆದು ಅನ್ನ ಹಾಕಿಯಾರು!

**ಗಂಗಾರಾಮ**:—ಓಹೋ! ಹಾಗೋ? ಸಾಕು, ಬಿಡು, ನೀನು ಮೊದಲಿನಂತೆಯೇ ಅಡಿಗೆಯ ಕೆಲಸದಲ್ಲಿಯೇ ಇದ್ದಿದ್ದರೆ, ನನಗೆ ಊಟ ತಿಂಡಿಗೇನೂ ಕಡಿಮೆಯೇ ಇದ್ದಿಲ್ಲ. ಅದನ್ನು ಬಿಟ್ಟು, ನಿನ್ನ ಕೈ ಹಿಡಿದಿದ್ದಕ್ಕೆ ಇದೇ ಫಲ--ಒಂದು ದಿನವೂ ಒಳ್ಳೇ ತಿಂಡಿ ಇಲ್ಲ. ಕಣ್ಣಿಂದ ಕೂಡಾ ನೋಡಿಲ್ಲ. ಅವೆಲ್ಲಾ ಬಂದ ಗಿರಾಕಿಗಳ ಪಾಲು. ಹಳಸಿದ ಅನ್ನ, ಉಪ್ಪಿನಕಾಯಿ, ಮಜ್ಜಿಗೆ ನೀರು ಇವೇ ಈಗ ನನ್ನ ಹಣೆಯಲ್ಲಿ ಬರೆದದ್ದು.

**ರತ್ನಾ**:—ಹೌದು; ಗಿರಾಕಿಗಳ ಹೊಟ್ಟೆ ತಣಿದರೆ ನಮ್ಮ ಸಂಸಾರ. ಇಲ್ಲವಾದರೆ, ಇಷ್ಟು ಹೊತ್ತಿಗೆ ಮನೆ ಮಠ ಹೋಗಿ ಮೈದಾನಾಗುತಿತ್ತು;

**ಗಂಗಾ:**— ಈಗ ಮಾತ್ರ ಮೈ—ದಾನವಲ್ಲವ್ರೋ? ನೀನೇ ನೋಡು,— ಈ ಮುಗುಳು, ಈ ಸರ, ಈ ಮೂಗುತಿ, ಈ ಬಳೆ ಇವೆಲ್ಲಾ ಸುಮ್ಮನೆ ಬಂತೇ? ಬರುತ್ತವೆಯೇ?

**ರತ್ನಾ:**—(ತನ್ನ ಮೈಯನ್ನೇ ನೋಡಿ ತುಸು ಮೈಯಾರಟಿಂದ) "ಏನರಿ! ನನ್ನ ಮೈಮೇಲೆ ಚಿನ್ನ ಬೆಳ್ಳಿ ಒಡವೆ ವಸ್ತು ಇದ್ದರೆ, ಆ ಗೌರವ ಯಾರಿಗೆ? ನಿಮಗಲ್ಲವೆ? ಅಷ್ಟು ತಿಳಿಯದೆ?" ಎಂದು ಕಡೆಗಣ್ಣ ನೋಟವನ್ನು ಒಮ್ಮೆ ಬೀರಿದಳು. ಆದರೆ ಈ ಬಾಣಗಳು ಗಂಗಾರಾಮನ ಕಲ್ಲೆದೆಯನ್ನು ಭೇದಿಸಲಿಲ್ಲ.

**ಗಂಗಾ:**— ಸರಿ! ಸರಿ! ನನಗೆ ನಿನ್ನ ಈ ಭೂಷಣದ ಮಾತೂ ಬೇಡ, ನಿನ್ನ ಬಿರುನುಡಿಗಳ ಏಟೂ ಬೇಡ. ಎಲ್ಲಾದರೂ ದೇಶಾಂತರ ಹೋಗಿ ಬಿಡೋಣ, ಎನಿಸುತ್ತಿದೆ.

ರತ್ನಮ್ಮ ತನ್ನ ಗಂಡ ರೇಗಿದ ಎಂಬುದನ್ನು ತಿಳಿದಳು. ಆದರೆ ತನ್ನ ಒಲುಪು ಒಯ್ಯಾರದ ಕಂತೆಯನ್ನು ಬಿಚ್ಚಿದರೆ, ಅದರೊಳಗೆ ಗಂಗಾರಾಮನನ್ನೂ ಮಂತ್ರಿಸಿ ಕೂಳ್ಳಿರಿಸುವ ಸಾಮರ್ಥ್ಯ ಅವಳಲ್ಲಿತ್ತು. ಇಂಥ ಬಿಟ್ಟಿಚಾಕರಿಯ ಆಳು ಬರೇ ಎರಡು ಹೊತ್ತಿನ ಊಟಕ್ಕೆ ಸಿಕ್ಕನೆಂದು ಅವಳಿಗೆ ಚೆನ್ನಾಗಿ ಗೊತ್ತು. ಒಡನೆ ಅವಳು ನಸುನಗುತ್ತ ಪ್ರಣಯದೃಷ್ಟಿಯನ್ನು ಆತನ ಕಡೆಗೆ ಬೀರಿದಂತೆ ನಟಿಸಿ—"ದೂರವಾದರೂ, ಹೋಗುವುದೆಲ್ಲಿಗೆ? ಈ ಪ್ರಾಯದಲ್ಲಿ, ಕಾಲಿಗೊಂದು ಮುಳ್ಳೇ ಚುಚ್ಚಿತೆನ್ನಿ. ನೋಡುವವರು ಯಾರು? ಅದೆಲ್ಲ ವೇದಾಂತ ಕಟ್ಟಿಡಿ. ಸುಮ್ಮನೆ ಹೊತ್ತು ಮಾಡ ಬೇಡಿ. ಸಂತೆಗೆ ಹೋಗಿ, ಸಾಮಾನನ್ನು ತನ್ನಿ. ಅಡಿಗೆಯ ಹೊತ್ತು ಮೀರಿತು. ಹೊರಗೆ ಹೋಗಿ. ಇನ್ನೂ ಸಾವಕಾಶ ಮಾಡಬೇಡಿ. ದಾರಿಯಲ್ಲಿ ಯಾರಾದರೂ ಸಿಕ್ಕಿಯಾರು. ಒಣಹರಟೆ ಕೊಚ್ಚುತ್ತಾ ನಿಲ್ಲಬೇಡಿ" ಎಂದು ಗಂಡನ ಬೆನ್ನು ಸವರುತ್ತಾ ಕುಕ್ಕೆಯನ್ನೂ ದುಡ್ಡನ್ನೂ ಆತನ ಕೈಗೆ ಕೊಟ್ಟಳು.

ಗಂಗಾರಾಮನು "ಹೂಂ, ಹೂಂ" ಎನ್ನುತ್ತಾ ಮೆಲ್ಲನೆ ಬೀದಿಗೆ ಇಳಿದು ಇನ್ನೂ ನಾಲ್ಕು ಹೆಜ್ಜೆ ಇಟ್ಟಿಲ್ಲ, ಅಷ್ಟರಲ್ಲಿ ಯಾರೊ ಒಬ್ಬರು ಅವನಿಗೆ ಗಂಟುಬಿದ್ದರು. "ಸ್ವಾಮಿ!" ಅಂದರು. ಮಾತಿಲ್ಲ.

“ಅಯ್ಯಾ!” ಅಂದರು. ಮಾತಿಲ್ಲ. “ಇಲ್ಲಿ ಕಾಣುವುದು ಗಂಗಾರಾಮನ ಮನೆಯೋ?” ಎಂದರು. ಗಂಗಾರಾಮನು ಯಾರೂ ಕೇಳಿದರೂ “ಖಾನಾವಳಿ” ತನ್ನದೆಂದು ಹೇಳುತ್ತಿರಲಿಲ್ಲ. ತನಗೂ ರತ್ನಮ್ಮನಿಗೂ ಇರುವ ಸಂಬಂಧವನ್ನು ಬಹಿರಂಗವಾಗಿ ಹೇಳಿಕೊಳ್ಳಲಿಕ್ಕೆ ಅವನು ಯಾವಾಗಲೂ ಸಿದ್ಧನಲ್ಲ. ಆದರೆ ಈಗ ಕೇಳಿದ ಮನುಷ್ಯ ಸಾಮಾನ್ಯನಲ್ಲ; ಯಾರೋ ದೊಡ್ಡ ಮನುಷ್ಯ ಎಂದು ಅವನಿಗೆ ಭಾಸವಾಯಿತು. ಧನಿಕರಾದ ಗಿರಾಕಿ ಬಂದರೆ ರತ್ನಾಬಾಯಿಗೆ ತುಂಬಾ ಸಂತೋಷ ಎಂದು ಅವನಿಗೆ ಗೊತ್ತು. ಆದರೂ ಅವನು ಅದಕ್ಕೂ ಫಕ್ಕನೆ ಉತ್ತರವನ್ನು ಕೊಡದೆ, ರೆಪ್ಪೆ ಮುಚ್ಚದೆ, ಆ ದೃಢಕಾಯನಾದ ವ್ಯಕ್ತಿಯನ್ನೇ ನೋಡುತ್ತ ನಿಂತನು. ವ್ಯಕ್ತಿ ಆಜಾನುಬಾಹು; ಆಕಾರದಲ್ಲಿ ದೀರ್ಘ, ಅಲ್ಲದೆ, ಅಪೂರ್ವವಾದ ವರ್ಚಸ್ಸಿನಿಂದ ಕೂಡಿದವನಾಗಿದ್ದು ವಿಶಾಲವಾದ ಅವನ ಕಣ್ಣುಗಳು ಚಿತ್ತಾಕರ್ಷಕವಾಗಿದ್ದವು. ಅವನು ಮೈಗೆ ಬಿಳಿ ಉದ್ದವಾದ ನಿಲುವಂಗಿಯನ್ನು ಅದರ ಮೇಲೆ ಅರಸಿನ ಬಣ್ಣದ, ಮತ್ತು ಕೆತ್ತನೆ ಅಂಚುಳ್ಳ ಶಾಲನ್ನು ಸುತ್ತಿಕೊಂಡಿದ್ದನು. ತಲೆಗೆ ಜರಿಯ ಅಂಚಿನ ಪಾಗನ್ನು ತೊಟ್ಟುಕೊಂಡಿದ್ದನು; ಶುಭ್ರವಾದ ಜರಿ ಅಂಚಿನ ಧೋತ್ರವನ್ನು ಉಟ್ಟಿದ್ದನು. ಕೈಯಲ್ಲಿ ಉದ್ದವಾದ ಬೆಳ್ಳಿಯ ಹಿಡಿಯುಳ್ಳ ಬೆತ್ತವನ್ನು ಹಿಡಿದು ನೆಲಕ್ಕೆ ಊರಿದ್ದನು. ಪಾದಗಳಲ್ಲಿ ಮೆತ್ತಗಾದ ಪೂನೆಯ ಪಾಪೋಸುಗಳನ್ನು ಮೆಟ್ಟಿದ್ದನು. ಅವನ ವಯಸ್ಸು ಸುಮಾರು ಮೂವತ್ತೈದು ಅಥವಾ ನಾಲ್ವತ್ತರ ಒಳಗಿರಬಹುದು. ಈ ವ್ಯಕ್ತಿಯು ಚಕಿತನಾದ ಗಂಗಾರಾಮನಿಗೆ ತನ್ನ ಪರಿಚಯವನ್ನು ಮಾಡಿ ಕೊಡುವುದಕ್ಕಾಗಿ “ನನ್ನ ಹೆಸರು ಪರಶುರಾಮ ದೀಕ್ಷಿತ. ನಾನು ಪೂನೆಯ ಒಬ್ಬ ಬ್ರಾಹ್ಮಣ. ಇಲ್ಲಿ ಗಂಗಾರಾಮನ ಮನೆ ಹುಡುಕುತ್ತಾ ಬಂದೆನು” ಎಂದು ನಸುನಗುತ್ತ ಹೇಳಿದನು. ಗಂಗಾರಾಮನು ಆ ಮನೆಯ ಕಡೆ ಬೆರಳು ತೋರಿಸಿ ಮರಳಿ ಸುಮ್ಮಗಾದನು.

**ಪರಶು**:— ಗಂಗಾರಾಮನು ಮನೆಯಲ್ಲಿ ಇರಬಹುದೇ?

**ಗಂಗಾರಾಮ**:— ಇಲ್ಲ, ಹೊರಗೆ ಹೋಗಿದ್ದಾರೆ. ಆದರೆ ನೀವು ಊಟಕ್ಕೆ ಬಂದವರೋ? ಹಾಗಿದ್ದರೆ, ಗಂಗಾರಾಮನ ಹೆಂಡತಿ ಮನೆ

ಯಲ್ಲಿಯೆ ಇದ್ದಾಳೆ. ನೆಟ್ಟಗೆ ಹೋಗಿ. ನೀವು ದುಡ್ಡು ಕೊಟ್ಟರೆ ಅವಳು ಚಲೋ ಊಟವೂ ಹಾಕುತ್ತಾಳೆ. ಚೆನ್ನಾಗಿ ಉಪಚಾರವೂ ಮಾಡುತ್ತಾಳೆ.

**ಪರಶು**:—(ನಸುನಕ್ಕು)—"ಇಲ್ಲ; ಇಲ್ಲ; ನಾನು ಊಟಕ್ಕೆ ಬರಲಿಲ್ಲ. ಗಂಗಾರಾಮನ ಹತ್ತರ ಕೆಲಸವಿತ್ತು. ವಿಶೇಷ ಕೆಲಸ ವದು, ಅವನು ಮನೆಯಲ್ಲಿ ಇಲ್ಲದಿದ್ದರೆ ಇನ್ನೊಮ್ಮೆ ಬಂದು ಮಾತಾಡಿ ದರೆ ಸರಿ" ಎಂದನು.

ಗಂಗಾರಾಮನು ಅದುವರೆಗೂ ತನ್ನನ್ನು ಮಾತನಾಡಿಸಿದವರೆ ಇಲ್ಲ, ಅಂಥವನೊಡನೆ ಈ ದೊಡ್ಡ ಗೃಹಸ್ಥನಿಗೆ ಕೆಲಸವೇನಿರಬಹುದೊ ಎಂದು ಒಮ್ಮೆಗೇ ವಿಚಾರದಲ್ಲಿ ಬಿದ್ದನು. ಆದರೆ ಅಡಿಗೆ ಕೆಲಸಕ್ಕೆ ತನ್ನನ್ನು ಕರೆಯ ಬಂದುದಾದರೆ, ಇಂಥವರ ಮನೆಯಲ್ಲಿ ತನಗೆ ತಿಂಡಿಯ ಉಪಚಾರಕ್ಕೆ ಕಡಿಮೆಯಾಗದು ಎಂದು ನೆನೆಸಿ,—"ಸ್ವಾಮಿಾ! ಗಂಗಾರಾಮನೆಂದರೆ ನಾನೇ, ಪಾಕಶಾಸ್ತ್ರಪಂಡಿತನೆಂದರೂ ನಾನೇ. ನನ್ನ ಕೈಪರೀಕ್ಷೆ ನೋಡಬಹುದು. ಆದರೆ ಇಲ್ಲಿ ನಿಂತು ಮಾತ ನಾಡಲೊಲ್ಲೆ. ನಮ್ಮಾಕೆ ನೋಡಿದರೆ ನಾನು ರಸ್ತೆಯಲ್ಲಿ ಹರಟೆ ಕೊಚ್ಚುತ್ತಿದ್ದೇನೆಂದು ಗದ್ದಲ ಹಚ್ಚುವಳು. ತುಸು, ಆ ಕಡೆಗೆ, ಮುಂದೆ ಸರಿಯಿರಿ. ಅಲ್ಲಿ ಸಾಲುಮರಗಳ ಅಡ್ಡನಿಂತು ಸಾವಕಾಶವಾಗಿ ಮಾತನಾಡುವ" ಎಂದು ಮುಂದಕ್ಕೆ ಹೆಜ್ಜೆ ಇಟ್ಟನು. ಅವರಿಬ್ಬರೂ ಮರಗಳ ನೆರಳನ್ನು ಸೇರಿದರು.

**ಪರಶುರಾಮ**:—ಗಂಗಾರಾಮ! ನೀನು ಈ ಊರಿನ ಜಗನ್ನಾಥ ಪಂತರನ್ನು ಬಲ್ಲೆಯ?

**ಗಂಗಾರಾಮ**:—ಹೌದು, ಅವರಲ್ಲಿಯೇ ನನಗೆ ಪಾಕಶಾಸ್ತ್ರದ ಓನಾಮದ ಉಪದೇಶ.

**ಪರಶುರಾಮ**:—ಅವರು ಮೊದಲಿದ್ದ ಮನೆಯಲ್ಲಿ ಈಗಿಲ್ಲವೆ?

**ಗಂಗಾರಾಮ**:—ಇಲ್ಲ; ಅವರು ಎಂದೋ ಅಲ್ಲಿಂದ ಒಕ್ಕಲು ಹೋಗಿರುವರು. ಇನ್ನು ಬರುವ ಹಾಗಿಲ್ಲ.

**ಪರಶುರಾಮು**:—ಹಾಗೆಂದರೇನು?

**ಗಂಗಾರಾಮು**:—"ಅವರು ಈ ಲೋಕವನ್ನೇ ಬಿಟ್ಟು ತೆರಳಿದರು." ಪರಶುರಾಮ ದೀಕ್ಷಿತನ ಮುಖ ಬೆವರಿತು, ವಿವರ್ಣವಾಯಿತು. ಜೇಬಿನಲ್ಲಿರುವ ಕೈವಸ್ತ್ರದಿಂದ ಮುಖವನ್ನು ಒರಸುವಂತೆ ನಟಿಸಿ "ಅವರು ಗತಿಸಿ ಎಷ್ಟು ಕಾಲವಾಯಿತು?" ಎಂದನು.

**ಗಂಗಾರಾಮು**:—ಸುಮಾರು ಹತ್ತು ಹದಿನೈದು ವರ್ಷ.

**ಪರಶುರಾಮು**:—ಅವರ ಅವಸಾನ ಕಾಲದಲ್ಲಿ ನೀನು ಅವರಲ್ಲಿಯೇ ಇದ್ದಿಯಾ?

**ಗಂಗಾರಾಮು**:—ಇಲ್ಲದೆ ಏನು? ಅವರ ಒಬ್ಬನೆ ಮಗನು ಆಗ ಮನೆಯಲ್ಲಿ ಇರಲಿಲ್ಲ. ಅವರ ಬಾಯೊಳಗೆ ಭಾಗೀರಥಿಯನ್ನು ಸುರಿದು ನಾನೇ ಅವರಿಗೆ ವೈತರಣಿಯನ್ನು ದಾಟಿಸಬೇಕಾಯಿತು.

ಪರಶುರಾಮ ದೀಕ್ಷಿತನ ಕಂಠವು ಗದ್ಗದಿತವಾಯಿತು. ಕಣ್ಣುಗಳಿಂದ ನೀರು ತೊಟ್ಟಿಕ್ಕಿತು. ಒಮ್ಮೆ ನಿಟ್ಟುಸುರು ಬಿಟ್ಟು ಕಣ್ಣುಗಳನ್ನು ಒರಸಿಕೊಂಡ ಮೇಲೆ "ಗಂಗಾರಾಮು, ಅವರ ಒಬ್ಬನೇ ಮಗ, ಎಲ್ಲಿಗೆ ಹೋಗಿದ್ದ ಆಗ?" ಎಂದು ಕೇಳಿದನು.

**ಗಂಗಾರಾಮು**:—ಅದೋ, ದೊಡ್ಡ ಕಥೆ—

**ಪರಶುರಾಮು**:—ಅಂಥ ಕಥೆ ಏನು?

**ಗಂಗಾರಾಮು**:—ಬಹಳ ದುಃಖಕರವಾದ ಕಥೆ. ಈಗ ಹೇಳಲು ಸಮಯವಿಲ್ಲ. ನನಗೆ ಸಂತೆಗೆ ಹೋಗಬೇಕು. ಇಲ್ಲವಾದರೆ ನಮ್ಮಾಕೆಯ ಕೈಯಿಂದ ಸಹಸ್ರನಾಮೋಚ್ಚಾರಣೆ ಕೇಳಬೇಕಾದೀತು.

**ಪರಶುರಾಮು**:—(ತನ್ನ ಕಂಕುಳಲ್ಲಿರುವ ಒಂದು ಚಿಕ್ಕ ಪೆಟ್ಟಿಗೆಯನ್ನು ಈಚೆಗೆ ಸೆಳೆದು)—"ಜಗನ್ನಾಥ ಪಂತರ ಸಮಾಚಾರವನ್ನು, ಗಂಗಾರಾಮುನಿಂದ ಗೊತ್ತು ಹಚ್ಚಿ, ಈ ಪೆಟ್ಟಿಗೆಯನ್ನು ಜಗನ್ನಾಥ ಪಂತರಿಗೆ ಒಪ್ಪಿಸಿಬಿಡಬೇಕೆಂದು ದ್ವೀಪಾಂತರದ ಕೈದಿಯೊಬ್ಬನು ನನ್ನೊಡನೆ ಕೊಟ್ಟನು."

ದ್ವೀಪಾಂತರದ ಕೈದಿಯ ಮಾತನ್ನು ಎತ್ತಿದೊಡನೆ ಜಗನ್ನಾಥ ಪಂತನ ಕಾರಾಗೃಹವಾಸಿಯಾದ ಒಬ್ಬನೇ ಮಗನ ವಿಚಾರವು ಗಂಗಾ

ರಾಮನ ಸ್ಮರಣೆಗೆ ಬಂತು. "ನಾನೇ ಆ ಜಗನ್ನಾಥ ಪಂತನೆಂದು ಹೇಳಿ, ಈ ಅಪರಿಚಿತನಾದ ವ್ಯಕ್ತಿಯಿಂದ ಈ ಪೆಟ್ಟಿಗೆಯನ್ನು ದೋಚಿಕೊಳ್ಳ ಬಹುದಿತ್ತಲ್ಲವೇ? ನಾನೆಂಥ ಮೂಢ! ನನ್ನಾಕೆಯ ಮುಂದೆ ಈ ಮಾತು ಕಥೆ ನಡೆದಿದ್ದರೆ ಅವಳೇನಾದರೂ ತಕ್ಕ ಹಂಚಿಕೆಯನ್ನು ಹೂಡು ತಿದ್ದಳು. ಈಗೇನು ಮಾಡಲಿ!" ಎಂದು ಸ್ವಲ್ಪ ಆಲೋಚಿಸಿ "ದೀಕ್ಷಿತ ರೇ! ಆ ಕೈದಿ ನನ್ನ ವಿಷಯದಲ್ಲಿ ಏನೂ ಹೇಳಿಲ್ಲವೇ?" ಎಂದು ಪ್ರಶ್ನಿ ಸಿದನು.

"ಪೆಟ್ಟಿಗೆಯ ಬಾಯಿ ತೆರೆಯುವುದರೊಳಗಾಗಿ ಗಂಗಾರಾಮನ ಬಾಯಿ ಹಾತೊರೆಯಿತು" ಎಂದು ದೀಕ್ಷಿತನಿಗೆ ನಗೆ ಬಂತು. ಆದರೆ ಇನ್ನೂ ಸ್ವಲ್ಪ ಈತನ ಕುತೂಹಲವನ್ನು ಹೆಚ್ಚಿಸಬೇಕೆಂದು ಯೋಚಿಸಿ "ಅಪ್ಪಾ! ಗಂಗಾರಾಮ್! ಆ ಕೈದಿ ನಿನ್ನ ವಿಚಾರವನ್ನು ಹೇಳಲೇ ಇಲ್ಲ. ಏಕೆ ಮರೆತು ಬಿಟ್ಟನೊ! ಆದರೆ ಜಗನ್ನಾಥ ಪಂತರು ಸಿಗ ದಿದ್ದರೆ, ತನ್ನ ಆಪ್ತರಾದ ಮೂರು ಮಂದಿಗಳಿಗೆ ತನ್ನ ಸ್ಮರಣಾರ್ಥವಾಗಿ ಕೊಡಲಿಕ್ಕೆ ಮೂರು ವಜ್ರದ ಉಂಗುರಗಳನ್ನು ಕೊಟ್ಟಿರುವನು. ಅವು ಈ ಪೆಟ್ಟಿಗೆಯೊಳಗಿವೆ" ಎಂದನು.

ಗಂಗಾರಾಮನು ಹುಬ್ಬು ಹಾರಿಸುತ್ತಾ ಮುಖವನ್ನು ಸೊಟ್ಟಗೆ ಮಾಡಿ "ಮೂವರು? ಆ ಪುಣ್ಯಾತ್ಮರು ಯಾರು, ಸ್ವಾಮಿ?" ಎಂದು ವಿಚಾರಿಸಿದನು.

**ಪರಶುರಾಮ:**—ಆ ಊರ ಜಮೀನ್‌ದಾರ ವಿಶ್ವನಾಥ ಪಂತರ ಪಾರುಪತ್ಯಗಾರ ನಂದೂಲಾಲ; ಅವರ ಗುಮಾಸ್ತ ಯದುಕುಲ ನಾಥ; ಇಲ್ಲಿಯ ಪೋಲಿಸ್ ಫೌಜುದಾರ ಮುರಾರಿರಾವು—ಇವರು ಜಗನ್ನಾಥ ಪಂತರ ಹಿತೇಚ್ಛುಗಳಾಗಿದ್ದರಂತೆ.

**ಗಂಗಾರಾಮ:**—ಸರಿ! ಸರಿ! ಹಿತೇಚ್ಛುಗಳೆನ್ನಬೇಕು ಇಂಥ ವರಿಗೇ!

**ಪರಶುರಾಮ:**—ಜಗನ್ನಾಥ ಪಂತರ ಒಬ್ಬನೆ ಮಗನಿಗೆ—ಗಲ್ಲಿನ ಶಿಕ್ಷೆಯನ್ನು ತಪ್ಪಿಸಲಿಕ್ಕೆ ಸಹಾಯ ಮಾಡಿದವರೇ ಇವರಂತೆ! ಅಲ್ಲವೇನು?

**ಗಂಗಾರಾಮ:**—ಚೆನ್ನಾಗಿ ಹೇಳಿದಿರಿ. ಈಗಿನ ಲೋಕದ ಸ್ಥಿತಿಯೇ ಹೀಗೆ!

**ಪರಶುರಾಮ:**—ಅದೇಕೋ? ಹಾಗೆನ್ನುತ್ತೀ?

**ಗಂಗಾ:**—"ಹಾಗೆ ಹೇಳಬೇಡವೆ, ಮತ್ತೆ? ಜಗನ್ನಾಥ ಪಂತರ ಮರಣಕಾಲದಲ್ಲಿ ಅವರ ಮಗನು ಸಮೀಪದಲ್ಲಿ ಇಲ್ಲದಿರುವುದಕ್ಕೆ ಕಾರಣವೇ ಈ ತ್ರಿಮೂರ್ತಿಗಳು. ಆಗಲಿ, ನನ್ನಂಥ ಹರಕುಮುರುಕು ಮನುಷ್ಯನಿಗೆ ದೊಡ್ಡವರ ಮಾತು ಯಾಕೆ? ಬಡ ಎತ್ತಿಗೆ ದರೇ ಮೇಲಿನ ಹುಲ್ಲು! ಈಗ ನನ್ನ ಪಾಕಶಾಸ್ತ್ರದ ಅನುಭವವನ್ನು ಮಾಡಿಕೊಳ್ಳು ತ್ತೀರೋ! ಹೇಳಿ. ಇಲ್ಲವಾದರೆ, ಆ ತ್ರಿಮೂರ್ತಿಗಳ ಸುದ್ದಿ ನನ್ನೆದುರಿಗೆ ಎತ್ತಬೇಡಿ! ಇದೊ! ಸಂತೆ ಕಡೆಗೆ ಹೊರಟೆ!" ಎಂದು ಕಾಲು ಮುಂದಿ ಡವೆ ಕಾತರ ದೃಷ್ಟಿಯಿಂದ ದೀಕ್ಷಿತರ ಕೈಯಲ್ಲಿದ್ದ ಪೆಟ್ಟಿಗೆಯನ್ನೆ ನೋಡುತ್ತ ನಿಂತನು.

ಗಾಳದ ಎರೆಹುಳುವನ್ನು ಮೀನು ನುಂಗಿತೆಂದು ದೀಕ್ಷಿತನು ತಿಳಿದನು. ಇನ್ನೂ ಸ್ವಲ್ಪ ಹೊತ್ತು ಗಂಗಾರಾಮನನ್ನು ಕೆಣಕಿ, ಮಾತನಾಡಿಸಿದರೆ ತನಗೆ ಬೇಕಾದುದನ್ನೆಲ್ಲಾ ಆತನಿಂದ ಸಂಗ್ರಹಿಸಿ ಕೊಳ್ಳಬಹುದೆಂದು ದೀಕ್ಷಿತನಿಗೆ ಬೋಧೆಯಾಯಿತು. ಅವನು ಗಂಗಾ ರಾಮನ ಕಡೆಗೆ ನೋಡಿ, "ಏನಯ್ಯಾ! ಗಂಗಾರಾಮ! ಏಕೆ ಹೀಗೆ ದುಡುಕುತ್ತೀ; ನೀನು ಹೇಳುವಂತೆ, ಆ ತ್ರಿಮೂರ್ತಿಗಳು ಜಗನ್ನಾಥ ಪಂತರ ಕಪಟಮಿತ್ರರೆಂದು ನೀನು ತೋರಿಸ ಬಲ್ಲೆಯಾ? ಆಗ ಈ ಉಂಗುರಗಳನ್ನು ನಿನಗೇ ಒಪ್ಪಿಸ ಬೇಕೆಂದು ಆ ಕೈದಿ ನನ್ನೊಡನೆ ಹೇಳಿದ್ದಾನೆ. ಇಷ್ಟರ ಮೇಲೆ ಅವರ ತಪ್ಪೇನೆಂದು ನೀನು ನನಗೆ ದೃಢಪಡಿಸಿಕೊಡದಿದ್ದರೆ ನಾನೇ ಅವರನ್ನು ಹುಡುಕಿ, ಈ ಉಂಗುರ ಗಳನ್ನು ಅವರಿಗೆ ಒಪ್ಪಿಸಿ ಕೊಡಬೇಕಾಗುತ್ತದೆ."

ಗಂಗಾರಾಮನಿಗೆ ಹೇಗಾದರೂ ಆ ಉಂಗುರಗಳನ್ನು ಬಗಲಿಗೆ ಹಾಕಿ, ತನ್ನ ದೊಡ್ಡಸ್ತಿಕೆಯನ್ನು ರತ್ನಾಬಾಯಿಗೆ ತೋರಿಸಿ, ಮೆರೆಯಿಸಿ, ಅವಳನ್ನು ಕುಣಿಸಬೇಕೆಂದು ಉತ್ಸಾಹವೆದ್ದಿತು. ಆದ್ದರಿಂದ ಆ ಪೂರ್ವ

ಕಥೆಯನ್ನು ಹೇಳಲು ಆತನು ಸಂಕಲ್ಪ ಮಾಡಿದನು. "ಸ್ವಾಮಿ, ದೀಕ್ಷಿತರೆ! ಕಥೆ ದೊಡ್ಡದು. ಇಲ್ಲಿ ನಿಂತು ಮಾತನಾಡುವುದಿಲ್ಲ. ಬನ್ನಿ. ಅತ್ತಕಡೆ ಒಂದು ಅರಳಿಕಟ್ಟೆ ಇದೆ. ಅಲ್ಲಿ ಕುಳಿತು ಕೇಳುವಿರಂತೆ." ಎಂದು ದೀಕ್ಷಿತನನ್ನು ತನ್ನೊಂದಿಗೆ ಕರೆದುಕೊಂಡು ಹೋದನು.

---

## ಮೂರನೆಯ ಅಧ್ಯಾಯ

### ಪೂರ್ವಕಥೆ

ಇಬ್ಬರೂ ಕಟ್ಟೆಯ ಮೇಲೆ ಏರಿ ಕುಳಿತರು. ಗಂಗಾರಾಮನು ತನ್ನ ನಶ್ಯದ ಬುರುಡೆಯಿಂದ ಒಂದಿಷ್ಟು ನಶ್ಯವನ್ನು ಮೂಗಿಗೇರಿಸಿ ಕಥೆಯನ್ನು ಪ್ರಾರಂಭಿಸಿದನು.

"ಒಂದು ರಾತ್ರೆ,—ಇಂದಿಗೆ ಸುಮಾರು ಹತ್ತಿಪ್ಪತ್ತು ವರ್ಷಗಳ ಹಿಂದೆ,—ಜಗನ್ನಾಥ ಪಂತರಿಗೆ ಮೈಯಲ್ಲಿ ತುಸು ಆಲಸ್ಯವಿತ್ತು. ಆದುದರಿಂದ ಅವರು ಎಂದಿನಂತೆ ಗ್ರಂಥವಾಚನ ಮಾಡದೆ ನಿದ್ರಿಸಿದ್ದರು. ನಾನು ಊಟ ತೀರಿಸಿ ಹೊರ ಜಗಲಿಯಲ್ಲಿ ಮಲಗಿದ್ದೆನು. ನಮ್ಮ ಧನಿಯ ಮಗನು ಏನೋ ಕಾರ್ಯದ ಅವಸರದಲ್ಲಿ ಪರ ಊರಿಗೆ ಹೋಗಿದ್ದನು. ಅಷ್ಟರಲ್ಲಿ ಆ ತ್ರಿಮೂರ್ತಿಗಳಲ್ಲಿ ಒಬ್ಬನಾದ ಯದುಕುಲನಾಥನು ಅಲ್ಲಿಗೆ ಬಂದನು. ಅವನು ನಮ್ಮ ಧನಿಯ ಮಗನೊಂದಿಗೆ ಮಾತುಕಥೆ ನಡೆಸುವುದಕ್ಕೆ ಆಗಾಗ ಅಲ್ಲಿಗೆ ಬರುವ ವಾಡಿಕೆ. ಅಂದು ಧನಿಯ ಮಗನು ಊರಲ್ಲಿಲ್ಲವೆಂದು ನಾನು ಆತನಿಗೆ ತಿಳಿಸಿದೆನು. ಆ ಮೇಲೆ "ಗಂಗಾರಾಮಾ-ನಿನಗೆ ಇಸ್ಪೀಟು ಆಡಲು ಬರುತ್ತದೆಯೇ?" ಎಂದು ಅವನು ಕೇಳಿದನು. "ದುಡ್ಡಿಟ್ಟು ಆಡುವುದಾದರೆ ಮಾತ್ರ ನಾನಿದ್ದೇನೆ" ಎಂದು ಉತ್ತರ ಕೊಟ್ಟೆನು. "ಹಾಗಾದರೆ ಹೊರಡು" ಎಂದು ಯದುಕುಲನಾಥನು ನನ್ನನ್ನು ಕರೆದುಕೊಂಡು, ಒಂದೆರಡು ಬೀದಿಗಳನ್ನು ದಾಟಿ, ಒಂದು ಮನೆಯನ್ನು ಹೊಕ್ಕನು. ಅದು ಪಾರು

ಪತ್ರಗಾರ ನಂದೂಲಾಲನ ಮನೆ. ನಂದೂಲಾಲನು ಅಲ್ಲಿ ಹುಕ್ಕೆಯನ್ನು ಸೇದುತ್ತಾ, ಒಂದು ಲೋಡಿಗೆ ಒರಗಿ ಕುಳಿತಿದ್ದನು. ಅಲ್ಲಿ ಆತನೊಂದಿಗೆ ಮಾತನಾಡುತ್ತಿದ್ದ ಒಬ್ಬ ವ್ಯಕ್ತಿ ನನಗೆ ತೀರಾ ಅಪರಿಚಿತನು. ನಾವು ನಾಲ್ವರು ಬಹಳ ಹೊತ್ತಿನ ವರೆಗೆ "ಹಾರೆ, ಜೀತ್ರೆ" ಎಂದು ಗದ್ದಲ ಮಾಡುತ್ತಾ ಇಸ್ಪೀಟು ಆಡುತ್ತಾ ಕುಳಿತೆವು. ಬಾಯಾರುತ್ತಿದ್ದ ಹಾಗೆ, ಆ ಅಪರಿಚಿತನು ಪಾನಕ ತುಂಬಿದ ಪಾತ್ರೆಯಿಂದ ನಮಗೆ ಪಾನಕವನ್ನು ಹಂಚುತ್ತಲೇ ಇದ್ದನು. ನಡುರಾತ್ರಿ ದಾಟಿತು. ಆಗ ನನಗೇನೋ ಕಣ್ಣೆದುರಿಗೆ ದೀಪದ ಉರಿ ಒಂದು ಎರಡು ಮೂರಾಗಿ ಕುಣಿಯುವಂತೆ ಕಂಡಿತು. ಕಣ್ಣುಗಳನ್ನು ಮುಚ್ಚಿ ನಾನು ಗೋಡೆಗೆ ಒರಗಿ ಕುಳಿತೆನು. "ಗಂಗಾರಾಮಾ! ಏನು, ಸೋತೆಯಾ? ಕೈಯ ಕಾಸು ಹೋಯಿತೆಂದು ಈ ಚಮತ್ಕಾರ ತೋರಿಸುತ್ತೀಯಾ?" ಎಂದು ಯದುಕುಲನಾಥನು ನನ್ನನ್ನು ಹಾಸ್ಯಮಾಡಿ ಅಣಕಿಸಿದನು. ನನ್ನನ್ನು ತಲೆ ಕೆಳಗಾಗಿ ಮಾಡಿ ಯಾರೋ ಹಿಡಿದಂತೆ ನನಗೆ ಭಾಸವಾಗುತ್ತಿದ್ದರೂ, ಯದುಕುಲನಾಥನ ಪರಿಹಾಸ್ಯದ ಮಾತುಗಳು ನನ್ನನ್ನು ರೇಗಿಸಿದವು. "ದುಡ್ಡಿಗಾಗಿ ನಾನು ಹೆದರುವವನಲ್ಲ. ನನಗೇನೊ ತಲೆ ತಿರುಗುತ್ತದೆ. ಇಲ್ಲವಾದರೆ, ನನ್ನ ಕೈ ಚೆನ್ನಾಗಿ ತೋರಿಸುತ್ತಿದ್ದೆ" ಎಂದೆನು. ಅಷ್ಟರಲ್ಲಿ ಹೊರ ಬಾಗಿಲನ್ನು ತಟ್ಟಿ, ಯಾರೋ ಕರೆವಂತೆ ಕೇಳಿಸಿತು. ನಂದೂಲಾಲನು ಫಕ್ಕನೆ ಎದ್ದು ಹೋಗಿ, ಬಾಗಿಲ ಅಗುಳಿಯನ್ನು ತೆಗೆದು, ಬಾಗಿಲ ಬಳಿಯಲ್ಲಿಯೇ ನಿಂತು, ಬಂದವನೊಡನೆ ಏನೋ ಪಿಸುಗುಟ್ಟ ತೊಡಗಿದನು. ಆ ಮೇಲೆ, ಆತನು ಯದುಕುಲನಾಥನನ್ನು ಅಲ್ಲಿಗೆ ಕರೆದಂತಾಯಿತು. ಅವರು ಮೂವರೂ ಮಾತನಾಡುತ್ತಿರುವಾಗ, ಸ್ವರವು ಸ್ವಲ್ಪ ಎತ್ತಿದಂತಾಗಿ "ದರೋಡೆ,—ಬೆಂಕಿ" ಎಂಬ ಎರಡು ಶಬ್ದಗಳು ನನ್ನ ಕಿವಿಗೆ ಬಿದ್ದವು. ನಮ್ಮ ಅಡಿಗೆ ಕೋಣೆಯಲ್ಲಿ ಉರಿಯುತ್ತಿದ್ದ ದೀಪವನ್ನು ನಾನು ನಂದಿಸಿಟ್ಟಿಲ್ಲವೆಂದು ಫಕ್ಕನೆ ಹೊಳೆಯಿತು. ಮನೆಯ ಹಿಂಬಾಗಿಲನ್ನು ನಾನು ಮುಚ್ಚಿರುವೆನೆಂದು ಸ್ಮೃತಿಗೆ ಬರಲಿಲ್ಲ. ನಮ್ಮ ಮನೆಗೆ ಕಳ್ಳರು ಇಳಿದಿದ್ದು ಬೆಂಕಿ ಕೊಟ್ಟಿರುವರೆಂದು ನೆನಸಿ "ದರೋಡೆ! ಬೆಂಕಿ!" ಎಂದು ಒದರಿದೆನು. ಆಗ ಆ ಮೂವರು ನಾನಿದ್ದಲ್ಲಿಗೆ ಓಡಿ

ಬಂದು "ಗಂಗಾರಾಮ! ನಿನಗೇನು ಹುಚ್ಚುಗಿಚ್ಚು ಹಿಡಿಯಿತೇ?" ಎಂದು ಹೇಳಿ ಗೊಳ್ಳೆಂದು ನಕ್ಕರು. ಆ ಮೇಲೆ ನನಗೆ ಕುಡಿಯಲು ಒಂದಿಷ್ಟು ತಣ್ಣೀರನ್ನು ತಂದುಕೊಟ್ಟರು. ಕಣ್ಣುಗಳಿಗೂ ತಲೆಗೂ ಒಂದಿಷ್ಟು ನೀರನ್ನು ಚಿಮುಕಿಸಿದರು. ಅನಂತರ ಯದುಕುಲನಾಥನು ನನಗೆ ಬೆನ್ನು ತಟ್ಟುತ್ತ "ಗಂಗಾರಾಮ! ನಿನಗೆ ಓದುಬರಹ ಗೊತ್ತೇ?" ಎಂದನು. ನಾನು ಶುಂಠನೆಂದು ತಿಳಿದು ಯದುಕುಲನಾಥನು ನನ್ನನ್ನು ಗೇಲಿ ಮಾಡುತ್ತಾನೆಂದು ನೆನಸಿ "ಓಹೋ! ಅದಕ್ಕೇನು? ನಮ್ಮಪ್ಪ ಬಾಲ್ಯದಲ್ಲೇ ನನಗೆ ಓನಾಮ ಚೆನ್ನಾಗಿ ಹಾಕಿ ಕೊಟ್ಟಿದ್ದಾನೆ. ನನ್ನ ಬರಹ ಕಂಡವರು ಎಂಥಾ ಮುತ್ತಿನಂಥ ಬರಹ ಎಂದು ಕೊಂಡಾಡುತಿದ್ದರು" ಎಂದೆನು. ಆಗ ಏನೋ ಹುಡುಕುವವನಂತೆ ಮಾಡಿ, ಆ ಹೊಸ ವ್ಯಕ್ತಿ ತನ್ನ ಜೇಬಿನೊಳಗಿಂದ ಒಂದು ಬರೇ ಕಾಗದವನ್ನು ನನಗೆ ತೋರಿಸಿ, "ನಿನ್ನ ಮುತ್ತಿನಂಥ ಬರಹ ಎಲ್ಲಿ? ನೋಡೋಣ!" ಎಂದನು. ದೀಪದ ಬೆಳಕಿನಲ್ಲಿ ಆತನನ್ನು ಕಂಡಾಗ, ಆತನು ಪೋಲೀಸ್ ಫೌಜುದಾರನೆಂದು ಆತನ ರುಮಾಲಿನಿಂದ ಗೊತ್ತಾಯಿತು. ಆದರೆ ಚಿತ್ತಭ್ರಾಂತಿಯಿಂದ ನಾನು ವಿಚಾರ ಮಾಡದೆ, ನನ್ನ ಹೆಗ್ಗಳಿಕೆಯನ್ನು ತೋರಿಸುವುದಕ್ಕಾಗಿ ಆ ಕಾಗದದ ಬುಡದಲ್ಲಿ ನನ್ನ ಸಹಿಯನ್ನು ಬರೆದೆನು. ಆ ಮೇಲೆ ಯದುಕುಲನಾಥನು, ನಡುರಾತ್ರಿ ಕಳೆಯಿತೆಂದು ಹೇಳಿ, ನನ್ನನ್ನು ಕೈ ಹಿಡಿದು ನಮ್ಮ ಮನೆಯ ಜಗಲಿಗೆ ತಂದು ಬಿಟ್ಟನು. ನಾನು ಅಲ್ಲಿಯೇ ನಿದ್ದೆ ಹೋದೆನು."

ಗಂಗಾರಾಮನು, ಇನ್ನೊಂದು ಚಿಟಿಕೆಯನ್ನು ಮೂಗಿಗೆ ಸೇರಿಸಿ, ಮೂಗನ್ನು ಒರಸಿಕೊಂಡು, ಕಥೆಯನ್ನು ಮುಂದರಿಸಿದನು:— "ಹಾಗೆಯೇ ಒಂದು ವಾರ ಕಳೆಯಿತು. ಒಂದು ದಿನ ಒಬ್ಬ ಪೋಲೀಸಿನವನು ನಮ್ಮ ಧನಿಯ ಮನೆಗೆ ಬಂದು "ಇಲ್ಲಿ ಗಂಗಾರಾಮನೆಂಬವನು ಇದ್ದಾನೆಯೇ? ಆತನನ್ನು ಕರೆದು ತರಲು ಅಮಲ್ದಾರರ ಅಪ್ಪಣೆ ಆಗಿದೆ" ಎಂದನು. "ಏನು! ಅಮಲ್ದಾರರಲ್ಲಿ ಪ್ರಸ್ತದ ಊಟವಿದೆಯೇ?" ಎಂದು ನಾನು ಕೇಳಿದೆನು. ಆಗ ಪೋಲೀಸಿನವನು ನಸುನಕ್ಕು "ಹೌದು, ಬೇಗನೆ ಹೊರಡು; ಎರಡೂ ಕೈಗಳಿಂದಲೂ ತಿನ್ನಬಹುದು"

ಎಂದನು. ನಾನು ಅವನ ಹಿಂದೆಯೇ ಹೋದೆನು. ಪೋಲೀಸಿನವನು ನನ್ನನ್ನು ಅಮಲ್ದಾರರ ಮನೆಗೆ ಒಯ್ಯದೆ ಕಚೇರಿಗೆ ಕರೆದೊಯ್ದನು. ಅಲ್ಲಿ ಅಮಲ್ದಾರರು ಒಂದು ರತ್ನ ಕಂಬಳಿಯ ಮೇಲೆ, ಲೋಡಿಗೆ ಒರಗಿ ಕುಳಿತಿದ್ದರು. ಸಮೀಪದಲ್ಲಿ ಒಬ್ಬ ಗುಮಾಸ್ತ; ಏನೊ ಕಾಗದಗಳನ್ನು ಮಗುಚಿ ಅವರಿಗೆ ಓದಿ ಹೇಳುತ್ತಿದ್ದನು. ಕೆಲವು ದಿನಗಳ ಹಿಂದೆ, ನಂದೂಲಾಲನ ಮನೆಗೆ ಬಂದ ಪೋಲೀಸ್ ಉದ್ಯೋಗಸ್ಥನು ಅಲ್ಲಿ ನಿಂತಿದ್ದನು. ನಾನು ಒಳಗೆ ಹೋಗಿ ಅಮಲ್ದಾರರಿಗೆ ಬಗ್ಗಿ ನಮಸ್ಕಾರ ಮಾಡಿ ನಡುಗುತ್ತಾ ನಿಂತೆನು. ಅದು ವರೆಗೂ ಕಚೇರಿಯ ಮೆಟ್ಟಲನ್ನು ನಾನು ಹತ್ತಿರಲಿಲ್ಲ. ಅಮಲ್ದಾರರು ನನ್ನನ್ನು ಕಂಡು ಕಣ್ಣು ಕೆಂಪಗೆ ಮಾಡಿ 'ಗಂಗಾರಾಮ! ಈ ಸಹಿ ನಿನ್ನದೆ?' ಎಂದು ಕಾಗದದ ಕಡೆಗೆ ಬೆರಳು ತೋರಿಸಿದರು. ಗುಮಾಸ್ತನು ಆ ಕಾಗದವನ್ನು ನನ್ನ ಕೈಗೆ ಇತ್ತನು. ಏನೂ ತಿಳಿಯದೆ ನಾನು "ಆ ಬರಹವು ನನ್ನ ಬರಹದಂತಿದೆ" ಎಂದೆನು. "ಏನು? ಬರಹದಂತಿದೆ! ಯಾರೊ! ಬಿಗಿಯಿರಿ—ಕೈಗೆ ಬೇಡಿ" ಎಂದು ಕಣ್ಣು ಕೆರಳಿಸಿದರು. ಆಗ ಸಹಿ ನನ್ನದೆಂದು ನಾನು ಒಪ್ಪಿಕೊಳ್ಳಬೇಕಾಯಿತು. ಅಷ್ಟರಲ್ಲಿ ಯಾರೊ ಒಬ್ಬನು ನಿಟ್ಟುಸುರು ಬಿಟ್ಟಂತೆ ಕೇಳಿಸಿತು, ನಾನು ಆ ಕಡೆಗೆ ಮುಖವನ್ನು ತಿರುಗಿಸಿದಾಗ, ಪೋಲೀಸಿನವರು, ನಮ್ಮ ಧನಿಯ ಮಗನ ಕೈಗಳಿಗೂ, ಕಾಲುಗಳಿಗೂ ಸಂಕೋಲೆಗಳನ್ನು ಬಿಗಿದು ಪಹರೆ ಮಾಡುತಿದ್ದುದನ್ನು ಕಂಡೆನು. ಅವನನ್ನು ಕಂಡೊಡನೆ, ನನ್ನ ಮನಸ್ಸಿನಲ್ಲಿ ಏನೊ ಮರಕಳಿಸಿದಂತೆ ಆಯಿತು. ನಮ್ಮ ಧನಿಯ ಮಗನು ನಿರಪರಾಧಿ ಎಂದು ನಾನು ಬೊಬ್ಬಿಟ್ಟೆನು. ಅವನನ್ನು ಏಕೆ ಅಲ್ಲಿ ನಿರ್ಬಂಧಿಸಿದ್ದರೆಂದು ನನಗೆ ಗೊತ್ತಾಗಲಿಲ್ಲ. ನಾನು ಚೀರಿದುದನ್ನು ಕೇಳಿ ಅಮಲ್ದಾರರು ದೊಡ್ಡ ಸ್ವರದಿಂದ "ದೊಬ್ಬಿರೊ, ಆತನನ್ನು ಹೊರಗೆ!" ಎಂದರು. ಜವಾನನೊಬ್ಬನು ನನ್ನ ಕುತ್ತಿಗೆಗೆ ಕೈಕೊಟ್ಟು ಹೊರಗೆ ನೂಕಿ ಬಿಟ್ಟನು."

ಗಂಗಾರಾಮನು ಮೂರನೆಯ ಸಲ ನಶ್ಯವನ್ನು ಮೂಗಿಗೇರಿಸಿ ಕಥೆಯನ್ನು ಮುಂದರಿಸಿದನು:—"ಕಚೇರಿಯಿಂದ ಹೊರಬಿದ್ದದ್ದೇ ತಡ. ನಮ್ಮ ಧನಿಯ ಮಗನ ಅವಸ್ಥೆಯನ್ನು ಧನಿಗೆ ತಿಳಿಸಬೇಕೆಂದು, ಉಸುರು

ಕಟ್ಟಿ ಮನೆಯ ಕಡೆಗೆ ಓಡಿದೆ. ಅಷ್ಟರಲ್ಲಿ ಅಲ್ಲಿ ಹಲವು ಜನರು ಬಂದು ಕೂಡಿದ್ದರು, ನಮ್ಮ ಧನಿ ಮೂರ್ಛಿತನಾಗಿ ಬಿದ್ದಿದ್ದನು. ಅವನು ಚೇತರಿಸಿಕೊಳ್ಳುವಂತೆ, ಒಬ್ಬಿಬ್ಬರು ಗಾಳಿ ಹಾಕುತ್ತಿದ್ದರು. ಒಬ್ಬಿಬ್ಬರು ಅವನ ಕಣ್ಣುಗಳಿಗೆ ನೀರನ್ನು ಚಿಮುಕಿಸುತ್ತ ಇದ್ದರು. ಅಷ್ಟರಲ್ಲಿ ಯಾವನೋ ಒಬ್ಬನು ಹೊರಗಿನಿಂದ ಓಡಿ ಬಂದು "ಗಂಗಾರಾಮ! ಒಳ್ಳೇ ಜಾಣ! ಸಾಕ್ಷಿ ನುಡಿದರೆ ಹೀಗೆಯೇ ನುಡಿಯಬೇಕು. ನಿನ್ನ ಒಂದು ಸಾಕ್ಷಿಯಿಂದಲೇ ನಿನ್ನ ಧನಿಯ ಮಗನಿಗೆ ಜನ್ಮ 'ಟಾಪು' ಶಿಕ್ಷೆಯನ್ನು ಅಮಲ್ದಾರರು ವಿಧಿಸಿದರು. ಉಂಡ ಮನೆಗೆ ಗುಂಡನ್ನು ಇಟ್ಟೆ; ನಿನ್ನ ಬಾಳ್ವೆಯನ್ನು ಸುಡು!" ಎಂದು ಗದರಿಸಿದನು. ಈ ಸಮಾಚಾರದಲ್ಲಿ, ಒಂದೂ ಗೊತ್ತಾಗದೆ ನಾನು ಬಿರಬಿರನೆ ನೋಡುತ್ತ ಅಲ್ಲಿಯೆ ನಿಂತಿದ್ದೆನು. ನನ್ನನ್ನು ಗದರಿಸುತಿದ್ದವನ ಭಯಂಕರವಾದ ಮಾತುಗಳು ಕಿವಿಗೆ ಬಿದ್ದೊಡನೇ, ಆಗಲೇ ಚೇತರಿಸುತಿದ್ದ ನಮ್ಮ ಧನಿಯ ಪ್ರಾಣವು ಹಾರಿ ಹೋಯಿತು."

ಈ ಕಥೆಯನ್ನು ಕೇಳುತಿದ್ದ ಹಾಗೆ ಪರಶುರಾಮ ದೀಕ್ಷಿತನ ಬಿಳುಪಾದ ಮುಖವು ಇನ್ನೂ ನೀಲ ಬಣ್ಣಕ್ಕಿಟ್ಟಿತು. ಗಂಗಾರಾಮನು ಮಾತುಗಳನ್ನು ಮುಗಿಸುವಷ್ಟರಲ್ಲಿ, ದೀಕ್ಷಿತನ ಶ್ವಾಸವು ಎದೆಯಲ್ಲಿಯೆ ಬೀಗಿದಂತಾಯಿತು. ಗಂಟಲಿನ ನರಗಳು ಉಬಿಕೊಂಡವು. ಕಣ್ಣುಗಳಿಂದ ಅಶ್ರುಬಿಂದುಗಳು ಧಾರಾಳವಾಗಿ ಹರಿಯತೊಡಗಿದವು. ಗಂಗಾರಾಮನ ಕಣ್ಣುಗಳೂ ಒದ್ದೆಯಾಗಿದ್ದವು. ಸ್ವಲ್ಪ ಹೊತ್ತಿನ ಮೇಲೆ ಗಂಗಾರಾಮನು "ದೀಕ್ಷಿತರೇ! ಈ ದುಃಖಕರವಾದ ವಾರ್ತೆಯನ್ನು ಕೇಳಿ, ನಿಮ್ಮಂಥಾ ಮಹಾನುಭಾವರ ಮನಸ್ಸು ಕರಗುವುದರಲ್ಲಿ ಆಶ್ಚರ್ಯವಿಲ್ಲ. ನನಗಂತೂ ಅದನ್ನು ಹೇಳುತಿದ್ದಾಗ, ಆ ನೋಟವು ಕಣ್ಣ ಮುಂದೆಯೇ ನಲಿಯುತ್ತಿದೆ! ಅಂಥಾ ಧನಿಯಾಗಲೀ, ಅವರ ಮಗನಂಥ ಶುದ್ಧ ಮನಸ್ಸಿನ ಯೋಗ್ಯ ತರುಣರಾಗಲೀ ವಿರಳ." ಎಂದನು.

ಅನಂತರ ದೀಕ್ಷಿತನು "ಗಂಗಾರಾಮ! ನಿನ್ನ ಧನಿಯ ಮಗನಿಗೆ ಏಕೆ ಶಿಕ್ಷೆಯಾಯಿತೆಂದು ಬಲ್ಲೆಯಾ?"

**ಗಂಗಾರಾಮು**:—ಹೌದು! ಆ ದಿನ ನಮ್ಮ ಯಜಮಾನನ ಉತ್ತರ ವಿಧಿಗಳನ್ನು ದಿಕ್ಕಿಲ್ಲದ ನಾನೇ ಮಾಡಬೇಕಾಯಿತು. ಅನಂತರ ಒಂದೆರಡು ದಿನಗಳ ವರೆಗೆ ಯಾರಿಗೂ ನಾನು ಮೋರೆ ತೋರಿಸದೆ ಆ ಊರನ್ನೇ ಬಿಟ್ಟೆನು. ಒಂದೆರಡು ತಿಂಗಳ ಮೇಲೆ ಮರಳಿ ಊರಿಗೆ ಬಂದಾಗ, ಯಾರೊ ಒಬ್ಬರಿಂದ ನನಗೆ ಆ ಸಮಾಚಾರ ತಿಳಿಯಿತು.

**ಪರಶುರಾಮು**:—ಏನು ತಿಳಿಯಿತು?

**ಗಂಗಾರಾಮು**:—ನಮ್ಮ ಧನಿಯ ಮಗ ಈ ಊರ ಜಮಿನ್ದಾರ ವಿಶ್ವನಾಥ ಪಂತರಲ್ಲಿ, ಯದುಕುಲನಾಥನೊಂದಿಗೆ ಒಬ್ಬ ಗುಮಾಸ್ತನಾಗಿದ್ದನು. ಅವನೇ ಕುಹಕಿಗಳಾದ ಕೆಲವು ಪುಂಡರನ್ನು ಜತೆಗೂಡಿಸಿ ವಿಶ್ವನಾಥರ ಮನೆಗೆ,—ನಾನು ನಂದೂ ಲಾಲನಲ್ಲಿ ಇಸ್ಪೀಟಾಟ ಆಡುತಿದ್ದ ರಾತ್ರಿಯಲ್ಲಿ—ಬೆಂಕಿ ಇಡಿಸಿದನೆಂತಲೂ, ಪುಂಡರೊಡನೆ ಹೆಣಗಾಡುತ್ತಿರುವಾಗ, ವಿಶ್ವನಾಥ ಪಂತರಿಗೆ ಕತ್ತಿಯ ಗಾಯವಾಗಿ ಅವರು ಪ್ರಾಣ ಬಿಟ್ಟರೆಂತಲೂ, ಇದಕ್ಕೆಲ್ಲಾ ನಮ್ಮ ಧನಿಯ ಮಗನೇ ಕಾರಣನೆಂತಲೂ, ಈ ಮೊಕದ್ದಮೆಯನ್ನು, ನಂದೂಲಾಲನ ಮನೆಯಲ್ಲಿ ನಾವು ಜುಗಾರಾಡುತಿದ್ದಾಗ ಬಂದ ಪೋಲೀಸು ಫೌಜುದಾರ—ಮುರಾರಿರಾಯನು ಪತ್ತೆಮಾಡಿದನೆಂತಲೂ ಸಮಾಚಾರವು ತಿಳಿಯಿತು.

**ಪರಶುರಾಮು**:—ಗಂಗಾರಾಮು! ನಿನ್ನ ಧನಿಯ ಮಗನು ಅಂಥಾ ನೀಚನೇ? ನೀನೂ ಹಾಗೆ ನಂಬಿದೆಯಾ!

**ಗಂಗಾರಾಮು**:—ಅಯ್ಯೋ ಪಾಪ! ಅವ ಇನ್ನೂ ಹುಡುಗ! ಅಂಥ ಹುಡುಗನ ಮೇಲೆ ಆರೋಪ ಮಾಡಿದರೆ ನನ್ನ ಬಾಯಲ್ಲಿ ಹುಳ ಬಿದ್ದೀತು. ಅಂದಿಗೆ ಎರಡು ದಿನಗಳ ಹಿಂದೆಯೇ, ಆತನು ವಿಶ್ವನಾಥ ಪಂತರ ಕೆಲಸದ ಮೇಲೆ ಎಲ್ಲಿಗೋ ದೂರ ಪ್ರಯಾಣ ಮಾಡಿದ್ದನು. ಆ ದಿನ ಅವನು ಆ ಊರಲ್ಲೇ ಇರಲಿಲ್ಲ. ಈ ಪಾಪಿಗಳೇ ಏನೋ ಮಸಲತ್ತು ಮಾಡಿ ಈ ಆರೋಪವನ್ನು ಅವನ ತಲೆಗೆ ಹಚ್ಚಿರಬೇಕು. ನಮ್ಮ ಧನಿಯ ಮಗನು ಅಂಥ ಅಧಮನೆಂದು ನಾನು ಸರ್ವಥಾ ನಂಬಲಾರೆ.

**ಪರಶುರಾಮ**:—ಅದಿರಲಿ; ಆ ಮೇಲೆ ನೀನು ಹೇಳಿದ ಆ ತ್ರಿಮೂರ್ತಿಗಳು ಎಲ್ಲಿಗೆ ಹೋದರೆಂದು ನಿನಗೆ ಗೊತ್ತಾಯಿತೇ?

**ಗಂಗಾರಾಮ**:—ಇಲ್ಲ, ಅವರ ಪತ್ತೆಯೇ ನನಗೆ ಸಿಗಲಿಲ್ಲ.

**ಪರಶುರಾಮ**:—ಇನ್ನೊಂದು ಮಾತು. ಜಮೀನ್‌ದಾರ ವಿಶ್ವನಾಥ ಪಂತರು ಈ ಪುಂಡರ ಕೈಯಿಂದ ಹತರಾಗುವ ಸಮಯದಲ್ಲಿ ಅವರ ಮನೆಯೊಳಗೆ ಬೇರೆ ಯಾರೂ ಇದ್ದಿಲ್ಲವೇ?

**ಗಂಗಾರಾಮ**:—ಇದ್ದರಂತೆ. ವಿಶ್ವನಾಥ ಪಂತರ ಹೆಂಡತಿಯೊಬ್ಬಳು; ಸುಮಾರು ನಾಲ್ಕು ವರ್ಷದ ಅವರ ಮಗಳೊಬ್ಬಳು; ಆ ಮಗುವಿನ ಆರೈಕೆಯನ್ನು ನೋಡುತ್ತಿರುವ ಮುಸಲ್ಮಾನ ದಾದಿಯೊಬ್ಬಳು; ಈ ಮೂವರೇ ಆ ದೊಡ್ಡ ಮನೆಯಲ್ಲಿ ಇದ್ದರಂತೆ. ಮನೆಯ ಆಳುಗಳೆಲ್ಲರೂ—ಏಳೆಂಟು ಮಂದಿ ತಂಡುಲ ಧ್ವಂಸಿಗಳು ಇರುತಿದ್ದರು. ಆ ರಾತ್ರೆಯಲ್ಲಿ ಅವರೆಲ್ಲ ಎಲ್ಲಿ ಕಾಣೆಯಾಗಿದ್ದರೆಂದು ಗೊತ್ತಾಗಲಿಲ್ಲ. ಮನೆಯೊಳಗಿರುವ ಮೂರು ಜನರ ಪತ್ತೆಯೂ ಇದು ವರೆಗೆ ಸಿಕ್ಕಿಲ್ಲ. ಅವರ ಶವಗಳು ಕುಸಿದು ಬಿದ್ದ ಆ ಮನೆಯ ಅಡಿಯಲ್ಲಿ ಹೂತು ಹೋಗಿರಬಹುದೆಂದು ಕೆಲವರು ಹೇಳುತ್ತಾರೆ. ಮೊದಲೇ ಪಂತರಿಗೆ ತನ್ನ ಮನೆಯ ಮೇಲೆ ಅತ್ಯಾಚಾರ ನಡೆಯುವುದೆಂಬ ಸೋವು ಗೊತ್ತಾಗಿ, ವಿಶ್ವನಾಥ ಪಂತರು ತಮ್ಮ ಹೆಂಡತಿಯನ್ನೂ, ತನ್ನ ಮಗಳನ್ನೂ ಆ ದಾದಿಯೊಂದಿಗೆ ಆ ಮನೆಯಿಂದ ಎಂಟು ಮೈಲು ದೂರವಿರುವ ಅವರ ಇನ್ನೊಂದು ಭವನಕ್ಕೆ ಕಳುಹಿಸಿದ್ದರೆಂದೂ ಇನ್ನು ಕೆಲವರು ಆಡಿಕೊಳ್ಳುತಿದ್ದರು. ಖಂಡಿತವಾದ ಸಮಾಚಾರವು ಇನ್ನೂ ಗೊತ್ತಿಲ್ಲ. ಆದರೆ ಕತ್ತಲಾದ ಮೇಲೆ, ವಿಶ್ವನಾಥ ಪಂತರ ಮನೆಯಿದ್ದ ಸ್ಥಳದ ಬಳಿಯಲ್ಲಿ, ಯಾರೂ ಸಂಚಾರ ಮಾಡುವುದಿಲ್ಲ. ಧೈರ್ಯದಿಂದ ಹೋದ ಒಬ್ಬಿಬ್ಬರು, ರಾತ್ರೆಯಲ್ಲಿ ಸ್ತ್ರೀರೋದನದ ಧ್ವನಿ ಅಲ್ಲಿ ಕೇಳಿಸುತ್ತಿದೆ ಎಂದು ವರ್ತಮಾನ ಕೊಟ್ಟದ್ದರಿಂದ ಈಗ ಯಾರೂ ಆ ಕಡೆಗೇ ಸುಳಿಯುವುದಿಲ್ಲ. ವಿಶ್ವನಾಥ ಪಂತರಿಗೆ ಬೇರೆ ಮಕ್ಕಳಿಲ್ಲದ್ದರಿಂದ ಅವರ ಹೇರಳವಾದ ಆಸ್ತಿ ಸರಕಾರಕ್ಕೆ ಸೇರಿತಂತೆ.

**ಪರಶುರಾಮ:**—ಗಂಗಾರಾಮ! ನಿನ್ನ ಕಥೆಯನ್ನು ಕೇಳಿ ನನ್ನ ಮನಸ್ಸು ಕರಗಿ ನೀರಾಗಿದೆ. ನೀನು ಹೇಳಿದ ತ್ರಿಮೂರ್ತಿಗಳಿಗೆ ಕೊಡಲು ತಂದ ಈ ಮೂರು ಉಂಗುರಗಳನ್ನು, ಇನ್ನು ನೀನೇ ಇಟ್ಟು ಕೊ. ನಾನು ಈಗಲೆ ಪೂನೆಗೆ ಹೊರಡುವೆನು.

**ಗಂಗಾರಾಮ:**—ಸ್ವಾಮಿಾ! ಒಂದು ಮಾತಿದೆ. ನೀವು ಹೇಳಿದ ಕೈದಿ ಎಂಬವನು ನಮ್ಮ ಧನಿಯ ಮಗನೇ?

**ಪರಶುರಾಮ:**—ಅಲ್ಲ! ಅಲ್ಲ! ಅವನು ನಿಮ್ಮ ಧನಿಯ ಮಗ ನೊಂದಿಗೆ ದ್ವೀಪಾಂತರದಲ್ಲಿ ಕಾರಾಗೃಹವಾಸಿಯಾಗಿದ್ದನಂತೆ. ಅವನ ಶಿಕ್ಷೆಯ ಅವಧಿಯು ಮುಗಿದು, ಅವನು ಪೂನೆಗೆ ಬರಲಿಕ್ಕೆ ಹೊರಟಾಗ, ನಿಮ್ಮ ಧನಿಯ ಮಗನು ಈ ಉಂಗುರಗಳನ್ನು ನಂದೂಲಾಲನಿಗೂ, ಯದುಕುಲನಾಥನಿಗೂ, ಮುರಾರಿರಾಯನಿಗೂ ಕೊಡಲಿಕ್ಕೆಂದು ಒಪ್ಪಿಸಿ ದ್ದನಂತೆ. ಅವನು ಪೂನೆಗೆ ಬಂದ ಒಂದೆರಡು ದಿನಗಳಲ್ಲಿ ರೋಗ ಪೀಡಿತನಾಗಿ ಸಾಯಲಿಕ್ಕಾದನು. ದಿಕ್ಕಿಲ್ಲದ ಬಡವರು ಔಷಧ ಉಪ ಚಾರಗಳ ನಿಮಿತ್ತವಾಗಿ ನನ್ನಲ್ಲಿ ಬರುತ್ತಾರೆ. ಈ ಕೈದಿ ತನ್ನ ಪ್ರಾಣೋ ತ್ಕ್ರಮಣ ಕಾಲದಲ್ಲಿ, ಈ ಉಂಗುರಗಳನ್ನು ವಿಶ್ವಾಸದಿಂದ ನನ್ನೊಡನೆ ಇತ್ತನು. ಆದ್ದರಿಂದ ನಾನು ಇಲ್ಲಿಯ ವರೆಗೆ ಪ್ರಯಾಣ ಬೆಳಿಸ ಬೇಕಾಯಿತು.

ಗಂಗಾರಾಮನು ದೀಕ್ಷಿತನ ಮಾತುಗಳನ್ನು ಕೇಳಿ, ಒಮ್ಮೆಗೆ ಚಕಿತ ನಾದನು. ಆ ಮೇಲೆ ಅವನ ಕಾಲಿಗೆ ಎರಗಿ, ಆ ಉಂಗುರದ ಪೆಟ್ಟಿಗೆ ಗಳನ್ನು ತೆಗೆದುಕೊಂಡು ತನ್ನ ಮನೆಯ ಕಡೆಗೆ ಹಿಂತೆರಳಿದನು. ಪರಶುರಾಮ ದೀಕ್ಷಿತನು ಪೂನೆಯ ದಾರಿಯನ್ನು ಹಿಡಿದುಕೊಂಡು ಹೋದನು.

---

## ನಾಲ್ಕನೆಯ ಅಧ್ಯಾಯ

### ರತ್ನಾಬಾಯಿಯ ದೃಷ್ಟಿ ಪರಿವರ್ತನೆ

ರತ್ನಾಬಾಯಿ ಗಂಡ ಬರಲಿಲ್ಲವೆಂದು ಕತ್ತೆತ್ತಿ ಅತ್ತಿತ್ತ ನೋಡುತ್ತಾ ಜಗಲಿಯ ಮೇಲೆ ನಿಂತುಕೊಂಡಿದ್ದಳು. ಸಂತೆಕಡೆಯಿಂದ ಬಾರದೆ, ಉಕ್ಕಡದ ಕಡೆಯಿಂದ ಗಂಗಾರಾಮನು ಬರುವುದನ್ನು ಕಂಡು, ಹುಬ್ಬು ಗಂಟಿಕ್ಕಿ ಗಂಡನಿಗೆ ಸರಿಯಾಗಿ ಪೂಜೆ ಮಾಡಬೇಕೆಂದು ಹವಣಿಸಿದಳು. ಅಷ್ಟರಲ್ಲಿ 'ಗಂಗಾರಾಮ್, ರತ್ನಾರಾಮ್, ಪಾವನ ರಾಮ್' ಎಂದು ಭಜನೆ ಮಾಡುತ್ತಾ ಗಂಗಾರಾಮನು ತಾಳ ಹಾಕುತ್ತಾ ಜಗಲಿಯ ಮೆಟ್ಟಿಲನ್ನು ಹತ್ತಿದನು. ಅವನ ಈ ವಿಚಿತ್ರ ವ್ಯಾಪಾರವನ್ನು ಕಂಡು, ಆತನಿಗೆ ಹುಕ್ಕೆಯ ಮತ್ತು ತಲೆಗೆ ಅಡರಿ ಚಿತ್ತಭ್ರಮೆ ಉಂಟಾಗಿದೆ ಎಂದು ರತ್ನಾಬಾಯಿ ತಿಳಿದಳು. ತನ್ನ ತೀಕ್ಷ್ಣವಾದ ಕಣ್ಣುಗಳಿಂದ ಮಿಂಚನ್ನು ಚೆಲ್ಲುತ್ತ ಸಿಟ್ಟಿನಿಂದ ನಡುಗುವ ತುಟಿಗಳುಳ್ಳವಳಾಗಿ, ಕರ್ಕಶ ಧ್ವನಿಯಿಂದ—"ಏನಿರೀ! ಏನಿದು ಸಂಭ್ರಮ! ಹಾಡುತ್ತಾ, ತಾಳ ಹಾಕುತ್ತಾ ಬರುತಿದ್ದೀರಿ?" ಎಂದು ಜಬರಿಸಿದಳು. ಒಡನೆ ಕಣ್ಣೀರಿನ ಮಳೆ ಹೊರ ಸೂಸಿತು. ಆದರೆ ಈಗಿನ ಗಂಗಾರಾಮನು ಮೊದಲಿನ ಗಂಗಾರಾಮನೇ? ಅವನ ಮನೋವೃತ್ತಿಯೇ ಈಗ ಬೇರೆಯಾಗಿದೆ. ಕಂಕುಳಲ್ಲಿ ಅಮುಕಿಕೊಂಡ ರತ್ನಗಳ ಪೆಟ್ಟಿಗೆಯಿಂದ ತನ್ನ ಮಹತ್ವವನ್ನು ಹೊರತೆಗೆದು ಹೆಂಡತಿಗೆ ತೋರಿಸಿ, ಈ ಮೊದಲು, ತನ್ನನ್ನು ಆಗಾಗ ಆಕೆ ಹಂಗಿಸಿ, ಹೀಯಾಳಿಸುತಿದ್ದುದಕ್ಕೆ ಪ್ರತಿಯಾಗಿ, ಅವಳ ಗರ್ವಭಂಗ ಮಾಡಬೇಕೆಂದು ಅವನಿಗೆ ಹೊಳೆಯಿತು. ಕೊಂಚ ಸರಸವಾಡುವ ಇಚ್ಛೆಯಿಂದ ಆತನು 'ಅಯ್ಯಯ್ಯೋ! ನಾನು ಹಾಡುತ್ತಾ ತಾಳ ಹಾಕುತಿದ್ದರೆ ನೀನೇಕತ್ತೆ?' ಎಂದನು. ಆಗ ಮುಖ ಕೆಂಪೇರಿದ ರತ್ನಮ್ಮನು, 'ಸಂತೆಗೆ ಹೋದವರು ಬರಿಕೈಯಿಂದಲೇ ಬಂದಿರಿ. ಅದರ ಮೇಲೂ ನನ್ನನ್ನು ಕತ್ತೆಯೆಂದು ಬೈಯುವಿರಾ?' ಎಂದು ಗದರಿಸಿದಳು. ಅದಕ್ಕೆ ಗಂಗಾರಾಮನು ಹಲ್ಲು ಕಿರಿಯುತ್ತಾ 'ನನ್ನ ಮಾತಿಗೆ ಅಪಾರ್ಥ ಮಾಡಿಕೊಳ್ಳಬೇಡ; ನೀನು ಏಕೆ ಅತ್ತೆ ಎಂದು ಕೇಳಿದೆ. ಅದಿರಲಿ. ನೀನು ನನ್ನನ್ನು ಯಾವಾಗಲೂ 'ಉಂಡಾಡಿ' ಎಂದು ಬಯ್ಯುತಿದ್ದೆ.

ಆದರೆ ನಿನಗಿಂತಲೂ ಹೆಚ್ಚು ಬೆಲೆಯ ರತ್ನವನ್ನು ನನ್ನ ಜೇಬಿನೊಳಗೆ ನಾನು ಹಾಕಬಲ್ಲೆ ಎಂದು ಮಾತ್ರ ನೀನು ತಿಳಿಯಲಿಲ್ಲ.

**ರತ್ನ**:—(ತವಕದಿಂದ) ಅದೇನು, ಅದೇನು? ಇನ್ನೊಂದು ಮದುವೆ ಮಾಡಿಕೊಳ್ಳುವಿರಾ?

**ಗಂಗಾ**:—"ಹಾಗಲ್ಲವೇ, ಇಗೋ ಇಲ್ಲಿ ನೋಡು, ಈ ಪೆಟ್ಟಿಗೆಯಲ್ಲಿ ಏನಿದೆ? ತೆರೆದು ನೋಡು" ಎಂದು ಕಂಕುಳಲ್ಲಿರುವ ಪೆಟ್ಟಿಗೆಯನ್ನು ಅವಳ ಕೈಗೆ ಇತ್ತನು.

ರತ್ನಮ್ಮನು ಈ ಉಂಗುರಗಳನ್ನು ನೋಡಿ ಬೆಚ್ಚಿ ಬೆರಗಾದಳು. ಅವಳ ಸಿಟ್ಟು ಎಲ್ಲಿ ಹೋಯಿತೋ—ಏನೋ! ನಗುಮೋರೆಯ ವೈಯ್ಯಾರದಿಂದ ಗಂಡನನ್ನು ಓರೆಕಣ್ಣಿನಿಂದ ನೋಡುತ್ತಾ "ಆಹಾ! ಎಷ್ಟು ಒಳ್ಳೇ ರತ್ನಗಳು! ಎಲ್ಲಿಂದ ದೊರಕಿದವು?" ಎಂದು ಒಂದೊಂದೇ ಉಂಗುರವನ್ನು ತನ್ನ ಬೆರಳಿಗೆ ಇಟ್ಟು, ಅವುಗಳ ಅಂದಚೆಂದವನ್ನು ನೋಡುತ್ತಾ "ಇವು ಎಲ್ಲಿಂದ ಬಂದವು? ಹೇಳಬಾರದೆ! ನನ್ನಾಣೆಯಿದೆ, ಹೇಳಿಬಿಡಿ" ಎಂದು ನಯನುಡಿಯಿಂದ ಕೇಳಿದಳು.

ಗಂಗಾರಾಮನು ತನ್ನ ಮಹತ್ತನ್ನು ಈಗಲೇ ತೋರಿಸಬೇಕೆಂದು 'ಇಗೋ, ಇವನ್ನು ನಾನೇನಾದರೂ ಕದ್ದು ತರಲಿಲ್ಲ. ನಾನು ಹಿಂದೆ ಮಾಡಿದ ಉಪಕಾರದ ಪ್ರತಿಫಲವಾಗಿ ಒಬ್ಬ ಮಹಾಪುರುಷನು ಇವನ್ನು ನನಗೆ ಉಚಿತವಾಗಿ ಇತ್ತನು. ಪೆಟ್ಟಿಗೆಯನ್ನು ಕೊಡು. ಇನ್ನು ನಿನ್ನ ಗಲಾಟೆಯೇ ಬೇಡ. ನನ್ನ ಪೂರ್ವವೃತ್ತಿಯನ್ನೇ ಕೈಕೊಂಡು ಜೀವಿಸುವೆನಂತೆ' ಎಂದು ಆ ಪೆಟ್ಟಿಗೆಯನ್ನು ಅವಳ ಕೈಯ್ಯಿಂದ ಕಿತ್ತುಕೊಂಡು, ಮೆಟ್ಟಲನ್ನು ಇಳಿದುಹೋಗುವವನಂತೆ ನಟಿಸಿದನು. ರತ್ನಗಳಿಗೆ ಮರುಳಾದ ರತ್ನಮ್ಮನು, ತನ್ನ ತಪ್ಪನ್ನು ಒಪ್ಪಿಕೊಂಡು, ಗಂಡನನ್ನು ದೈನ್ಯದಿಂದ ಬೇಡಿಕೊಂಡಳು. ಆ ಮೇಲೆ ಸಮಾಧಾನ ಹೊಂದಿದವನಂತೆ ಗಂಗಾರಾಮನು ಪುನಃ ಮೆಟ್ಟಲನ್ನು ಹತ್ತಿದನು. ಅಂದು ರತ್ನಾಬಾಯಿ ಗಂಗಾರಾಮನಿಗೆ ಅಪೂರ್ವ ರೀತಿಯಿಂದ ಸತ್ಕರಿಸಿದಳು. ಮಧ್ಯಾಹ್ನ ಊಟ ತೀರಿದ ಮೇಲೆ ಗಂಗಾರಾಮನಿಗೆ ವೀಳ್ಯದ ಹರಿವಾಣವನ್ನು ತಂದಿತ್ತು, ತಾನೂ ಬಳಿಯಲ್ಲಿಯೇ ಕುಳಿತುಕೊಂಡು,

ತಾಂಬೂಲವನ್ನು ಮಡಿಸಿ ಕೊಡುತ್ತಾ "ಅಲ್ಲರಿ! ಈ ಉಂಗುರಗಳನ್ನು ಈಗೇನು ಮಾಡಲಿರುವಿರಿ?" ಎಂದು ಕೇಳಿದಳು.

**ಗಂಗಾರಾಮು**:—ಅದಕ್ಕೇನು ಯೋಚನೆ? ಸರಾಫಕಟ್ಟೆಗೆ ಹೋಗುವುದು, ಅವುಗಳನ್ನು ತೋರಿಸುವುದು, ವಿಕ್ರಯಿಸುವುದು, ಹಣ ಗಂಟುಕಟ್ಟುವುದು—ಅಷ್ಟೇ.

**ರತ್ನ**:—ಗಂಡಸರ ಬುದ್ಧಿವಂತಿಗೆಯೆಂದರೆ ಇದೀಗ!

**ಗಂಗಾ**:—ಅದೇನು ಹಾಗೆ ಹೇಳುವೆ?

**ರತ್ನ**:—ಬಡಪತ್ತಿನಲ್ಲಿರುವ ನಮಗೆ ಇಂಥಾ ರತ್ನಗಳು ಎಲ್ಲಿಂದ ಬಂದವು ಎಂದು ಯಾರಿಗಾದರೂ ಸಂದೇಹ ಬರಲಾರದೇ? ಅದೂ ಅಲ್ಲದೆ ನಿಮಗಾದರೂ ಆ ಸರಾಫರು ಸುಳ್ಳು ಬೆಲೆಯನ್ನು ಹೇಳಿ ಮೋಸ ಮಾಡಲಾರರೇ?

**ಗಂಗಾ**:—ಅದೇನು? ನಿನ್ನ ಪರೀಕ್ಷೆ ಮಾಡಿದ ನನಗೆ ಈ ರತ್ನ ಪರೀಕ್ಷೆ ಮಾಡುವ ಸಾಮರ್ಥ್ಯ ಇಲ್ಲವೆನ್ನುವಿಯಾ? ಏನೇ?

**ರತ್ನ**:—ಹಗಲೂ ರಾತ್ರಿ ಹುಕ್ಕೆ ಸೇದಿ ಮಾಡಿನ ಗಳಾ ಎಣಿಸುವ ವರಿಗೆ ರತ್ನ ಪರೀಕ್ಷೆಯಂತೆ, ರತ್ನ ಪರೀಕ್ಷೆ—ಸಾಕು ಸುಮ್ಮಗಿರಿ.

**ಗಂಗಾ**:—ಅಲ್ಲವೇ, ಮತ್ತೇನು ಮಾಡಬೇಕೆಂದು ನೀನು ಹೇಳುವೆ?

**ರತ್ನ**:—ಆ ಮುತ್ತಿನ ಸರಾಫನನ್ನು ಇಲ್ಲಿಗೇ ಕರತನ್ನಿರಿ.

**ಗಂಗಾ**:—ಅದೇನು? ನಿನಗೆ ಅವನ ಮುತ್ತು ಬೇಕೇ?

**ರತ್ನ**:—"ಇಸ್ಸೀ! ಅದೆಂಥಾ ಮಾತು! ಆ ಉಂಗುರಗಳ ಬೆಲೆ ಯನ್ನು ನಾನೇ ಇಲ್ಲಿ ಇದ್ದು ಮಾಡಿಸುವೆನಂತೆ. ಇಲ್ಲವಾದರೆ ಅವರು ನಿಮ್ಮನ್ನು ಮೋಸಗೊಳಿಸುವರು."

ಗಂಗಾರಾಮನಿಗೆ ಹೆಂಡತಿಯ ಸೂಚನೆ ಸಮ್ಮತವಾಯಿತು. ತನ್ನಲ್ಲಿ ಅಮೂಲ್ಯವಾದ ಉಂಗುರಗಳಿರುವುದನ್ನು ಊರವರು ತಿಳಿದರೆ, ಕಳವಿನ ಸರಕನ್ನು ಹೊಡಕೊಂಡನೆಂದು ಪುಕಾರ ಎಬ್ಬಿಸಬಹುದು, ಗುಟ್ಟಿ ನಿಂದಲೇ ಅವನ್ನು ವಿಕ್ರಯಿಸಿ ಗಂಟುಕಟ್ಟುವುದು ಒಳ್ಳೆಯದೆಂದು ಆತನು ತಿಳಿದನು.

## ಐದನೆಯ ಅಧ್ಯಾಯ

## ಸರಾಫನ ಕೊಲೆ

ಮುಸ್ಸಂಜೆ ಕಳೆದು ಕತ್ತಲು ಕಾಲಿಟ್ಟಿತು. ಗಂಡನ ಬರವನ್ನು ಹಾರೈಸುತ್ತ ರತ್ನಮ್ಮ ಜಗಲಿಗೆ ಒತ್ತಾದ ಕೋಣೆಯಲ್ಲಿ ಕುಳಿತಿದ್ದಳು. ಅಷ್ಟರಲ್ಲಿ ಯಾರೋ ಮೆಟ್ಟಿಲನ್ನು ಹತ್ತಿ ಬಂದ ಸದ್ದು ಕೇಳಿಸಿತು. ಹೊರಬಾಗಿಲ ಅಗಳಿಯನ್ನು ತೆಗೆದು "ಯಾರು?" ಎಂದು ರತ್ನಮ್ಮ ಪ್ರಶ್ನಿಸಿದಳು. ಸರಾಫರನ್ನು ಕರೆದು ತಂದಿರುವೆನೆಂದು ಗಂಗಾರಾಮನು ಉತ್ತರಕೊಟ್ಟು, ಸರಾಫರನ್ನು ಒಳಗೆ ಕರೆದುಕೊಂಡು ಹೋಗಿ, ಹೊರ ಬಾಗಿಲ ಅಗಳಿಯನ್ನು ಭದ್ರವಾಗಿ ಬಿಗಿದನು. ಆ ಮೇಲೆ ಕೋಣೆ ಯಲ್ಲಿ ಸರಾಫನೂ, ಗಂಗಾರಾಮನೂ, ಅವನ ಹೆಂಡತಿಯೂ ಒಂದು ಕಾಲುದೀಪದ ಬಳಿಯಲ್ಲಿ ಕುಳಿತುಕೊಂಡರು. ರತ್ನಮ್ಮನು ಉಂಗುರ ಗಳ ಪೆಟ್ಟಿಗೆಯನ್ನು ತೆರೆದು "ಸರಾಫರೇ! ನಮ್ಮಲ್ಲಿ ಮಾರಾಟಕ್ಕೆ ಮೂರು ವಜ್ರದ ಉಂಗುರುಗಳಿವೆ, ನೋಡಿ. ಏನು ಬೆಲೆ ಕೊಡುತ್ತೀರಿ? ಹೇಳಿ" ಎಂದು ಪ್ರಶ್ನಿಸಿದಳು. ಸರಾಫನು ಕಿಸೆಯಲ್ಲಿರುವ ಭೂತಗನ್ನಡಿಯನ್ನು ಒಂದು ಕಣ್ಣಿಗೆ ಇಟ್ಟುಕೊಂಡು, ರತ್ನ ಪರೀಕ್ಷೆಯನ್ನು ಸಿಧಾನವಾಗಿ ಓರೆಕಣ್ಣಿನಿಂದ ಮಾಡುತ್ತಾ ಇದ್ದನು.

ಈ ಸರಾಫನನ್ನು ಕುರಿತು ಒಂದೆರಡು ಮಾತುಗಳನ್ನು ಹೇಳ ಬೇಕಾಗಿದೆ. ಈ ಸರಾಫನು ಹೆಚ್ಚಾಗಿ ಕಳವಿನ ಸಾಮಗ್ರಿಗಳನ್ನು ಕೊಂಡುಕೊಳ್ಳುವವನೆಂದು ಅನೇಕರು ತಿಳಿದಿದ್ದರು. ರತ್ನಾಬಾಯಿಯೂ ಹಾಗೆಯೇ ಕೇಳಿದ್ದಳು. ಬಡ ಗಂಗಾರಾಮನಲ್ಲಿ ಇಂಥಾ ಒಡವೆಗಳು ಬರಲಾರವೆಂಬ ಸಂದೇಹವು ಸರಾಫನಿಗೆ ಆಗಲೇ ಮೂಡಿತ್ತು. ಆದಷ್ಟು ಕಡಮೆ ಬೆಲೆಗೆ ಅವನ್ನು ಹೊಡಕೊಳ್ಳಬೇಕೆಂದು, ಪರೀಕ್ಷೆಯ ನೆವದಿಂದ ಒಂದು ಕಣ್ಣನ್ನು ರತ್ನದ ಮೇಲೂ, ಇನ್ನೊಂದು ಕಣ್ಣನ್ನು ಈ ದಂಪತಿಗಳ ಮೇಲೂ ಅವನು ಇಟ್ಟಿದ್ದನು. ರತ್ನಮ್ಮನು ತನ್ನ ಗಂಡನಿಗೆ "ಸುಮ್ಮನಿರಿ" ಎಂದು ಕಣ್ಣಿನಿಂದ ಸನ್ನೆ ಮಾಡಿದ್ದನ್ನು ಅವನು ಕಂಡಿದ್ದನು. ಆದರೆ ಅವನಲ್ಲಿ ಎರಡು ದೋಷಗಳಿದ್ದವು. ಕಿವಿ ಸ್ವಲ್ಪ ಕಿವುಡು; ಎರಡನೇಯ ದಾಗಿ ಸ್ತ್ರೀಯರೊಡನೆ ಸರಸವಾಡುವುದಕ್ಕೆ ಕಾಂಕ್ಷೆಯುಳ್ಳವನು.

ಆದ್ದರಿಂದ ಅವನನ್ನು ಮುಂಕುಗೊಳಿಸಿ ಒಳ್ಳೆಯ ಬೆಲೆಯನ್ನು ಹೊಡ ಕೊಳ್ಳಬೇಕೆಂದು ರತ್ನಮ್ಮನು ಈ ಹಂಚಿಕೆಯನ್ನು ಹೂಡಿದ್ದಳು.

ಸರಾಫನು ಕೊಂಚ ಹೊತ್ತು ನೋಡಿದ ಮೇಲೆ "ಈ ರತ್ನವು ತುಂಬಾ ಕಲೆಗಳುಳ್ಳದ್ದು. ರತಿಗೆ 50 ರೂಪಾಯಿ ಮಿಕ್ಕಿ ಯಾರೂ ಬೆಲೆ ಕೊಡಲಾರರು" ಎಂದು ನಸುನಗುತ್ತ ಹೇಳಿದನು.

**ರತ್ನಮ್ಮ**:—ಏನು! ತಮಾಷೆ ಮಾಡುತ್ತೀರಾ? ಮುತ್ತಿನ ಸರಾಫರಿಗೆ ರತ್ನದ ಬೆಲೆ ಗೊತ್ತಿಲ್ಲ ಎನ್ನಬೇಕೇ? ನಿನ್ನೆ ಇಬ್ಬರು ಇದಕ್ಕೆ 2,000 ರೂಪಾಯಿ ಬೆಲೆ ಕಟ್ಟಿದರಲ್ಲಾ!

**ಸರಾಫ**:—ಅವನೇನೋ ದಿವಾಳಿದಾಸನಿರಬಹುದು.

**ರತ್ನ**:—ಓಹೋ! ನಿಮ್ಮ ಈ ಠಕ್ಕುಗಿಕ್ಕು ನಮ್ಮಲ್ಲಿ ನಡೆಯದು. ನ್ಯಾಯವಾದ ಬೆಲೆಕೊಟ್ಟರೆ ಮಾತ್ರ ಮಾರುವೆವು.

**ಸರಾಫ**:—ಅಮ್ಮಾ! ಸ್ವರವನ್ನು ಅಷ್ಟು ಏರಿಸಬೇಡಿರಿ! ಇಂಥಾ ರತ್ನಗಳು ಈ ಮನೆಯಲ್ಲಿ ಹೇಗೆ ಬಂದವೆಂಬುದನ್ನು ಯಾರಾದರೂ ವಿಚಾರಿಸ ತೊಡಗಿದರೆ—

**ರತ್ನಮ್ಮ**:—ಏನು? ಏನಂದಿರಿ? ನಮ್ಮನ್ನು ಬೆದರಿಸಲಿಕ್ಕೆ ಹೊರಟಿರಾ? ನಾವು ಅಂಥಾ ಒಣ ಬೆದರಿಕೆಗೆ ಸೊಪ್ಪು ಹಾಕುವವರಲ್ಲ.

ಗಂಗಾರಾಮನು ಈ ವಾದವಿವಾದಗಳಿಂದ ಕಾರ್ಯ ಕೆಟ್ಟೀತೆಂದು ತಿಳಿದನು. 'ದಾನಕ್ಕೆ ಬಂದ ಎತ್ತಿಗೆ ಹಲ್ಲು ಎಷ್ಟು' ಎಂದು ಚರ್ಚಿಸು ವುದು ಪ್ರಯೋಜನವಿಲ್ಲವೆಂದು ಅವನು ನೆನಸಿದನು. "ಸರಾಫರೇ! ಸುಮ್ಮನೆ ನಾವು ಚರ್ಚೆಯಿಂದ ಕಾಲ ಕಳೆಯುವುದು ಬೇಡ. ನಿಮಗೆ ಇಷ್ಟವಿದ್ದರೆ, ಈ ಮೂರು ಉಂಗುರಗಳಿಗೆ ಮೂರು ಸಾವಿರ ರೂಪಾಯಿ ಕೊಡಿರಿ. ಇಲ್ಲವಾದರೆ ಇವನ್ನು ನಾವು ಈಗ ವಿಕ್ರಯಿಸಲಾರೆವು" ಎಂದನು. ಸರಾಫನು ಅವುಗಳ ಬೆಲೆಯನ್ನು ಚೆನ್ನಾಗಿ ಅರಿತಿದ್ದನು. ಇನ್ನೂ ಕಾಲ ವಿಳಂಬ ಮಾಡಿದರೆ, ಕೈತಪ್ಪಿ ಹೋದೀತೆಂದು ಅವನು ಅರೆ ಮನಸ್ಸಿನಿಂದ ಬೆಲೆಯನ್ನು ನಿಷ್ಕರ್ಷೆ ಮಾಡುವಂತೆ ಸೊಟ್ಟ ಮೋರೆ ಮಾಡಿ "ಆಗಲಿ ನಿಮ್ಮ ಇಚ್ಛೆಯಂತೆ; ಆದರೆ ಪೂರಾ ಹಣವನ್ನು ತಂದಿಲ್ಲ. ಇಲ್ಲಿ ಮೂರು ಸಾವಿರ ರೂಪಾಯಿಯ ಅರ್ಧ ನೋಟುಗಳು ಇವೆ.

ಉಳಿದ ಅರ್ಧ ನೋಟುಗಳನ್ನು ನಾಳೆ ಬೆಳಿಗ್ಗೆ ನಮ್ಮ ಮನೆಗೆ ಬಂದರೆ ಕೊಡುವೆನು" ಎಂದು ನೋಟುಗಳನ್ನು ಒಳಕಿಸೆಯಿಂದ ತೆಗೆದು, ರತ್ನಮ್ಮನ ಕೈಗೆ ಇತ್ತನು. ರತ್ನಮ್ಮನಿಗೆ ಇದರಲ್ಲಿ ಮೋಸವಿದೆಯೆಂದು ಆಗಲೇ ಹೊಳೆಯಿತು. ತಮ್ಮ ಪತ್ತೆ ಹಚ್ಚುವುದಕ್ಕಾಗಿ, ಸರಾಫನು ಈ ಕುಹಕವನ್ನು ನಡೆಸಿರಬಹುದೆಂದು ಅವಳು ತಿಳಿದಳು. ಸರಾಫನು ಪೆಟ್ಟಿಗೆಯನ್ನು ತನ್ನ ಕಿಸೆಯೊಳಕ್ಕೆ ತೂರಿ, ಮನೆಯೊಳಗಿಂದ ಹೊರ ಬಿದ್ದನು. ಅಷ್ಟರಲ್ಲಿ ರತ್ನಮ್ಮನು ಒಳಗೆ ಓಡಿಹೋಗಿ, ಉದ್ದವಾದ ಒಂದು ಚೂರಿಯನ್ನು ತಂದು ತನ್ನ ಗಂಡನ ಕೈಗೆ ಇತ್ತು 'ಇಗೋ, ಕತ್ತಲಾಗಿದೆ. ಜನ ಸಂಚಾರವಿಲ್ಲ. ಸರಾಫನ ಹಿಂದೆಯೇ ಹೋಗಿ ಈ ಚೂರಿಯಿಂದ ಆತನ ಬೆನ್ನಿಗೆ ಬಲವಾಗಿ ತಿವಿದುಬಿಡಿ" ಎಂದಳು.

**ಗಂಗಾರಾಮ:**—ಇದೇನು ವಿಪರೀತವೇ! ಕೊಲೆ ಮಾಡ ಬೇಕೆಂದು ಹೇಳುವಿಯಾ?

**ರತ್ನಮ್ಮ:**—ಇಲ್ಲವಾದರೆ, ಈ ಮೋಸಗಾರನು ನಾಳೆ ಬೆಳಿಗ್ಗೆ ಪೋಲೀಸಿನವರ ಕೈಗೆ ನಮ್ಮನ್ನು ಒಪ್ಪಿಸುವುದು ಖಂಡಿತ.

**ಗಂಗಾರಾಮ:**—ಅದೇತಕ್ಕೆ ಹೇಳುವೆ?

**ರತ್ನಮ್ಮ:**—ಸರಾಫನು ಎದ್ದು ಹೋಗುವಾಗಲೇ ನಮ್ಮಿಬ್ಬರನ್ನೂ ವಕ್ರದೃಷ್ಟಿಯಿಂದ ನೋಡುತ್ತಿದ್ದನೆಂದು ನನಗೆ ಗೊತ್ತಾಯಿತು. ಕಿಸೆಯಲ್ಲಿ ಪೂರ್ಣ ನೋಟುಗಳಿದ್ದರೂ, ಅರ್ಧಗಳನ್ನು ಮಾತ್ರ ಆತನು ನನ್ನ ಕೈಗೆ ಇತ್ತನು. ಹೊರಕ್ಕೆ ಇಣಿಕುತ್ತಿದ್ದ ಅರ್ಧ ನೋಟುಗಳ ಇನ್ನೊಂದು ಕಟ್ಟನ್ನು ಆತನು ಕಿಸೆಯೊಳಕ್ಕೆ ತಳ್ಳಿಬಿಟ್ಟನು. ಇದರಿಂದ ನಾಳೆ ನಮಗೆ ಅಪಾಯ ಬರುವುದು ಖಂಡಿತ.

**ಗಂಗಾ:**—ಒಂದು ವೇಳೆ ಹಾಗಿದ್ದರೂ, ಕೊಲೆಗೇಡಿಯಾಗಲಿಕ್ಕೆ ನನಗೆ ಮನಸ್ಸು ಒಗ್ಗುವುದಿಲ್ಲ.

**ರತ್ನಮ್ಮ:**—ಹಾಗಿದ್ದರೆ ಕಾರಾಗೃಹದ ರುಚಿಯನ್ನು ಒಮ್ಮೆ ನೋಡಿ ಬನ್ನಿ. ಅಷ್ಟೇ ಅಲ್ಲ. ಆ ರತ್ನಗಳ ಬೆಲೆಯು ಅವನು ಹೇಳಿದ್ದಕ್ಕಿಂತ ಎಷ್ಟೋ ಹೆಚ್ಚಾಗಿದೆ ಎಂಬುದು ಖಂಡಿತ. ಅವನ್ನು ಚೆನ್ನಾಗಿ ಪರೀಕ್ಷಿಸುತ್ತಿದ್ದಾಗ, ಆಶ್ಚರ್ಯದಿಂದ ಅವನ ಕಣ್ಣುಗಳು ಅರಳುತ್ತಿದ್ದುವು.

ಅವನು ನಮಗೆ ಮೋಸ ಮಾಡಬೇಕೆಂದಿರುವಾಗ, ನಾವು ಅವನಿಗಿಂತ ಎರಡು ಹೆಜ್ಜೆ ಮುಂದೆ ಕಾಲಿಡುವುದು ತಪ್ಪಾಗಲಾರದು.

**ಗಂಗಾರಾಮ**:—ನೀನು ಏನೇ ಹೇಳು. ಈ ಭಯಂಕರ ಕೆಲಸವು ನನ್ನಿಂದ ಆಗದು.

**ರತ್ನಮ್ಮ**:—"ಹಾಗಿದ್ದರೆ ನನ್ನ ಕೈಬಳೆ ನೀವು ತೊಟ್ಟುಕೊಳ್ಳಿ! ನಾನೇ ಆ ಕೆಲಸವನ್ನು ಮಾಡುವೆನಂತೆ" ಎಂದು ಸರಾಫನ ಹಿಂದೆಯೇ ಕತ್ತಿಯನ್ನು ಹಿಡಿದುಕೊಂಡು ಕತ್ತಲಲ್ಲಿ ಹೊರಟಳು. ಗಂಗಾರಾಮನು ಇದರಿಂದ ಏನು ವಿಪರೀತ ಆಪತ್ತು ಬರುವುದೋ ಎಂದು ಕಂಪಿಸುತ್ತಾ ಅವಳ ಹಿಂದೆಯೇ ಹೋದನು. ಅಷ್ಟರಲ್ಲಿ ರತ್ನಮ್ಮನು ಸರಾಫನಿಗೆ ಸಮೀಪಿಸಿ ಚೂರಿಯಿಂದ ಅವನ ಬೆನ್ನಿಗೆ ಬಲವಾಗಿ ತಿವಿದಳು. ಸರಾಫನು 'ಕೊಲೆ, ಕೊಲೆ' ಎಂದು ಕೂಗುತ್ತಾ ಕಿಸೆಯಲ್ಲಿದ್ದ ಪಿಸ್ತೂಲನ್ನು ಹೊರಕ್ಕೆ ತೆಗೆದು, ಸುಟ್ಟುಬಿಟ್ಟು ತಾನೂ ನೆಲದ ಮೇಲೆ ಬಿದ್ದನು. ಪಿಸ್ತೂಲಿನ ಶಬ್ದವನ್ನು ಕೇಳಿದೊಡನೆಯೇ ದೂರದಲ್ಲಿದ್ದ ಪೋಲೀಸಿನವನೊಬ್ಬನು ಓಡಿಬಂದನು. ನೆಲದ ಮೇಲೆ ರಕ್ತದಲ್ಲಿ ಪ್ರಾಣೋತ್ಕ್ರಮಣದ ವ್ಯಥೆಯನ್ನು ತಾಳಲಾರದೆ ಸರಾಫನು ಬೋರಲ ಬಿದ್ದಿದ್ದನು. ರತ್ನಮ್ಮನು ಗುಂಡಿನೇಟು ತಗಲಿ, ಅವನ ಬಳಿಯಲ್ಲಿ ಸ್ಮೃತಿ ಇಲ್ಲದೆ ಬಿದ್ದಿದ್ದಳು. ಗಂಗಾರಾಮನು ಓಡುತಿದ್ದನು. ಪೋಲೀಸಿನವನು ಆ ಕ್ಷಣವೆ, ಬಲವಾಗಿ ಸಿಳ್ಳು ಹಾಕಿದನು. ಇನ್ನೆರಡು ಮಂದಿ ಪೋಲೀಸಿನವರು ಬಂದು ಸೇರಿದರು. ವಾಯುವಿಹಾರಕ್ಕಾಗಿ ಸಂಚರಿಸುತ್ತಿರುವವನಂತೆ ಕಾಣುವ ದೀರ್ಘಕಾಯನಾದ ಪುರುಷನೊಬ್ಬನು ಅಲ್ಲಿಗೆ ಬಂದನು. ಪೋಲೀಸಿನವರು ಗಂಗಾರಾಮನನ್ನು ಬೆನ್ನಟ್ಟಿ ಹಿಡಿದರು. "ಕೊಲೆ ಮಾಡಿದವನು ನಾನಲ್ಲ" ಎಂದು ಅವನು ಎಷ್ಟು ಒದರಿದರೂ ಕೇಳದೆ ಅವನನ್ನು ಬಂಧಿಸಿ, ಅವನನ್ನೂ, ಮೃತವಾದ ಆ ಎರಡು ದೇಹಗಳನ್ನೂ ಒಂದು ಬಂಡಿಯೊಳಗಿರಿಸಿ ಪೋಲೀಸು ಠಾಣ್ಯಕ್ಕೆ ಕೊಂಡು ಹೋದರು. ದೀರ್ಘಕಾಯನಾದ ವ್ಯಕ್ತಿಯೂ ಅವರನ್ನು ಹಿಂಬಾಲಿಸುತ್ತಾ, ಪೋಲೀಸು ಠಾಣ್ಯದ ಕಡೆಗೆ ಹೋದನು.

---

## ಆರನೆ ಅಧ್ಯಾಯ

## ಜಂಗಬಹದ್ದೂರನ ಪ್ರವೇಶ

ಗಂಗಾರಾಮನ ವಿಚಾರವನ್ನು ಅಲ್ಲಿಯೇ ಬಿಟ್ಟು, ವಾಚಕರು ನಮ್ಮೊಂದಿಗೆ ಪೂನೆಗೆ ತೆರಳಬೇಕಾಗುವುದು. ಪೂನೆಯಲ್ಲಿ ಪೇಷ್ವಾಯಿ ದರಬಾರವು ಕೊನೆಗೊಂಡಿದ್ದು, ಬ್ರಿಟಿಷ್ ಸರಕಾರದ ಅಧೀನವಾಗಿ ಐದು ನಾಲ್ವತ್ತು, ಐವತ್ತು ವರ್ಷಗಳು ದಾಟಿದ್ದರೂ ಪೂನೆಯು ಮುಂಬಾಯಿ ಸಂಸ್ಥಾನದ ರಾಜಕೀಯ ರಾಜಧಾನಿಯಾಗಿ ಇನ್ನಷ್ಟು ಅಭಿವೃದ್ಧಿಗೆ ಬಂದಿತ್ತು. ಮುಂಬಯಿ ಪಟ್ಟಣವು ಹಿಂದೂಸ್ಥಾನದ ವ್ಯಾಪಾರದ ಹೆಬ್ಬಾಗಿಲು ಎನಿಸಿಕೊಂಡಿದ್ದರೂ, ಈ ಸಂಸ್ಥಾನದ ಗವರ್ನರು ವರ್ಷದಲ್ಲಿ ಸುಮಾರು ನಾಲ್ಕು ತಿಂಗಳು ಪೂನೆಯಲ್ಲಿ ವಾಸಮಾಡುತ್ತಿದ್ದರು. ಪೂನೆಗೂ ಮುಂಬಾಯಿಗೂ ಹಾಗೆಯೇ ಮುಂಬಾಯಿಯಿಂದ ಪಂಜಾಬಿನ ವರೆಗೆ ರೈಲುಬಂಡಿಗಳ ಓಡಾಟಗಳಿರುವುದರಿಂದ ಉತ್ತರ ಹಿಂದೂಸ್ಥಾನದ ಶ್ರೀಮಂತರು ವಿಲಾಯಿತಿಯ ಪ್ರವಾಸವನ್ನು ಮಾಡುವುದಕ್ಕಾಗಲೀ ಅಥವಾ ವ್ಯಾಪಾರ ವ್ಯವಹಾರವನ್ನು ಮುಂಬಯಿಯ ಮೂಲಕ ವಿಲಾಯಿತಿಯೊಡನೆ ಬೆಳೆಯಿಸುವುದಕ್ಕಾಗಲಿ ಮುಂಬಯಿ ಪಟ್ಟಣಕ್ಕೆ ಆಗಾಗ ತಂಡ ತಂಡವಾಗಿ ಬರುತ್ತಿದ್ದರು. ಅಂಥವರು ಮುಂಬಯಿ ಸರಕಾರದ ರಾಜಕೀಯ ರಾಜಧಾನಿಯಾದ ಪೂನಾ ಪಟ್ಟಣಕ್ಕೆ ಬಾರದೆ ಇರುತ್ತಿರಲಿಲ್ಲ. ಮುಂಬಯಿ ಸರಕಾರದ ವರಿಷ್ಠ ಅಧಿಕಾರಿಗಳ ಆಫೀಸುಗಳೆಲ್ಲ ಪೂನೆಯಲ್ಲಿಯೇ ಇದ್ದುದರಿಂದ ಪಂಜಾಬು ರಾಜಪುತಾನ ಇವುಗಳಲ್ಲಿರುವ ಸಾಮಂತ ರಾಜರುಗಳೂ ಪೂನೆಯಲ್ಲಿ ಆಗಾಗ ಬಂದು ಉಳಕೊಳ್ಳಲಿಕ್ಕೆ ದೊಡ್ಡ ಬಂಗಲೆಗಳನ್ನು ಕಟ್ಟಿಸಿದ್ದರು. ಇವರು ವರ್ಷದಲ್ಲಿ ಒಂದೆರಡು ತಿಂಗಳು ಪೂನೆಯಲ್ಲಿ ಬಂದು ಕಾಲ ಕಳೆಯುತ್ತಿದ್ದರು. ಆ ಕಾಲದಲ್ಲಿ ಈಗಿನಂತೆ ವ್ಯಾಪಾರ ವ್ಯವಹಾರದ ಅನುಕೂಲತೆಗಾಗಿ ದೊಡ್ಡ ದೊಡ್ಡ ಬ್ಯಾಂಕುಗಳು ತಲೆಯೆತ್ತಿದ್ದಿಲ್ಲ. ಹಣದ ಚಲಾವಣೆಯು ಈ ಒಳ ಪ್ರಾಂತಗಳಿಂದ ಮುಂಬಾಯಿಗೂ ಪೂನೆಗೂ ಹುಂಡಿ ಬಂಡಸಾಲೆಗಳ ಮೂಲಕವಾಗಿ ನಡೆಯುತ್ತಿತ್ತು. ಹೀಗಾಗಿ ಮುಂಬಯಿಯಲ್ಲಿರುವ

ದೊಡ್ಡ ದೊಡ್ಡ ಸಾಹುಕಾರರ ಮತ್ತು ಹುಂಡಿ ವರ್ತಕರ ಮಳಿಗೆಗಳ ಶಾಖೆಗಳು ಪೂನಾ ಪಟ್ಟಣದಲ್ಲಿಯೂ ಇರುತ್ತಿದ್ದವು.

ಪೂನೆಯ ಪಟ್ಟಣದ ಸೊಬಗನ್ನು ವರ್ಣಿಸಲು ಇಲ್ಲಿ ಪ್ರಸಕ್ತವಾಗ ಲಾರದು; ಆದರೆ ಕಥಾ ವಿಷಯವನ್ನು ಮುಂದೊತ್ತುವುದಕ್ಕೆ ಇಲ್ಲಿಯ ಒಂದು ದೊಡ್ಡ ರಾಜಬೀದಿಯಲ್ಲಿ ವಾಚಕರು ನಮ್ಮೊಡನೆ ಒಮ್ಮೆ ಸಂಚರಿಸ ಬೇಕಾಗುವುದು. ಇದು ಪೂನಾ ಪಟ್ಟಣದ ರಾಜರಸ್ತೆಗಳಲ್ಲಿ ಅತೀ ಅಗಲವಾದ ಒಂದು ರಸ್ತೆ. ಇಕ್ಕಡೆಗಳಲ್ಲಿಯೂ ದೊಡ್ಡ ದೊಡ್ಡ ಮಹಡಿ ಮನೆಗಳು; ಇವುಗಳಲ್ಲಿ ಒಂದನ್ನು ಈಗ ಪ್ರವೇಶ ಮಾಡೋಣ. ಕೆಳ ಅಂತಸ್ತಿನ ಮುಂಭಾಗದಲ್ಲಿ ಅಗಲವಾದ ಒಂದು ಜಗಲಿ. ಈ ಜಗಲಿಯ ಅಂಚಿನಲ್ಲಿ ಪಾತ್ರೆಗಳಲ್ಲಿ ನೆಟ್ಟಿರುವ ಬಗೆಬಗೆಯ ಬಣ್ಣದ ಮತ್ತು ಸುವಾ ಸನೆಯ ಹೂವಿನ ಗಿಡಗಳು. ಅವುಗಳ ಹಿಂಬದಿಯಲ್ಲಿ ಗೋಡೆಗೆ ಒತ್ತಾಗಿ ಹೆಬ್ಬಾಗಿಲಿನ ಸಮೀಪದಲ್ಲಿ ಬೆಳ್ಳಿಯ ಬಿಲ್ಲೆ ಸೊಂಟಕ್ಕೆ ಸುತ್ತಿ ಕೊಂಡು ಒಬ್ಬ (ಸಿಪಾಯಿ) ದರವಾನನು ನಿಂತಿದ್ದನು. ಈ ಮನೆ ಯವರೊಡನೆ ಮಾತನಾಡುವುದಕ್ಕೆಂದು ಬರುವವರ ಸಮಾಚಾರವನ್ನು ಒಳಗೆ ತಿಳುಹಿ ಅಪ್ಪಣೆ ಪಡೆದು ಅಂಥಾ ಅತಿಥಿಗಳನ್ನು ಒಳಕ್ಕೆ ಕರೆದು ಕೊಂಡು ಹೋಗುವುದು ಇವನ ಕೆಲಸ. ಇವನ ಕೆಂಪು ಬಣ್ಣದ ಉದ್ದವಾದ ನಿಲುವಂಗಿ, ತಲೆಗೆ ಸುತ್ತಿದ ಬಿಳಿ ಫೇಟ, ಕಾಲಿಗೆ ತೊಟ್ಟು ಕೊಂಡ ಬಿಗಿಯಾದ ಇಜಾರು, ಚೆನ್ನಾಗಿ ತಿರುವಿ ಸಿಲ್ಲಿಸಿದ ಮೀಸೆಗಳು, ಗಲ್ಲ ತುಂಬಾ ಇರುವ ಗಡ್ಡ, ಇವುಗಳನ್ನು ನೋಡಿದಾಗಲೆ ಅವನ ಅಪ್ಪಣೆ ಯನ್ನು ಪಡೆಯದೆ ಮನೆಯೊಳಕ್ಕೆ ನಾವು ಪ್ರವೇಶ ಮಾಡಲಾರೆವೆಂದು ನಿಮಗೆ ಗೊತ್ತಾಗುವುದು. ಒಳಗೆ ಪ್ರವೇಶ ಮಾಡಿದರೆ ದೊಡ್ಡ ಕಿಟಿಕಿ ಗಳಿಂದ ಕೂಡಿದ ವಿಸ್ತಾರವಾದ ಕೋಣೆಯೊಳಗೆ ನೆಲದ ಮೇಲೆ ಉದ್ದಕ್ಕೂ ಹೆಚ್ಚು ಬೆಲೆಯುಳ್ಳ ಒಂದು ಜಮಖಾನೆಯನ್ನು ಹಾಸಿದ್ದರು. ಕೋಣೆಯ ಒಂದು ಕೊನೆಯಲ್ಲಿ ಸುಮಾರು ಎಂಟು ಹತ್ತು ಅಡಿ ಚೌಕ ವುಳ್ಳ ಒಂದು ರತ್ನ ಕಂಬಳಿಯನ್ನು ಈ ಜಮಖಾನೆಯ ಮೇಲೆ ಹಾಸಿತ್ತು. ಅದರ ಮೇಲೆ ಲೋಡಿಗೆ ಒರಗಿಕೊಂಡು ಯಜಮಾನನು ಕುಳಿತಿದ್ದನು. ಅವನ ಮುಂಗಡೆ ಸುಮಾರು ಒಂದೂವರೆ ಫೀಟು ಎತ್ತರ ಒಂದು ಚಿಕ್ಕ

ಮೇಜು, ಅದರ ಮೇಲೆ ಬಗೆಬಗೆಯ ಬಣ್ಣಗಳಿಂದ ಶೋಭಿತವಾದ ಮತ್ತು ಜರಿಯ ಕೆತ್ತನೆ ಕೆಲಸವುಳ್ಳ ಒಂದು ವಸ್ತ್ರವನ್ನು ಹಾಸಿದೆ. ಈ ಮೇಜಿನ ಒಂದು ಮೂಲೆಯಲ್ಲಿ ಶಾಯಿಯನ್ನು ಇಡುವ ಗಾಜಿನ ಒಂದೆರಡು ದಾಊತಿಗಳು, ಗರಿ ಲೇಖನಿಗಳು, ರತಿದಾನಿ ಕಾಣುತ್ತಿವೆ. ಲೋಡಿಗೆ ಒರಗಿಕೊಂಡ ಯಜಮಾನನು ದಪ್ಪವಾದ ಮತ್ತು ಉದ್ದವಾದ ಒಂದು ದೊಡ್ಡ ಪುಸ್ತಕವನ್ನು ಇಟ್ಟು, ಅದರ ಹಾಳೆಗಳನ್ನು ಮಗುಚುತ್ತಾ ಏನೋ ಗಣನೆ ಮಾಡುವಂತಿದ್ದನು. ಅವನ ಇಕ್ಕಡೆಗಳಲ್ಲಿಯೂ ಸ್ವಲ್ಪ ದೂರದಲ್ಲಿ ಗೋಡೆಗೆ ಒತ್ತಾಗಿ ಕೆಲವು ಗುಮಾಸ್ತರು ಕುಳಿತಿದ್ದರು. ಒಬ್ಬಿಬ್ಬರು ಪತ್ರವ್ಯವಹಾರವನ್ನು ನೋಡಿಕೊಳ್ಳುತಿದ್ದರು. ಉಳಿದವರು ಉದ್ದವಾದ ದಪ್ಪ ಪುಸ್ತಕಗಳನ್ನು ತೆರೆದುಕೊಂಡು ಬರೆಯುತ್ತಾ ಇದ್ದರು. ಗೋಡೆಗಳಿಗೆ ರಂಗನ್ನು ಕೊಟ್ಟಿರುವುದರಿಂದ ಕೋಣೆಯು ಶೋಭೆಯುಳ್ಳದ್ದಾಗಿತ್ತು. ಯಜಮಾನನ ತಲೆಯ ಮೇಲ್ಗಡೆಯಲ್ಲಿ 'ಒಂದು 'ಪಂಕ' ಆಡುತಿದ್ದು ಬಿಸಲಿನ ಬೇಗೆಯನ್ನು ತಣಿಸುತಿತ್ತು. ಯಜಮಾನನ ಎಡಗಡೆಯಲ್ಲಿ ತುಸು ದೂರದಲ್ಲಿ ಕಬ್ಬಿಣದ ಸಲಾಕೆಗಳಿಂದ ಭದ್ರವಾದ ದೊಡ್ಡ ಬೀಗವನ್ನು ಬಿಗಿದಿರುವ ಒಂದು ಬಾಗಿಲು ಕಾಣುತಿತ್ತು. ಇದರ ಒಳಗೆ ಅಮೂಲ್ಯವಾದ ವಸ್ತುಗಳನ್ನು ಇಟ್ಟಿರುವಂತೆ ಇದಕ್ಕಿರುವ ಭದ್ರವಾದ ದೊಡ್ಡ ಬೀಗವು ಸೂಚಿಸುತಿತ್ತು. ಕೋಣೆಯ ಇನ್ನೊಂದು ಕೊನೆಯಿಂದ ಮನೆಯ ಒಳಕ್ಕೆ ಪ್ರವೇಶಿಸಬೇಕು. ಇಲ್ಲಿ ನಿಂತರೆ ಈ ಭಾಗವು ನಿವಾಸಗೃಹವೆಂದು ಗೊತ್ತಾಗುವುದು. ಸಾಮಾನ್ಯವಾಗಿ ಸಾಹುಕಾರರಿಗೆ ಅವರ ನಿವಾಸ ಮತ್ತು ವ್ಯಾಪಾರ ವಹಿವಾಟವು ಒಂದೇ ಕಟ್ಟಡದಲ್ಲಿ ಜರಗುತಿತ್ತೆಂದು ಈ ಮಹಡಿ ಮನೆಯನ್ನು ನೋಡಿದರೆ ಭಾಸವಾಗುವುದು. ಮನೆಯ ಮೇಲಿನ ಅಂತಸ್ತಿನಲ್ಲಿ ಯಜಮಾನನು ತನ್ನ ವಿರಾಮದ ವೇಳೆಯನ್ನು ಕಳೆಯುತಿದ್ದನೆಂದು ಈ ಅಂತಸ್ತಿನ ರಚನೆಯಿಂದ ತಿಳಿಯಬಹುದು.

ಪೂರ್ವಾಹ್ನ ಹನ್ನೊಂದು ತಾಸಿನ ಸಮಯ. ಆಗ ಈ ಮಹಡಿ ಮನೆಯ ಎದುರಿಗೆ ಜೋಡು ಬಿಳಿ ಕುದುರೆಗಳನ್ನು ಕಟ್ಟಿದ ಒಂದು ದೊಡ್ಡ ಬ್ರೊಹೆಮ ಬಂಡಿಯು ಬಂದು ನಿಂತಿತು. ಅದರೊಳಗಿಂದ

ಒಬ್ಬ ವ್ಯಕ್ತಿಯು ಗಂಭೀರವಾದ ನಡಿಗೆಯಿಂದ ಕೆಳಗೆ ಇಳಿದನು. ಆಜಾನುಬಾಹುವಾದ ದೇಹ, ಅಗಲವಾದ ವಕ್ಷಸ್ಥಳ, ಚೆನ್ನಾಗಿ ಬಲಿತ ತೋಳುಗಳು, ಮೈಗೆ ಬಿಗಿಯಾಗಿ ತೊಟ್ಟುಕೊಂಡಿದ್ದ ಕಿನಕಾಪಿನ ನಿಲುವಂಗಿ, ತಲೆಗೆ ಸುತ್ತಿದ ಒಂದು ಇಂಚು ಅಗಲದ ಜರಿಯುಳ್ಳ ಫೇಟ, ಈ ಫೇಟೆಯ ಅಡಿಯಿಂದ ಕತ್ತಿನ ವರೆಗೆ ದಟ್ಟವಾಗಿ ಚಾಚಿಕೊಂಡಿದ್ದ ಕುರುಳುಕುರುಳಾದ ತಲೆಕೂದಲು, ಅದರ ಮೇಲೆ ಬೆನ್ನಕಡೆಯಲ್ಲಿ ಚಾಚಿಕೊಂಡಿರುವ ಫೇಟೆಯ ಬಾಲ, ಕಾಲುಗಳಿಗೆ ತೊಟ್ಟ ಶುಭ್ರವಾದ ಮತ್ತು ಸಡಿಲಾದ ಜರಿಅಂಚಿನ ಇಜಾರು, ಪಾದಗಳಿಗೆ ಮೆಟ್ಟಿದ ಜರಿ ಅಂಚಿನ ಚಡಾವು, ಇವುಗಳೆಲ್ಲಾ ಈ ವ್ಯಕ್ತಿಯ ಶ್ರೀಮಂತತನವನ್ನು ವ್ಯಕ್ತಗೊಳಿಸುತಿದ್ದವು. ಈ ವ್ಯಕ್ತಿಯ ಗಂಭೀರವಾದ ಮುದ್ರೆ, ವಿಶಾಲವಾದ ಕಣ್ಣುಗಳು, ಉದ್ದವಾಗಿ ಬಾಗಿದ ಗಿಳಿಮೂಗು, ಅಗಲವಾದ ಹಣೆ, ತಿದ್ದಿದ ಮೀಸೆಗಳು, ಸುಮಾರು ನೂರು ಅಂಗುಲ ಉದ್ದವಿರುವ ಕಪ್ಪಾದ ಗಡ್ಡ ಇವುಗಳು, ಈ ವ್ಯಕ್ತಿಯ ಮೇಲೆ ಒಂದು ಪ್ರಕಾರವಾದ ವರ್ಚಸ್ಸನ್ನು ಒಂದುಗೂಡಿಸಿದ್ದವು. ಅವನು ಬಂಡಿಯಿಂದ ಇಳಿದೊಡನೆ ಅವನ ಠೀವಿಯನ್ನು ನೋಡಿ, ದರವಾನನು ಬಗ್ಗಿ ಸಲಾಮು ಮಾಡುತ್ತಾ ಕೈಕಟ್ಟಿ ನಿಂತುಕೊಂಡನು. "ಹುಂಡಿ ಸಾಹುಕಾರ ನಂದೂಲಾಲ್ ಸೇಟರ ಮನೆಗೆ ಇದೆಯೇನು?" ಎಂದು ವ್ಯಕ್ತಿಯು ಅಚ್ಚ ಉರ್ದು ಭಾಷೆಯಿಂದ ದರವಾನನೊಡನೆ ಪ್ರಶ್ನಿಸಿದನು. ಹೌದೆಂದು ದರವಾನನು ಉತ್ತರ ಕೊಟ್ಟನು. ಪಂಜಾಬದಿಂದ ಜಮೀನ್‌ದಾರ ಷಂಷೇರ ಜಂಗ್ ಬಹದ್ದೂರರು ಭೊರಗೆ ಬಂದು ಸಮಯ ಕಾಯುತ್ತಾರೆಂದು ತಿಳಿಸುವೆಯಾ?" ಎಂದು ಆ ದೀರ್ಘಾಕಾರದ ವ್ಯಕ್ತಿಯು ಕೇಳಿದನು. ದರವಾನನು ಚಟ್ಟನೆ ಒಳಕ್ಕೆ ಓಡಿ ಅರೆಗಳಿಗೆಯೊಳಗೆ ಹೊರಗೆ ಬಂದು, 'ಒಳಗೆ ಬರಬೇಕಂತೆ' ಎಂದು ನಮಸ್ಕರಿಸಿ ನಿಂತನು.

ವ್ಯಕ್ತಿಯು ನಿಧಾನವಾದ ನಡಿಗೆಯಿಂದ ತನ್ನ ಬೆಳ್ಳಿಯ ಕೋಲನ್ನು ಊರುತ್ತ ಜಗಲಿಯನ್ನು ಹತ್ತಿ, ಚಡಾವುಗಳನ್ನು ಪಾದಗಳಿಂದ ಕಳಚಿ ಅಲ್ಲೆ ಬಿಟ್ಟು, ಒಳಕ್ಕೆ ಪ್ರವೇಶಿಸಿದನು. ನಂದೂಲಾಲನು ಎದ್ದುನಿಂತು 'ರಾಮರಾಮ' ಮಾಡಿ ತನ್ನ ಬಳಿಯ ಇನ್ನೊಂದು ಲೋಡಿಗೆ ಒರಗಿ

ಕುಳಿತುಕೊಳ್ಳುವಂತೆ ಜಂಗ ಬಹುದ್ದೂರನಿಗೆ ಎರಡು ಕೈಗಳಿಂದ ತೋರಿಸಿದನು. ಜಂಗ ಬಹದ್ದೂರನು ರತ್ನಕಂಬಳಿಯ ಮೇಲೆ ಮಂಡಿಸಿದನು.

**ನಂದೂಲಾಲ**:—ಇಲ್ಲಿಗೆ ಪ್ರಯಾಣ ಬೆಳಿಸಿ ಬಹಳ ದಿನಗಳಾದವೇ? ತಾವು ಕುಶಲಿಗಳೇ?

**ಜಂಗ**:—ದೇವರ ಕೃಪಾಕಟಾಕ್ಷದಿಂದ ಕುಶಲಿಗಳಾಗಿದ್ದೇವೆ. ಇಲ್ಲಿಗೆ ಬಂದು ಇಂದೋರದ ರಾಜರ ಆರಾಮುಬಾಗದಲ್ಲಿ ಇಳಿದಿರುವೆವು. ನಮ್ಮ ವಿಷಯವಾಗಿ ಮುಂಬಯಿಯ ವೊಟ್ಸನ್ ಕಂಪೆನಿಯವರು ತಮಗೇನಾದರೂ ಪತ್ರ ಬರೆದಿರುವರೇ?

**ನಂದೂ**:—ಹೌದು. ತಮ್ಮ ಸಂಪೂರ್ಣ ಪರಿಚಯವನ್ನು ಮಾಡಿಸುವ ಪತ್ರವು ಈ ದಿನವೇ ಟಪ್ಪಾಲಿನಲ್ಲಿ ಬಂದು ತಲಪಿತು. ತಮ್ಮ ಸ್ವಾರಿಯನ್ನು ಹಾರೈಸುತ್ತಲೇ ಇದ್ದೆನು. ತಾವು ವೊಟ್ಸನ ಕಂಪೆನಿಯ ಮುಖ್ಯ ಬಂಡವಾಳಿಗರೆಂದು ಅಲ್ಲಿಯ ಮೆನೆಜರರ ಪತ್ರ ಬಂದಿದೆ. ಅದಲ್ಲದೆ ಬೇಕಾದಾಗ ಹಣದ ಪೂರವಠೆಯನ್ನು ತಮಗೆ ಮಾಡಬೇಕೆಂದೂ ಅವರು ಬರೆದಿರುವರು. ತಮ್ಮ ಸವಾರಿ ಎಷ್ಟು ದಿನ ಈ ನಮ್ಮ ಪೂನಾ ನಗರದಲ್ಲಿರುವುದೊ?

**ಜಂಗ**:—"ನಾವು ಬರೇ ಒಂದು ವಾರ ಕಳೆದು ಇಲ್ಲಿಂದ ಮಹಾಬಲೇಶ್ವರ ಬೆಟ್ಟಗಳಿಗೆ ತೆರಳಬೇಕೆಂದಿದ್ದೆವು. ಅಲ್ಲಿ ನಮಗೋಸ್ಕರ ಬೇಸಿಗೆ ಕಾಲದ ವಾಸ್ತವ್ಯಕ್ಕಾಗಿ ಒಂದು ಬಂಗಲೆ ತಯಾರಾಗುತಲಿದೆ. ಅದರ ರಚನೆಯನ್ನು ಕಣ್ಣಾರೆ ನೋಡಬೇಕೆಂದಿದ್ದೆವು. ಆದರೆ ಇಲ್ಲಿಯ ಸೊಗಸನ್ನೂ ಹವೆಯನ್ನೂ ಅನುಭವಿಸಿ ಸಂತೋಷ ಉಂಟಾದುದರಿಂದ ಇಲ್ಲಿ ಆಗಾಗ ಬಂದು ತಂಗುವುದಕ್ಕಾಗಿ ಇನ್ನೊಂದು ಬಂಗಲೆಯನ್ನು ಪಟ್ಟಣದ ಹೊರಗೆ ಕೊಂಡುಕೊಂಡಿರುವೆವು. ಅದರಲ್ಲಿ ನಮಗೆ ಯುಕ್ತಕಂಡ ಮಾರ್ಪಾಟಗಳು ಮುಗಿಯುವ ತನಕ ಒಂದೆರಡು ತಿಂಗಳು ಇಲ್ಲಿಯೇ ತಡೆಯಬೇಕಾಗಿದೆ. ಆಗ ನಮಗೆ ವೆಚ್ಚಕ್ಕೆ ಹಣವು ಆಗಾಗ ಬೇಕಾಗುವುದು. ಅದಕ್ಕಾಗಿ ಈ 'ಲೆಟರ್ ಒಫ್ ಕ್ರೆಡಿಟ'ನ್ನು ತಂದಿರುತ್ತೇನೆ" ಎಂದು ಮುದ್ರೆ ಹಾಕಿದ ಒಂದು ದೊಡ್ಡ ಲಕ್ಕೋಟೆ

ಯನ್ನು ಜಂಗಬಹದ್ದೂರನು ನಂದೂಲಾಲನ ಕೈಗೆ ಇತ್ತನು. ನಂದೂಲಾಲನು ಅದನ್ನು ಓದಿದೊಡನೆ ಒಮ್ಮೆ ಚಕಿತನಾದನು. ಅವನ ಮುಖವು ಸ್ವಲ್ಪ ಇಳಿದು ಹೋದುದನ್ನು ಜಂಗ ಬಹದ್ದೂರನು ಕಂಡು "ಏನು! ತಮಗೆ ನಾವು ಕೇಳುವಷ್ಟು ಹಣ ಕೊಡಲು ಫಕ್ಕನೆ ಅಡಚಣಿಯಾಗುವುದೇ? ಹಾಗಿದ್ದರೆ ಇಲ್ಲೇ ಸಮೀಪದಲ್ಲಿರುವ ಮಘನಮಲ್ಲ ಕಂಪೆನಿಯವರಿಗೂ ಇಂಥದ್ದೇ ಒಂದು ಪತ್ರವನ್ನು ತಂದಿರುವೆವು. ಅಲ್ಲಿಗೆ ಹೋಗಿ ಬರಲೇ?"

ನಂದೂಲಾಲನಿಗೆ ಇಂಥ ಗಿರಾಕಿಯನ್ನು ಕಳೆದುಕೊಳ್ಳುವುದಕ್ಕೆ ಮನಸ್ಸು ಒಡಂಬಡಲಿಲ್ಲ. ತನಗೆ ವಿರೋಧಿಗಳಾದ ಮಘನಮಲ್ಲ ಕಂಪೆನಿಗೆ ತನಗಿಂತಲೂ ಹೆಚ್ಚು ಪ್ರಾಶಸ್ತ್ಯವನ್ನು ತಾನಾಗಿ ಕೊಡುವುದಕ್ಕೂ ನಂದೂಲಾಲನಿಗೆ ಒಪ್ಪಿಗೆ ಇರಲಿಲ್ಲ. ಹೀಗಾಗಿ ಫಕ್ಕನೆ ನಸುನಗುತ್ತ "ಸ್ವಾಮೀ! ಅಂಥದ್ದೇನೂ ಅಡಚಣೆಯಿಲ್ಲ, ತಮಗೆ ಬೇಕಾಗುವಷ್ಟು ಹಣವನ್ನು ಒದಗಿಸುವುದಕ್ಕೆ ದೇವರು ನನಗೆ ತ್ರಾಣ ಕೊಟ್ಟಿರುವನು. ತಮಗೆ ಈಗಲೇ ಹಣ ಬೇಕೇ?" ಎಂದು ಒತ್ತರದಿಂದ ಎಡದಲ್ಲಿರುವ ಭದ್ರವಾದ ಕೋಣೆಯ ಬಾಗಿಲ ಗೊಂಚಲನ್ನು ತನ್ನ ಮೇಜಿನೊಳಗಿಂದ ಹೊರ ತೆಗೆದನು.

**ಜಂಗ:** "ಇಲ್ಲ, ಇಲ್ಲ! ಹಣ ಬೇಕಾದಾಗ ನಮ್ಮ ಆಳು ಗಫೂರನು ಇಲ್ಲಿಗೆ ಬರುವನು. ನನಗೀಗ ಒಂದು ಚೆಕ್ ಪುಸ್ತಕವನ್ನು ಒದಗಿಸಿ ಕೊಟ್ಟರೆ ಸಾಕಾಗುವುದು."

ನಂದೂಲಾಲನು ಒಂದು ಚೆಕ್ಕ ಪುಸ್ತಕವನ್ನು ತನ್ನ ಮೇಜಿನೊಳಗಿಂದ ಹೊರ ತೆಗೆದು ಒಂದು ಲಕ್ಕೋಟೆಯೊಳಗಿರಿಸಿ ಜಂಗ ಬಹದ್ದೂರನ ಕೈಗೆ ಅದನ್ನು ಒಪ್ಪಿಸಿದನು. ಜಂಗ ಬಹದ್ದೂರನು ಆ ಕ್ಷಣವೇ ಹೊರಡಲು ಅನುವಾದನು. "ಓಹೋ! ಒಂದಿಷ್ಟು ಚಾ ತರಿಸಲೇ" ಎಂದು ನಂದೂಲಾಲನು ಕೇಳಿದನು. "ಇಲ್ಲ ನಮ್ಮ ಉಪಾಹಾರವು ಈಗಲೇ ಮುಗಿದಿದೆ. ಇನ್ನೊಮ್ಮೆ ಬಂದಾಗ ನೋಡೋಣ" ಎಂದು ಜಂಗಬಹದ್ದೂರನು ಉತ್ತರ ಕೊಟ್ಟನು. ಅನಂತರ ವೀಳ್ಯವನ್ನಾದರೂ ಹಾಕಿಕೊಳ್ಳಬೇಕೆಂದು ಹೇಳುವಷ್ಟರಲ್ಲಿ ಏಲಕ್ಕಿ, ಪತ್ರೆ, ಜಾಯಿ

ಕಾಯಿ ಮುಂತಾದವುಗಳಿಂದ ಒಡಗೂಡಿದ ವೀಳ್ಯದ ತಬಕನ್ನು ಜಂಗ ಬಹದ್ದೂರನ ಮುಂದೆ ಒಬ್ಬ ಗುಮಾಸ್ತನು ತಂದಿರಿಸಿ, ಅತ್ತರಿನ ಸೀಸೆ ಗಳನ್ನು ನಂದೂಲಾಲನ ಕೈಗೆ ಒಪ್ಪಿಸಿದನು. ಅತ್ತರು ಗುಲಾಬಿ, ಪನ್ನೀರುಗಳ ಸೇವೆಯಾದ ಮೇಲೆ ಒಂದೆರಡು ಗೋಟು ಅಡಕೆ ಮತ್ತು ಕೊಬ್ಬರಿ ಚೂರುಗಳನ್ನು ಕೈಯಲ್ಲೆತ್ತಿಕೊಂಡು ಜಂಗಬಹದ್ದೂರನು ಕೋಲನ್ನು ಊರುತ್ತ ಎದ್ದನು.

ಕೋಣೆಯ ಹೆಬ್ಬಾಗಲಿನ ವರೆಗೆ ನಂದೂಲಾಲನು ಜಂಗ ಬಹ ದ್ದೂರನೊಡನೆ ಬಂದು 'ರಾಮರಾಮ' ಮಾಡಿ ಹಿಂದೆರಳಿ, ಉಸುರು ಗರೆಯುತ್ತ, ತನ್ನಾಸನದ ಮೇಲೆ ಕುಳಿತು ಕಿಟಿಕಿಯೊಳಗಿಂದ ಆಕಾಶ ವನ್ನು ನೋಡುವಂತೆ ಸ್ವಲ್ಪ ಹೊತ್ತು ನಿಶ್ಯಬ್ದವಾಗಿ ಕುಳಿತು ಬಿಟ್ಟನು. ಜಂಗಬಹದ್ದೂರನ ಹೇಳಿಕೆಯಂತೆ ಹಣವನ್ನು ಕೇಳಿದಾಗ ಒದಗಿಸಲು ತನ್ನಿಂದ ಸಾಧ್ಯವಾದೀತೇ ಎಂಬದೇ ಅವನ ವಿಚಾರಪಥದಲ್ಲಿ ಸುಳಿದಾಡು ತ್ತಿತ್ತು.

ಇತ್ತ ನಂದೂಲಾಲನು ತನಗೆ ಬೆನ್ನು ಹಾಕಿದೊಡನೆ ಜಂಗ ಬಹದ್ದೂರನು ಆತನನ್ನು ತೀವ್ರ ದೃಷ್ಟಿಯಿಂದ ನೋಡುತ್ತ ತುಟಿಗಳನ್ನು ಒತ್ತಿ ಹಿಡಿದು "ಸಾಂಗಲಿಯ ಜಮಾನುದಾರ ವಿಶ್ವನಾಥ ಪಂತರ ಮನೆ ತನವನ್ನು ಹಾಳುಗೆಡವಿ, ಇದ್ದುದನ್ನೆಲ್ಲ ಸುಲಿಗೆ ಮಾಡಿ, ಈಗ ಪೂನೆಯ ದೊಡ್ಡ ಹುಂಡೀ ಸಾಹುಕಾರನಾಗಿರುವೆಯಾ? ದುಡ್ಡಿನ ಗುಲಾಮ! ನೀನು ಧನವಂತರ ಕಾಲು ನೆಕ್ಕಲಿಕ್ಕೂ ಈಗ ಹಿಂಜರಿಯಲಾರೆ. ನಿನ್ನಂಥ ದ್ರವ್ಯಾಂಧನ ಕಣ್ಣಿಗೆ ಅಂಜನವನ್ನು ಹಚ್ಚುವ ಸಮಯವು ಬಂದೀತೇ? ಆಸೆಗೆ ಪಾರವಿಲ್ಲ, ಮನವೇ ಸೈರಿಸು" ಎಂದು ತನ್ನ ಎದೆಯನ್ನು ಅಮುಕಿಕೊಳ್ಳುತ್ತ, ಬೀಗಿದ ಗಂಟಲಿನಿಂದ ನಿಟ್ಟುಸುರು ಬಿಟ್ಟು, ಹೊರ ಜಗಲಿಗೆ ಬಂದನು. ಅಲ್ಲಿ ಕಾಯುತ್ತಿದ್ದ ದರವಾನನಿಗೆ ಐದು ರೂಪಾಯಿಯ ನೋಟನ್ನು 'ಬಕ್ಷೀಸ್' ಇತ್ತು, ಬ್ರೊಹೆಮನ್ನು ಹತ್ತಿದನು. ಬಂಡಿಯು ಓಡಲಾರಂಭಿಸಿತು.

---

## ಪಳಿನೆಯ ಅಧ್ಯಾಯ

### ಸೂಪರಿಂಟೆಂಡೆಂಟ ಮುರಾರಿರಾಯ

“ಏನು! ಜಂಗಬಹದ್ದೂರರ ಸವಾರಿ ಇನ್ನೂ ಬಂದಿಲ್ಲ?”

“ಬರದೇ ಇರುವರೇ? ಆಡಿದ ಮಾತನ್ನು ಅವರು ತಪ್ಪುವವರಲ್ಲ. ಅವರು ಈಗಲೇ ಬಂದೇ ಬರುವರು. ಇನ್ನೂ 5 ಗಂಟೆ ಹೊಡೆಯಲಿಲ್ಲ. 10 ನಿಮಿಷಗಳು ಇವೆ. ಅವರೆಂದಿಗೂ ಸಮಯ ತಪ್ಪುವವರಲ್ಲ. ಕಾಲಕ್ಲೃಪ್ತತೆಯೆಂದರೆ ಅವರಿಗೆ ನಿತ್ಯನೈಮಿತ್ತಿಕ.”

“ಎಲ್ಲರೂ ಹಾಗೆಯೇ ಅನ್ನುತ್ತಾರೆ. ಎಲ್ಲರ ಬಾಯಿಯಲ್ಲಿಯೂ ಅವರ ಪ್ರಶಂಸೆಯೇ ಬಹಳ.”

ಈ ಮಾತುಗಳು ಪೂನೆಯ ದೊಡ್ಡ ಪೇಟೆಯಲ್ಲಿ ಸುಂದರವಾದ ಭವನದ ಬೈಠಕಖಾನೆಯಲ್ಲಿ ನಡೆದುವು. ಮೊದಲು ಮಾತೆತ್ತಿದವನು ಮುರಾರಿರಾಯನು. ಗಂಗಾರಾಮನು ಹಿಂದೆ ಹೇಳಿದ ತ್ರಿಮೂರ್ತಿಗಳಲ್ಲಿ ಒಬ್ಬನು. ಅವನೊಡನೆ ಸಲ್ಲಾಪ ಮಾಡುತ್ತಿದ್ದವಳು ಅವನ ದ್ವಿತೀಯ ಭಾರ್ಯೆ ಚಿತ್ತರಂಜನೆ. ಮುರಾರಿರಾಯನು ಒಂದು ಕಾಲದಲ್ಲಿ ಬರೇ ಪೋಲಿಸು ಜಮಾದಾರನಾಗಿದ್ದವನು. ಈಗ ಪೂನಾ ಜಿಲ್ಲೆಯ ಡಿಸ್ಟ್ರಿಕ್ಟ ಸೂಪರಿಂಟೆಂಡೆಂಟನಾಗಿದ್ದಾನೆ. ಅವನು ಹಿಂದೆ ನಡೆದ ದರೋಡೆ—ಜಮೀನುದಾರ ವಿಶ್ವನಾಥಪಂತರಲ್ಲಿ ನಡೆದ ದರೋಡೆ ಮತ್ತು ವಿಶ್ವನಾಥಪಂತರ ಕೊಲೆ ಪತ್ತೆ ಹಚ್ಚಿದ ಸಂಬಂಧ ಪೂನೆಯಲ್ಲಿ ಇನ್ಸ್‌ಪೆಕ್ಟರರ ಪದವಿಗೆ ಬಂದನು. ಅಲ್ಲಿ ಅವನು ಪೋಲಿಸು ಕಮ್ಮಿಶನರ ಮೇ ಎವರ್‌ಗ್ರೀಡೀ (Ever Greedy) ಸಾಹೇಬರ ಕಣ್ಣಿಗೆ ಬಿದ್ದನು. ಮುರಾರಿರಾಯನ ಚಟುವಟಿಕೆ, ಕಾರ್ಯಧುರಂಧರತೆ, ಪತ್ತೆದಾರಿ ಅನುಭವವು ಪೂನೆಯಲ್ಲಿದ್ದ ಗವರ್ನರ ಸಾಹೇಬರ ಕಿವಿ ವರೆಗೆ ಹೋಗಲಿಕ್ಕೆ ಎವರಗ್ರೀಡೀ ಸಾಹೇಬರು ಕಾರಣರಾಗಿದ್ದರು. ಮುರಾರಿರಾಯನ ಎರಡನೆ ಹೆಂಡತಿಯ ಸುಶಿಕ್ಷಿತತೆಯೇ ಬಹಳ ಮಟ್ಟಿಗೆ ಮುರಾರಿರಾಯನನ್ನು ಪೋಲೀಸ ಸೂಪರಿಂಟೆಂಡೆಂಟನ ಪದವಿಗೇರಿ ಸಲಿಕ್ಕೆ ಸಹಾಯಕವಾಗಿದ್ದಿತು ಎಂದು ಕ್ಲಬ್ಬುಗಳಲ್ಲಿ ಕೆಲವು ನಿರು ದ್ಯೋಗಿಗಳು ಹರಟೆ ಕೊಚ್ಚುತ್ತಿದ್ದರು. ಚಿತ್ತರಂಜನೆ ಮುಂಬಾಯಿ

ಯೂನಿವರ್ಸಿಟಿಯ ಇಂಟರ್‌ಮಿಡಿಯಟ ಪರೀಕ್ಷೆ ಪಾಸುಮಾಡಿ ಸುಧಾರಿತ ಮಹಿಳೆಯಾಗಿದ್ದಳು. ಅಶಿಕ್ಷಿತ ಸ್ತ್ರೀಯರಂತೆ ಬರೆ ಮನೆ ಯಡಿಗೆಯಲ್ಲಿಯೇ ಮಗ್ನಳಾಗಿರದೆ, ಪಲವು ಸಾಮಾಜಿಕ ಸುಧಾರಣಾ ಸಂಸ್ಥೆ ಸಮಿತಿಗಳಲ್ಲಿ ತುಂಬಾ ಉತ್ಸಾಹದಿಂದ ಕೆಲಸಮಾಡುತಿದ್ದಳು. ಹೀಗಾದ್ದರಿಂದ ಗವರ್ನರ್ ಸಾಹೇಬರ ಗಾರ್ಡನ್ ಪಾರ್ಟಿಯಲ್ಲಿ ಚಿತ್ತರಂಜನೆಯನ್ನು ಕಾಣದಿರುವುದು ಅಪರೂಪ. ಕ್ಲಬ್ಬುಗಳಲ್ಲಿ ಅವಳ ಪರಿಚಯವಿಲ್ಲದ ಶ್ರೀಮಂತರೂ ಹುದ್ದೆದಾರರೂ ಅತಿ ವಿರಳ. ಹೀಗಾಗಿ ಜಂಗಬಹದ್ದೂರರು ಕೊರೊನೇಶನ್ ಕ್ಲಬ್ಬಿನ ಮೆಂಬರರಾ ದೊಡನೆ ಅದರ ಆಡಳಿತೆ ಸಭೆಯ ಮೆಂಬರರಲ್ಲೊಬ್ಬಳಾದ ಚಿತ್ತರಂಜನೆಯ ಪರಿಚಯವು ಜಂಗಬಹದ್ದೂರರಿಗೆ ಆದುದು ವಿಚಿತ್ರವಲ್ಲ. ಅನಂತರ ಒಂದೆರಡು ಸಲ ಜಂಗಬಹದ್ದೂರರ ಬ್ರೊಹಮದಲ್ಲಿ ಅವರೊಡನೆ ಕುಳಿತು ಸಮಾಜಸುಧಾರಣೆಯ ಹಲವು ವಿಚಾರಗಳನ್ನು ಸಲ್ಲಾಪಿಸುತ್ತ ಚಿತ್ತರಂಜನೆಯು ತನ್ನ ಭವನದ ಮುಂದುಗಡೆ ಜಂಗಬಹದ್ದೂರರಿಗೆ ಹಸ್ತಲಾಘವ ಮಾಡಿ ಇಳಿದು ಹೋದುದನ್ನು ಹಲವರು ಕಂಡಿರುವರು. ಮುರಾರಿರಾಯನು ಜಂಗಬಹದ್ದೂರರನ್ನು ದೂರದಿಂದಲೇ ಕಂಡಿದ್ದನಲ್ಲದೆ ಅವನೊಡನೆ ಪರಿಚಯ ಬೆಳೆಯಿಸುವ ಸುಸಂಧಿಯು ಇದು ವರೆಗೆ ಆತನಿಗೆ ದೊರೆತಿದ್ದಿಲ್ಲ.

ಈ ದಿನ ಸಾಯಂಕಾಲ ೫ ಗಂಟೆಗೆ 'ಚಾ' ಕುಡಿಯುವುದಕ್ಕೆ ತನ್ನ ಬಂಗಲೆಗೆ ಬರಬೇಕೆಂದೂ ತನ್ನ ಪತಿಯ ಪರಿಚಯ ಮಾಡಿಸಿಕೊಡುತ್ತೇ ನೆಂದೂ ಚಿತ್ತರಂಜನೆ ಆಮಂತ್ರಿಸಿದ್ದರಿಂದ, ಜಂಗಬಹದ್ದೂರನ ಸವಾರಿ ಯನ್ನು ಹಾರೈಸಿ, ಬೈಠಕಖಾನೆಯಲ್ಲಿ ಚಿತ್ತರಂಜನೆಯೂ ಮುರಾರಿ ರಾಯನೂ ಒಂದು 'ಸೋಫಾ'ದ ಮೇಲೆ ಕುಳಿತಿದ್ದರು. ಬೈಠಕಖಾನೆಯ ಮಧ್ಯದಲ್ಲಿ ದೊಡ್ಡದೊಂದು ವೃತ್ತಾಕಾರವಾದ ಚಂದ್ರಕಾಂತಶಿಲೆಯ ಹಾಸುಗಲ್ಲಿನಿಂದ ಕೂಡಿದ ಮೇಜು, ಅದರ ಮೇಲೆ ಬಗೆಬಗೆಯ ಹೂವುಗಳ 'ಬುಕ್ಕೇ'ಗಳನ್ನು ಬೆಳ್ಳಿಯ 'ಫುಲದಾನಿ'ಗಳಲ್ಲಿ ಅಂದವಾಗಿಟ್ಟಿ ದ್ದರು. ಬೆಳ್ಳಿಯ ಚಾದಾನಿ, ಸಕ್ಕರೆಯ ಬಟ್ಲು, ಬೆಳ್ಳಿಯ ನಾಲ್ಕೈದು 'ಕಪ್ ಸೊಸರು'ಗಳು ಈ ಮೇಜಿನ ಮೇಲೆ ಹಾಸಿದ ಚಲೊ ಕಸೂತಿ ಯುಳ್ಳ ಒಳ್ಳೇ ಬಟ್ಟೆಯ ಮೇಲೆ ಕ್ರಮವಾಗಿ ಇಡಲ್ಪಟ್ಟಿದ್ದವು. ಈ

ಮೇಜಿನಿಂದ ಸ್ವಲ್ಪ ದೂರವಾಗಿ ಇನ್ನೆರಡು ಚಿಕ್ಕ ಮೇಜುಗಳು ಇದ್ದವು. ಅವುಗಳ ಮೇಲೆ ಬಗೆಬಗೆಯ ಕೆತ್ತನೆ ಕೆಲಸದ ವಿಚಿತ್ರವಾದ ಸಾಮಾನುಗಳು, ಅವುಗಳ ನಡುವೆ ಒಂದೊಂದು 'ಬುಕ್ಕೇ' ಇದ್ದುವು. ಇವುಗಳ ಹೊರ ಸುತ್ತಿನಲ್ಲಿ ನಾಲ್ಕು ದಿಕ್ಕುಗಳಲ್ಲಿ ನಾಲ್ಕು ದೊಡ್ಡ ಸೋಫಾಗಳು. ಒಂದು ಸೋಫಾದ ಮೇಲೆ ಚಿತ್ರರಂಜನೆಯೂ ಮುರಾರಿರಾಯನೂ ಮಂಡಿತರಾಗಿದ್ದರು. ಇನ್ನೊಂದು ಸೋಫಾದಲ್ಲಿ ಮುರಾರಿರಾಯನ ಪ್ರಥಮ ಪತ್ನಿಯಲ್ಲಿ ಹುಟ್ಟಿದ ಮಗಳಾದ ಮಾಲಿನಿಯೂ ಚಿತ್ರರಂಜನೆಯ ಮಗನಾದ ಮೋಹನನೂ ಕುಳಿತಿದ್ದರು. ಮೋಹನನಿಗೆ ಹತ್ತು ವರ್ಷ ವಯಸ್ಸು. ಜರೀ ಟೊಪ್ಪಿ, ಜರೀ ವೆಲ್ವೆಟಿನ ಅಂಗಿ ಇಜಾರುಗಳನ್ನು ಧರಿಸಿ ಅಕ್ಕನ ಬಳಿಯಲ್ಲಿ ಕುಳಿತಿದ್ದನು. ಮಾಲಿನಿಯು ಹದಿನಾರು ವರುಷದ ತರುಣಿ. ಮೆಟ್ರಿಕ್ ಪರೀಕ್ಷೆಗೆ ಓದುತಿದ್ದಳು. ಈ ಪರೀಕ್ಷೆ ಪಾಸುಮಾಡುವ ಮೊದಲು ಅವಳಿಗೆ ವಿವಾಹವಾಗಬಾರದೆಂದು ಚಿತ್ರರಂಜನೆ ಹಟ ಹಿಡಿದುದರಿಂದ ತನ್ನ ವೃದ್ಧ ಮತ್ತು ರೋಗಪೀಡಿತ ತಂದೆಯ ಮಾತನ್ನೂ ಅಲ್ಲಗಳೆದು, ಮುರಾರಿರಾಯನು ಮಾಲಿನಿಯನ್ನು ಅವಿವಾಹಿತೆಯಾಗಿಯೆ ಬೆಳಿಸಿದ್ದನು. ಮಾಲಿನಿಯು ಕಸೂತಿ ಅಂಚಿನ ಪಟ್ಟೆಯ ಹಚ್ಚಡವನ್ನು ಉಟ್ಟಿದ್ದರೂ ಮೈಗೆ ಆಭರಣಗಳು ವಿಶೇಷವಾಗಿದ್ದಿಲ್ಲ. ಕೈಗೆ ಎರಡೆರಡು ಚಿನ್ನದ ಬಳೆಗಳು ಮಾತ್ರ ಇದ್ದವು.

ಚಿತ್ರರಂಜನೆ ಸುಧಾರಿತ ಮಹಿಳೆ. ಅವಳ ಉಡಿಗೆ ತೊಡಿಗೆಗಳೂ ಅಲಂಕಾರಗಳೂ ಸುಧಾರಣೆಯನ್ನೇ ಹೊಂದಿದ್ದುವು. ಮೈಗೆ ಒತ್ತಾಗಿ ಆಕಾಶನೀಲ ಬಣ್ಣದ 'ಶರ್ಟ್' ಅದರ ಮೇಲೆ ಮೈಗೆ ಬಿಗಿಯಾದ ಕಪ್ಪು ವೆಲ್ವೆಟಿನ 'ಕುಮೀಸು'; ಇದರ ಕೈಗೆ ಸಪೂರವಾದ ಸೂಕ್ಷ್ಮವಾದ ಜರೀ ಅಂಚು ಹೆಣೆದಿತ್ತು. ಇದರ ಒಂದು ಕಡೆ ಚೀಲದಲ್ಲಿ ಚಿನ್ನದ ಗಡಿಯಾರ, ಅದನ್ನು ತೂಗಿಸುವ ಸರಪಣಿಯ ಇನ್ನೊಂದು ಕೊನೆಯು ಇನ್ನೊಂದು ಚೀಲದಲ್ಲಿ ಹುದುಗಿತ್ತು. ಸೂಕ್ಷ್ಮವಾದ ಜರೀ ಅಂಚುಳ್ಳ ನೇರಳೆ ಬಣ್ಣದ ಪಟ್ಟೆಯ ಹಚ್ಚಡವನ್ನು ಉಟ್ಟಿದ್ದು, ಉದ್ದವಾದ ಸೆರಗು ವಕ್ಷಸ್ಥಳವನ್ನೂ ಬೆನ್ನನ್ನೂ ಸುತ್ತಿ ಬಲಕಂಕುಳ ಅಡಿಯಲ್ಲಿ 'ಕ್ಲಿಪ್ಪು'ಗಳಿಂದ ಜೋಡಿಸಲ್ಪಟ್ಟಿತ್ತು. ಇದರೊಳಗಿಂದ ಸುಗಂಧದ ಅತ್ತರಿನಿಂದ ಘಮಘಮಿಸುವ "ಟವೆಲ್" ಇಣುಕುತಿತ್ತು. ಹಣೆಯು

ಮೇಲೆ ಹಳೆ ಮುತ್ತೈದೆಯರ ಗೇಣುದ್ದ ಕುಂಕುಮದ ತಿಲಕ ವಾಗಲಿ, ಮೂಗಿಗೆ ಕಂಚುಗಾರ ಹುಳದಷ್ಟು ದೊಡ್ಡದಾದ ನತ್ತಾಗಲೀ, ಕಿವಿಗೆ ಓಲೆಕೊಡೆಗಳಂತಿರುವ ಬೆಂಡೋಲೆಗಳಾಗಲಿ ಇರಲಿಲ್ಲ. ಹಣೆಯ ಮೇಲೆ ಆಕಾಶದ ನಕ್ಷತ್ರದಂತೆ ಚಿಕ್ಕದಾಗಿ ಮಿರುಗುವ ಕಪ್ಪು ತಿಲಕ, ಮೂಗಿಗೆ ವಜ್ರದ ಒಂದು ಟಿಕ್ಕಿ, (ಬೊಟ್ಟು), ಕಿವಿಗೆ ಸುತ್ತಲೂ ಸೀಲ ಗಳಿಂದ ಕೂಡಿದ್ದು ನಡುವೆ ಹಸುರು ಮರಕತದ 'ಕುಟುಕು' ಇವು ಮಾತ್ರ ಇದ್ದುವು. ಉದ್ದವಾದ ಹೆರಳು ಅದೊಂದು ವಿಚಿತ್ರ ರೀತಿ ಯಿಂದ ಹಿಂತಲೆಯನ್ನು ವೇಷ್ಟಿಸಿ ಬಿಗಿದಿತ್ತು. ಅದನ್ನು ಕೊನೆಯಲ್ಲಿ ವಜ್ರವಿರುವ ಒಂದು 'ಪಿನ್ನ್' ಹಾಯ್ದು ಹೋಗಿತ್ತು.

ಮುರಾರಿರಾಯನು ತನ್ನ ಉದ್ಯೋಗದಲ್ಲಿ ತುಂಬಾ ಉತ್ಸಾಹ ವುಳ್ಳವನೆಂದು ಹಿಂದೆ ಹೇಳಿದೆವು. ಅವನು ಮನೆಯಲ್ಲಿಯೂ ಯಾರ ನ್ನಾದರೂ ಸ್ವಾಗತ ಮಾಡುವ ಕಾಲದಲ್ಲಿಯೂ ತನ್ನ ಹುದ್ದೆಯ ಉಡು ಪನ್ನೆ ಉಡುತಿದ್ದನು. ಫಕ್ಕನೆ ಯಾವುದೊಂದು ಸಮಯದಲ್ಲಿಯೂ ಆಫೀಸಿಗಾಗಲಿ ಗಸ್ತುತನಖಿಗಾಗಲಿ, ಪತ್ತೆಗಾಗಲಿ ಹೊರ ಹೋಗಲಿಕ್ಕೆ ಸಿದ್ಧನಾಗಿಯೆ ಇರುತಿದ್ದುದರಿಂದ ಇಂದು ಆತನು ತನ್ನ ಸೂಪರಿಂಟೆಂ ಡೆಂಟ ಪದವಿಯ ಪೋಷಾಕವನ್ನೆ ಧರಿಸಿದ್ದನೆಂದು ಬೇರೆ ಹೇಳಬೇಕಾ ದ್ದಿಲ್ಲ. ದಂಪತಿಗಳು ಜಂಗ ಬಹದ್ದೂರರ ಆಗಮನವನ್ನು ಕಾಯು ತಿದ್ದಾಗಲೇ ಮೇಲಿನ ಸಂಭಾಷಣೆ ನಡೆಯಿತು.

'ಶ್ರೀಮಂತರೆಲ್ಲರ ಬಾಯಿಯಲ್ಲಿಯೂ ಜಂಗಬಹದ್ದೂರರ ಪ್ರಶಂಸೆಯೋ ಬಹಳ' ಎಂದು ಮುರಾರಿರಾಯನು ಇನ್ನೊಮ್ಮೆ ಏನನ್ನೊ ಯೋಚಿಸುವವನಂತೆ ಬೀದಿಯ ಕಡೆಗೆ ನೋಡುತ್ತ ಹೇಳಿದನು.

**ಚಿತ್ತರಂಜನೆ:**— ಸರಿಯೇ. ಮೊನ್ನೆ ಗವರ್ನರ ಸಾಹೇಬರ ಗಾರ್ಡನ ಪಾರ್ಟಿಯಲ್ಲಿಯಂತೂ ಜಂಗಬಹದ್ದೂರರು ಯಾವ ಕಡೆಗೆ ಹೋಗುತಿದ್ದರೊ ಆ ಕಡೆಗೆ ಜೇಸಿಗೆ ನೊಣ ಮುತ್ತಿದಂತೆ ಅವರನ್ನು ಅಧಿಕಾರಿ ವರ್ಗದವರೂ ವರ್ತಕ ಮುಖಂಡರೂ ಮುತ್ತಿಕೊಳ್ಳುತಿದ್ದು ದನ್ನು ನೋಡಿಲ್ಲವೆ? ಅವರ ಗಂಭೀರ ವೃತ್ತಿ, ಔದಾರ್ಯ, ಪಾಂಡಿತ್ಯ ಇವನ್ನು ಎಲ್ಲರೂ ಕೊಂಡಾಡುತಿದ್ದರು. ಗಾರ್ಡನ ಪಾರ್ಟಿಯ ದಿನ

ಜಗಜೀವನ ಸೇಟರ ಪತ್ನಿಯು ಕಿವಿಗಳಿಗೆ ತೊಟ್ಟ ವಜ್ರದ ಕುಟುಕಿನ ಜೋಡು ಮತ್ತು ಸೇಟರ ಕೈ ಬೆರಳಿಗೆ ಇದ್ದ ಉಂಗುರಗಳನ್ನು ನೋಡಿಲ್ಲವೆ? ಇವೆಲ್ಲವೂ ಜಂಗಬಹದ್ದೂರರು ತರಿಸಿಕೊಟ್ಟವುಗಳಂತೆ! ಕಮ್ಮಿಶನರ್ ಸ್ಮೊಲ್ಲೊಮುನಿ ಸಾಹೇಬರೂ ಅವರ ಪತ್ನಿಯೂ ಕುಳಿತು ಬಂದ ಜೋಡು ಕುದುರೆಯ ರಬ್ಬರ ಪಟ್ಟಿಯ ಬಂಡಿಯನ್ನು ನೋಡಿಲ್ಲವೇ? ಜಂಗಬಹದ್ದೂರರು ವಿಲಾಯತಿಯಿಂದಲೇ ಆ ಬಂಡಿಯನ್ನೂ ಒಸ್ಟ್ರೇಲಿಯದಿಂದ ಕುದುರೆಗಳನ್ನೂ ತರಿಸಿಕೊಟ್ಟರಂತೆ! ಹೆಚ್ಚೇಕೆ! ಪೂನೆಯ ಕುದುರೆ ಜೂಜಾಟದಲ್ಲಿ ಗೆದ್ದುದು ಅವರವೇ ಕುದುರೆಯಂತೆ. ಅವರಿಂದ ಉಚಿತಗಳನ್ನು ಪಡೆಯದವರೇ ಇಲ್ಲವೆಂದು ಎಲ್ಲರೂ ಹೇಳುತ್ತಾರೆ. ವಿಪುಲ ಸಂಪತ್ಸಾಗರದಲ್ಲಿ ಓಲಾಡುವ ಕುಭೇರಪುತ್ರನೆಂದು ಅವರನ್ನು ಎಲ್ಲರೂ ತಿಳಿಯುತ್ತಾರೆ. ಅಷ್ಟಿದ್ದರೂ ಅವರಲ್ಲಿ ಗರ್ವ ಠೇಂಕಾರಗಳು ಲವಲೇಶವೂ ಇಲ್ಲ. ಇಂಥ ವ್ಯಕ್ತಿಗಳು ಅಪೂರ್ವ—”

ಇಷ್ಟು ಮಾತುಗಳು ನಡೆಯುವಷ್ಟರಲ್ಲಿ ಗಡಿಯಾರದಲ್ಲಿ ‘ಠಣ್! ಠಣ್’ ಎಂದು 5 ಗಂಟೆ ಹೊಡೆದುದು ಕೇಳಿಸಿತು. ಕೊನೆಯ ಠಣ್ ಶಬ್ದಕ್ಕೆ ಸರಿಯಾಗಿ ಜಂಗಬಹದ್ದೂರನು ಬೈಠಕಖಾನೆಯೊಳಗೆ ಕಾಲಿಟ್ಟನು. ಮುರಾರಿರಾಯನೂ ಚಿತ್ತರಂಜನೆಯೂ ಒಮ್ಮೆಗೆ ಚಕಿತರಾದರು. ಜಂಗಬಹದ್ದೂರನಿಗೆ ಹಸ್ತಲಾಘವವನ್ನು ಕೊಟ್ಟು ಕುಳ್ಳರಿಸಿ, ತಮ್ಮ ಮಕ್ಕಳ ಪರಿಚಯವನ್ನು ಮಾಡಿಸಿಕೊಟ್ಟರು. ಅನಂತರ—

**ಚಿತ್ತ**:—ಜಂಗಬಹದ್ದೂರರೇ! ನಾವು ಈಗಲೇ ತಮ್ಮ ಪ್ರಸ್ತಾಪವನ್ನು ಎತ್ತಿದ್ದೆವು. ಪಾಶ್ಚಾತ್ಯ ದೇಶಗಳಲ್ಲಿ ನೀವು ಎಂದಾದರೂ ಸಂಚಾರ ಮಾಡಿರುವಿರೇ?

**ಜಂಗ**:—ಇಲ್ಲ ಇಲ್ಲ, ಪಾಶ್ಚಾತ್ಯ ದೇಶಗಳಿಗೂ ಅಮೇರಿಕಕ್ಕೂ ಪ್ರಯಾಣ ಮಾಡುವ ಇಚ್ಛೆಯೊಂದು ಬಲವಾಗಿ ಇದೆ. ಅದಕ್ಕಾಗಿ ಪ್ರತ್ಯೇಕ ‘ಯೊಟ್’ (ವಿಹಾರಹಡಗು) ಸಿದ್ಧವಾಗಿ ಇನ್ನೊಂದು ವಾರದಲ್ಲಿ ಮುಂಬಾಯಿಗೆ ಬರಲಿಕ್ಕಿದೆ ಎಂದು ಈ ದಿನವೇ ತಂತಿ ಬಂದಿದೆ.

**ಚಿತ್ತ**:—ಹಾಗಿದ್ದರೆ ಪಾಶ್ಚಾತ್ಯರಂತೆ ನಿಮ್ಮ ಬಂಗಲೆಯಲ್ಲಿ ವಸ್ತು ಸಂಗ್ರಹದ ಮತ್ತು ವ್ಯವಹಾರ ವರ್ತನದ ಕ್ರಮವನ್ನು ಹೇಗೆ ಕಲಿತುಕೊಂಡಿರಿ? ನಿಮ್ಮ ಬಂಗಲೆಯ ವಿಹಾರವನವೆಂದರೆ ‘ಅರೇಬಿ

ಯನ್ ನೈಟ್ಸ್'ನಲ್ಲಿ ಹೇಳಿದ ರಚನೆಯಂತೆ! ಎಂದು ಹಲವರು ಹೇಳುತ್ತಾರೆ. ನಿಮ್ಮ ಉಡಿಗೆ ತೊಡಿಗೆಗಳಲ್ಲಿ ನೀವು ಪೌರ್ವಾತ್ಯರು, ನುಡಿನಡೆಗಳಲ್ಲಿ ಪಾಶ್ಚಾತ್ಯರು.

**ಜಂಗಬಹದ್ದೂರ:**—ಅದೇನೊ ಅತಿಶಯೋಕ್ತಿ. ಅಂತು ಇಷ್ಟು ಹೇಳ ಬಲ್ಲೆ. ಯಾವನೊಬ್ಬನಿಗೂ ತನ್ನ ಸರ್ವಕೋರಿಕೆಗಳನ್ನು ಸ್ಮರಿಸಿದೊಡನೆ ಒದಗಿಸುವಷ್ಟು ಧನರಾಶಿಯೂ, ಅವನ ಸುಖದಲ್ಲಿ,— ಈ ಮಾತನ್ನು ಹೇಳುವಾಗ ಒಂದೆರಡು ನಿಮಿಷ ಜಂಗಬಹದ್ದೂರನು ಚಿತ್ತರಂಜನೆಯನ್ನೆ ದಿಟ್ಟಿಸಿ ನೋಡಿ,— ಸಹಭಾಗಿಯಾಗಲುಳ್ಳ ಇಷ್ಟ ಮಿತ್ರರೂ ಇರುವಾಗ ಅಂಥ ಸಂಪತ್ತಿನ ಸುಖತರಂಗಗಳಲ್ಲಿ ಕ್ರೀಡಿಸದೆ ಇದ್ದರೆ ಆತನು ಪಶು ಸಮಾನನೆಂದು ಎಲ್ಲರೂ ಅನ್ನಲಿಕ್ಕಿಲ್ಲವೇ? ದೇವರು ಸರ್ವ ಸೃಷ್ಟಿಯನ್ನು ಮನುಷ್ಯನ ಸುಖೋಪಭೋಗಕ್ಕಾಗಿಯೇ ನಿರ್ಮಿಸಿದನು. ಅದರ ಮೇಲೆ ಆತನಿಗೆ ವೈಸರಾಯ ಪದವಿಯನ್ನು ಕೊಟ್ಟಿರುವವನೂ ದೇವರೇ. ನಿರಂಕುಶ ಪ್ರಭುತ್ವವನ್ನು ಕೊಟ್ಟಿರುವನೆಂದೂ ಒಂದು ಮತವಿದೆ. ಅಂಥ ಪ್ರಕೃತಿಯ ಬಾಯಿಗೆ ಕಡಿವಾಣ ಹಾಕಿ, ವಾಘೆಯನ್ನು ಕೈಯಲ್ಲಿ ಹಿಡಿದು, ಮನುಷ್ಯನು ಸ್ವೇಚ್ಛೆಯಿಂದ ಸವಾರಿಮಾಡದಿದ್ದರೆ— ಇನ್ನೊಮ್ಮೆ ಚಿತ್ತರಂಜನೆಯ ಕಡೆಗೆ ಕಡೆಗಣ್ಣಿನಿಂದ ನೋಡಿದನು. ಅವಳು ತಲೆ ಕೊಂಚ ಕೆಳಕ್ಕೆ ಬಾಗಿಸಿ, ಅವನ ತೀವ್ರ ದೃಷ್ಟಿಯಿಂದ ತಪ್ಪಿಸಿಕೊಂಡಳು— ಈ ನರಜನ್ಮವು ಹೇಗೆ ಸಫಲವಾದೀತು?

ಹೀಗೆನ್ನುವಷ್ಟರಲ್ಲಿ ಒಬ್ಬ ಪೋಲೀಸ ಜವಾನನು ಒಳಗೆ ಬಂದು ಸಲಾಂ ಮಾಡಿ ಒಂದು ಲಕೋಟಿಯನ್ನು ಮುರಾರಿರಾಯನಿಗೆ ಕೊಟ್ಟನು. ಮುರಾರಿರಾಯನು ಅದನ್ನು ಒಡೆದು ನೋಡಿ—"ಜಂಗ ಬಹದ್ದೂರರೇ! ಸರಕಾರಿ ಕೆಲಸವೆಂದರೆ ಹೀಗೆಯೆ. ಅಪ್ತರೊಡನೆ ಎರಡು ಗಳಿಗೆ ಸುಖಸಲ್ಲಾಪ ಮಾಡಲಿಕ್ಕೂ ಬಿಡುವು ಇಲ್ಲ. ಇರಲಿ, ತಾವು ಸಂಕೋಚ ಪಡಬಾರದು. ಇಲ್ಲಿ ಸ್ವಲ್ಪ ಹೊತ್ತು ಇದ್ದು ಚಾ ಕುಡಿದು, ಆ ಮೇಲೆ ಹಿಂತೆರಳಬಹುದು" ಎಂದು ಅವಸರದಿಂದ ಜಂಗಬಹದ್ದೂರರಿಗೆ ಹಸ್ತಲಾಘವವನ್ನು ಮಾಡಿ ಹೊರಟು ಹೋದನು.

ಚಿತ್ತರಂಜನೆ ಮೇಜಿನ ಮೇಲಿದ್ದ ಚಾ ಪಾತ್ರೆಯಿಂದ ಜಂಗ ಬಹದ್ದೂರರಿಗೂ ಮಾಲಿನಿಗೂ ಮೋಹನನಿಗೂ ತನಗೂ ಚಾ ಮತ್ತು ಫಲಹಾರ ಸಾಹಿತ್ಯಗಳನ್ನು ತಬಕುಗಳಲ್ಲಿ ಕ್ರಮಪಡಿಸಿದಳು. ಚಾ ಕುಡಿದಾದೊಡನೆ ಚಿತ್ತರಂಜನೆ "ಅಮ್ಮಾ ಮಾಲಿನಿ! ನಿನ್ನ ತಾತನವರಿಗೆ ಒಂದಿಷ್ಟು ಬಿಸಿ ಹಾಲನ್ನು ಕೊಟ್ಟು ಬರಲಾರೆಯಾ! ನಾಲ್ಕು ಗಂಟೆಗೆ ಅವರಿಗೆ ಹಾಲನ್ನು ಕೊಡಬೇಕಾಗಿತ್ತು. ಪಾಪ! ಅವರು ಎಷ್ಟೊ ಬಾಯಾರಿ ಬಳಲಿರ ಬಹುದು. ನೀನು ಕೊಟ್ಟರೆ ಮಾತ್ರ ಅವರಿಗೆ ತುಂಬಾ ಸಂತೋಷವಾಗುತ್ತದೆ. ದಾಸಿಯರ ಹರಕು ಮುರುಕು ಕೆಲಸಗಳಲ್ಲಿ ಅವರಿಗೆ ಅಸಂತುಷ್ಟಿ. ಹೋಗಮ್ಮಾ, ಹೋಗಿ ಬಾ!" ಎಂದು ಮಾಲಿನಿಯನ್ನು ಕಳುಹಿಸಿ "ವೃದ್ಧಾಪ್ಯದ ದಿನಗಳೆಂದರೆನೇ ಕಷ್ಟ. ಅದರಲ್ಲಿಯೂ ಬಹು ಕಾಲ ಹಾಸಿಗೆ ಹಿಡಿದಿದ್ದರಂತೂ ಕೇಳು ವುದೇ ಬೇಡ. 'ಹಾ, ಹುಂ' ಎನ್ನುವಷ್ಟರಲ್ಲಿ ಅಸಮಾಧಾನ, ಸಿಟ್ಟು, ಮಕ್ಕಳಂತೆ ಒರಟುತನ. ನಮ್ಮ ಮಾವನವರ ಗತಿ ಹೀಗಾಗಿದೆ" ಎಂದು ಜಂಗಬಹದ್ದೂರರಿಗೆ ತಿಳಿಯುವಂತೆ ಗಟ್ಟಿಯಾಗಿ ತನ್ನಲ್ಲಿಯೇ ಹೇಳುತ್ತಾ ಮೋಹನನನ್ನು ಕಂಡು "ಮಗೂ ಮೋಹನಾ! ನೀನು ತೋಟಕ್ಕೆ ಹೋಗಿ ದಾದಿಯೊಡನೆ ಚೆಂಡಾಡು" ಎಂದು ಆತನನ್ನು ಕಳುಹಿಸಿ "ಜಂಗಬಹದ್ದೂರರೇ, ನಮ್ಮ ಹೂದೋಟವನ್ನು ನೋಡು ವಿರಾ?" ಎಂದು ಜಂಗಬಹದ್ದೂರರನ್ನು ಬೈಠಕಖಾನೆಯಿಂದ ತೋಟಕ್ಕೆ ಕರೆದುಕೊಂಡು ಹೋಗಿ ಸ್ವಲ್ಪ ಹೊತ್ತು ತೋಟದ ಅಂದಚೆಂದಗಳನ್ನು ತೋರಿಸುತ್ತ, ಒಂದು ಕೊನೆಯಲ್ಲಿರುವ 'ಸೀಟಿನ' ಕಡೆಗೆ ಬೆರಳು ತೋರಿಸಿದಳು. ಇಬ್ಬರೂ ಅಲ್ಲಿಗೆ ಹೋಗಿ ಕುಳಿತು ಒಂದೆರಡು ನಿಮಿಷಗಳ ಅನಂತರ—

**ಚಿತ್ತರಂಜನೆ**:— ಜಂಗಬಹದ್ದೂರರೇ ನೀವು ಕಳುಹಿಸಿದ ವೈದ್ಯ ಗ್ರಂಥಗಳನ್ನು ಆಮೂಲಾಗ್ರವಾಗಿ ಓದಿನೋಡಿದೆನು. ಅದರಲ್ಲಿ ವಿಷ ಪದಾರ್ಥಗಳ ಅಧ್ಯಾಯವಂತೂ ಅಪೂರ್ವರೀತಿಯಲ್ಲಿ ವಿಸ್ತೃತವಾಗಿದೆ. ನಮ್ಮ ತಂದೆಯವರು ವೈದ್ಯರಾಗಿದ್ದರೆಂದು ನಾನು ಮೊದಲೇ ಹೇಳಿದ್ದೆನು. ಅವರ ಹಲವು ಗ್ರಂಥಗಳನ್ನು ಅವರೊಂದಿಗೆ ನಾನು ಮಗುಚಿರುವೆನು. ಆದರೆ ಇಷ್ಟು ವಿಶದವಾಗಿಯೂ ಬಾಹುಳ್ಯವಾಗಿಯೂ ಬರೆದ ಗ್ರಂಥ ವನ್ನು ನಾನು ಇದುವರೆಗೂ ನೋಡಿದ್ದಿಲ್ಲ.

**ಜಂಗ:**— ಈ ದೇಶದ ಪ್ರಾಚೀನ ವೈದ್ಯಗ್ರಂಥಗಳು ಇನ್ನೂ ಪ್ರಚಾರಕ್ಕೆ ಬಂದಿಲ್ಲ. ಪಾಶ್ಚಾತ್ಯ ವಿದ್ಯೆಯ ಸೂರ್ಯಪ್ರಭೆಯ ಮುಂದೆ ಈ ಪ್ರಾಚೀನ ವೈದ್ಯಗ್ರಂಥಗಳು ಮಿನುಗಲಾರವು. ಆದರೆ ಇವು ಸೂರ್ಯನಿಗಿಂತಲೂ ಎಷ್ಟೋ ದೊಡ್ಡವಿವೆ ಎಂದು ಸ್ಫೂರ್ತಿಗೆ ಬರುವ ಕಾಲವು ದೂರವಾಗಿಲ್ಲ. ಬೆಬಿಲನದಲ್ಲಿಯೂ ಈಜಿಪ್ಟದಲ್ಲಿಯೂ ಅವುಗಳ ಉತ್ಕರ್ಷತೆಯ ಕಾಲದಲ್ಲಿ ಬರೆದಿಟ್ಟ ಹಲವು ಗ್ರಂಥಗಳು ಈಗ ಭೂಸ್ಥಾಪನೆಯಾಗಿವೆ. ಹಲಕೆಲವು ಮಾತ್ರ ಗೆದ್ದಲೆಯ ಬಾಯಿಂದ ತಪ್ಪಿಸಿಕೊಂಡು ವಿಲಾಯತಿಯ ವಿಶ್ವವಿದ್ಯಾಲಯಗಳ, ಪುಸ್ತಕ ಭಂಡಾರಗಳ ಮರೆಹೊಕ್ಕಿವೆ. ನೀವು ಹೊಗಳಿದ ಗ್ರಂಥವು ನೇಪಾಳದಲ್ಲಿ ಒಂದು ವಿಚಿತ್ರ ಸಂದರ್ಭದಲ್ಲಿ ನನ್ನ ಕೈಸೇರಿತು.

**ಚಿತ್ತ:**— ವಿಷಪ್ರಯೋಗದ ಅಧ್ಯಾಯವು ನನ್ನ ಮನಸ್ಸನ್ನು ಆಕರ್ಷಿಸುವುದಕ್ಕೆ ಒಂದು ಬಲವಾದ ಕಾರಣವಿದೆ.

**ಜಂಗ:**— ಇರಬಹುದು.

**ಚಿತ್ತ:**— ಒಂದು ತಿಂಗಳ ಹಿಂದೆ ನಮ್ಮ ಯಜಮಾನರು ಮೋಹನನೊಂದಿಗೆ ನನ್ನನ್ನು ಮುಂಬಯಿಗೆ ಕರೆದುಕೊಂಡು ಹೋಗಿದ್ದರು. ನಾವು 'ಮಲಬಾರಹಿಲ್ಲ್' ಸಮೀಪ ಒಂದು ಬಂಗಲೆಯಲ್ಲಿ ಇಳಿದೆವು. ಮರುದಿನ ಸಾಯಂಕಾಲ ದಾದಿಯೊಡನೆ ಬೀದಿಯಲ್ಲಿ ಹೋಗುವ ಈ ಮೋಹನನನ್ನು ಕಂಡು ಒಬ್ಬ ಫಕೀರನು "ಈ ಮಗುವಿಗೆ ವಿಷದ ಬಾಧೆ ತಟ್ಟಿದೆ' ಎಂದನು. ಅದನ್ನು ಕೇಳಿ ನಾನು ಅವನನ್ನು ಕರೆಯಿಸಿ ವಿಚಾರಿಸಿದಾಗ ಅವನು ಕೊಟ್ಟ ಕಾರಣಗಳಿಂದ ಅವನ ಮಾತಿನಲ್ಲಿ ನನಗೆ ತುಂಬಾ ವಿಶ್ವಾಸವುಂಟಾಯಿತು. ವಿಷವು ದೇಹದಲ್ಲಿ ಹೇಗೆ ಹೇಗೆ ವ್ಯಾಪಿಸುತ್ತದೆಂದು ಅವನು ನನಗೆ ಸಂಕ್ಷೇಪವಾಗಿ ವಿವರಿಸಿದನು. ಅಂದಿನಿಂದ ಈ ಒಂದೇ ಒಂದು ಮಗುವಿನ ಆರೋಗ್ಯರಕ್ಷಣೆಗಾಗಿ ನಾನು ವಿಷಪ್ರಯೋಗದ ಗ್ರಂಥಗಳನ್ನು ಓದ ತೊಡಗಿದೆನು. ನಿಮ್ಮೊಡನೆ ವೈದ್ಯ ಗ್ರಂಥಗಳ ಪ್ರಸ್ತಾಪವನ್ನು ಎತ್ತಲಿಕ್ಕೂ ಅದೇ ಕಾರಣವಾಯಿತು.

**ಜಂಗ:**— ಫಕೀರನ ಹೆಸರು ಮೌಲ್ವೀ ಮಲಿಕ್ ಜಾಫರನೆಂದೇ?

**ಚಿತ್ರ**:— ಹೌದು. ನಿಮಗೆ ಅದು ಹೇಗೆ ಗೊತ್ತಾಯಿತು?

**ಜಂಗ**:— ನಾನೇ ಅವನಾದ್ದರಿಂದ!

**ಚಿತ್ರ**:— ಅದೇನೆನ್ನುವಿರಿ?

**ಜಂಗ**:— ಮುಂಬಾಯಿಯ ವೈಚಿತ್ರ್ಯಗಳನ್ನು ನನ್ನ ಪರಿಚಿತರ ಪೀಡೆಯಿಲ್ಲದೆ ನೋಡಬೇಕೆಂಬ ಆಸೆಯಿಂದ ನಾನು ಫಕೀರನ ಛದ್ಮ ವೇಷದಿಂದ ಸಂಚರಿಸುತ್ತಿದ್ದೆನು. ಆಗ ಒಂದು ದಿನ ಮಲಬಾರ್ ಹಿಲ್ಲಿನಲ್ಲಿ ನಿಮ್ಮ ಮಗನನ್ನು ಕಂಡು ದಾಟಿಯೊಡನೆ ಈ ಮಗು ಯಾರದೆಂದು ವಿಚಾರಿಸಿದೆನು. ಆ ಮೇಲೆ ನಡೆದುದೆಲ್ಲಾ ನಿಮಗೆ ತಿಳಿದೇ ಇದೆ.

**ಚಿತ್ರ**:— ಇದು ವಿಚಿತ್ರ. ನನ್ನ ಬಾಲಕನ ಪ್ರಾಣವನ್ನು ಉಳಿಸಿದವರು ನೀವೇ ಎಂದು ಈಗ ತಿಳಿಯಿತು. ನಿಮ್ಮ ಉಪಕಾರವನ್ನು ಚಿರಸ್ಮರಣೆ ಮಾಡುವೆನು. ಬಗ್ದಾದದ ಖಲೀಫ್ ಹಾರೂನ್ ಅಲ್ ರಶೀದರಂತೆ ಹೀಗೆ ಗೋಪ್ಯರೀತಿಯಿಂದ ಜನೋಪಕಾರವನ್ನು ಮಾಡುತ್ತಿರುವುದು ನಿಮ್ಮ ಗುಣಮಹಾತ್ಮ್ಯದ ಒಂದು ನಿದರ್ಶನವೇ ಸರಿ.

**ಜಂಗ**:— ಛೆ! ಛೀ! ಹಾಗೆನ್ನಬೇಡಿ! ನಾವು ಕಲಿತ ವಿದ್ಯೆಯನ್ನು ಯಾರೊಬ್ಬರ ಹಿತಕ್ಕಾಗಿಯಾದರೂ ವಿನಿಯೋಗಿಸದಿದ್ದರೆ ಅದು ಲೋಭಿಯ ಧನದಂತೆ ನಿರರ್ಥಕವಾಗುವುದಿಲ್ಲವೇ?

ಅಷ್ಟರಲ್ಲಿ ಮಾಲಿನಿಯು ಇವರಿಬ್ಬರು ಕುಳಿತಲ್ಲಿಗೆ ಬಂದಳು. ಚಿತ್ರರಂಜನೆ ತನ್ನ ಸಂಭಾಷಣೆಗೆ ಕೊಡಕಾದುದನ್ನು ತನ್ನ ಮುಖಮುದ್ರೆಯಿಂದ ಒಮ್ಮೆ ತೋರಿಸಿ, ಆಕ್ಷಣವೇ ನಸುನಗುತ್ತಾ "ಅಮ್ಮಾ ಮಾಲಿನಿ! ತಾತನವರಿಗೆ ಪಥ್ಯವನ್ನು ಕೊಟ್ಟು ಬಂದೆಯಾ?" ಎಂದು ವಿನಯಾರ್ದ್ರ ಸ್ವರದಿಂದ ಪ್ರಶ್ನಿಸಿದಳು.

**ಜಂಗ**:— ಇವಳು ನಿಮ್ಮ ಮಗಳೇ?

**ಚಿತ್ರ**:— "ಅಲ್ಲ, ನನ್ನ ಆಗಿಹೋದ ಸವತಿಯ ಮಗಳು. ಆದರೆ ನನ್ನನ್ನು ತಾಯಿಯಂತೆ ಕಾಣುತ್ತಾಳೆ. ಅಲ್ಲವೇ ಮಗು?" ಎಂದು ಅವಳ ಬೆನ್ನನ್ನು ಸವರುತ್ತಾ ನನ್ನ ಬಳಿಯಲ್ಲಿ ನೀಟಿನ ಮೇಲೆ

ಕುಳ್ಳಿರಿಸಿದಳು. ಅಷ್ಟರಲ್ಲಿ ಜಂಗ ಬಹದ್ದೂರನು ಕಿಸೆಯಿಂದ ಚಿನ್ನದ ಗಡಿಯಾರವನ್ನು ಹೊರ ತೆಗೆದು "ಓಹೋ! ನನ್ನನ್ನು ಕಾಣಲಿಕ್ಕೆ ಪೂರ್ವ ಪರಿಚಿತರೊಬ್ಬರು ಇದೇ ಹೊತ್ತಿಗೆ ಬರುವವರಿದ್ದಾರೆ. ಈಗ ನಾನು ಮನೆಗೆ ಹಿಂತೆರಳಬೇಕಾಗಿದೆ. ಇನ್ನೊಮ್ಮೆ ಕಾಣುವೆನು" ಎಂದು ಹೇಳಿ ತಾಯಿ ಮಗಳೊಡನೆ ತೋಟದಿಂದ ಬೈಠಕಖಾನೆಗೆ ಬಂದು ಹಸ್ತಲಾಘವವನ್ನು ಮಾಡಿ ಹೊರಟನು. ಚಿತ್ತರಂಜನೆ ಮಗಳನ್ನು ಕರೆದುಕೊಂಡು ಮನೆಯೊಳಗೆ ಹೋದಳು. ಜಂಗಬಹದ್ದೂರನು ಕತ್ತನ್ನು ತಿರುಗಿಸಿ ಅವಳ ಕಡೆಗೆ ತೀವ್ರದೃಷ್ಟಿಯಿಂದ ನೋಡುತ್ತಾ "ಈ ಪೂತನೆಯು ವಿಷಪ್ರಯೋಗದಿಂದ ತನ್ನ ಮಾವನನ್ನು ಹಾಸಿಗೆ ಹಿಡಿಯುವಂತೆ ಮಾಡಿದಳು. ಅದರ ಕಿಂಚಿತ್ ಲೇಪನವು ತನ್ನ ಮಗನಿಗೆ ತಗಲಿರಬಹುದೆಂದು ಹೆದರಿ ಫಕೀರನ ವೇಷದಲ್ಲಿದ್ದ ನನ್ನಿಂದ ಆತನಿಗೆ ಚಿಕಿತ್ಸೆ ಮಾಡಿಸಿದಳು. ಇನ್ನೂ ಸೂಕ್ಷ್ಮ ರೀತಿಯ ವಿಷ ಪ್ರಯೋಗಗಳನ್ನು ಕಲಿತುಕೊಳ್ಳುವ ಉದ್ದೇಶದಿಂದಲೇ ಇವಳು ನನ್ನಲ್ಲಿಂದ ಆ ವೈದ್ಯಕೀಯ ಪುಸ್ತಕವನ್ನು ತರಿಸಿದಳು. ಅಧಿಕಾರದ ಮಹತ್ವಾಕಾಂಕ್ಷೆಯುಳ್ಳ ಮುರಾರಿರಾಯನು ಈ ಕೃಷ್ಣಸರ್ಪವನ್ನು ತನ್ನ ಎದೆಯ ಮೇಲೆ ಸುಳಿಯುವುದಕ್ಕೆ ಎಡೆಕೊಟ್ಟಿರುವನು. ತನಗೆ ಪಾಕವನ್ನು ಕೊಟ್ಟ ದೇಹವನ್ನೇ ಕಡಿದು ತನ್ನ ವಿಷದ ಹಲ್ಲುಗಳನ್ನು ಎಂದಿಗೆ ಈ ಕಾಳ ಸರ್ಪವು ತೋರಿಸುವುದೋ ಎಂದು ನೋಡಲಿಕ್ಕಿದೆ. ಸರ್ಪವು ಬರೇ ದೃಷ್ಟಿಮಾತ್ರದಿಂದಲೆ ಕಪ್ಪೆ, ಹಲ್ಲಿ ಮೊದಲಾದವುಗಳನ್ನು ಮಂಕುಗೊಳಿಸಿ ನಿಶ್ಚೇತನ ಮಾಡುವಂತೆ ಇವಳು ತನ್ನ ಮಾಯಾಜಾಲವನ್ನು ಎಲ್ಲೆಲ್ಲಿಯೂ ಪಸರಿಸುತ್ತಿರುವಳು. ಇವಳು ಯಾರನ್ನು ಯಾವ ಕಾಲಕ್ಕೆ ಬಲಿಯಿಕ್ಕುವಳು ಎಂದು ಗೊತ್ತು ಹಚ್ಚುವುದು ಕಷ್ಟ. "ಆಸೆಗೆ ಪಾರವಿಲ್ಲ, ಮನವೇ ಸೈರಿಸು" ಎಂದು ತನ್ನೊಳಗೆ ಅಂದುಕೊಂಡು ತನ್ನ ಬಂಡಿಯಲ್ಲಿ ಕುಳಿತು ಬಂಗಲೆಯ ಕಡೆಗೆ ಹಿಂತೆರಳಿದನು.

---

## ಎಂಟನೆಯ ಅಧ್ಯಾಯ

### ಅಯೇಷೆಯ ಪೂರ್ವಕಥೆ

ಅಸ್ಮಾನಬಾಗಿನ ಬಂಗಲೆ. ಸಾಯಂಕಾಲದ ಸಮಯ. ಜಂಗಬಹದ್ದೂರನು ವಾಯುಸೇವನೆಗಾಗಿ ಬಂಗಲೆಯ ಹೊರಚಾವಡಿಯಲ್ಲಿ ಆರಾಮು ಕುರ್ಚಿಯ ಮೇಲೆ ಬಿದ್ದುಕೊಂಡಿದ್ದನು. ಬಲಕಡೆಯಲ್ಲಿ ಬೆಳ್ಳಿಯ ಕೆತ್ತನೆ ಕೆಲಸದಿಂದ ಮಾಡಿದ ಹುಕ್ಕೆ. ಹುಕ್ಕೆಯನ್ನು ಸರಿಪಡಿಸಿಕೊಂಡು ಗಫೂರನು ಮೇಲಿನ ಪನ್ನಾಲೆಯಲ್ಲಿ ಉರಿಯುವ ಕೆಂಡಗಳನ್ನು ಇಟ್ಟು ಊದುತಿದ್ದನು. ಹುಕ್ಕೆಯ ನಳಿಗೆಯನ್ನು ಜಂಗಬಹದ್ದೂರನು ಬಾಯೊಳಗೆ ಇಟ್ಟುಕೊಂಡು ಸೇದುತ್ತಾ, ಹೊಗೆಯ ಉಂಗುರಗಳನ್ನು ಗಾಳಿಯಲ್ಲಿ ತೇಲಿಸುತ್ತಾ ಏನೋ ಆಲೋಚನೆ ಮಾಡುತ್ತಾ ಕುಳಿತಿದ್ದನು. ಅಷ್ಟರಲ್ಲಿ ಬಂಗಲೆಯ ಗೇಟಿನಿಂದ ಒಳಕ್ಕೆ ಬರುವ ಮಾರ್ಗದಲ್ಲಿ ಒಂದು ವಿಕ್ಟೋರಿಯದ ಶಬ್ದವು ಕೇಳಿಸಿತು. ಗಫೂರನು ಕಿಟಕಿಯೊಳಗಿನಿಂದ ಹೊರಗೆ ಇಣಿಕಿ ನೋಡಿದನು. ಯಾರೋ ದೊಡ್ಡ ಮನುಷ್ಯರು ಬಂದರೆಂದು ಗೊತ್ತಾಗಿ ಜಂಗಬಹದ್ದೂರನ ಅಪ್ಪಣೆಯನ್ನು ಕಾಯುತ್ತ ನಿಂತನು. ಜಂಗಬಹದ್ದೂರನು ಹುಬ್ಬು ಗಂಟಿಕ್ಕಿ ಬಾಗಿಲ ಕಡೆಗೆ ಬೆರಳನ್ನು ತೋರಿಸಿದನು. ಗಫೂರನು ಹೊರಗೆ ಓಡಿ ಹೋಗಿ ಆ ಕ್ಷಣವೇ ಒಳಗೆ ಬಂದು ಒಂದು ಚಿಕ್ಕ ಕಾಗದವನ್ನು ತೋರಿಸಿದನು. ಅದರಲ್ಲಿ ಬರೆದಿರುವ ವಿಳಾಸವನ್ನು ಓದಿ ಜಂಗಬಹದ್ದೂರನು 'ಆಗಂತುಕನನ್ನು ಒಳಕ್ಕೆ ಕರೆದುಕೊಂಡು ಬಾ' ಎಂದು ಕೈಸನ್ನೆಯಿಂದಲೇ ಹೇಳಿದನು. ಗಫೂರನು ಆ ವ್ಯಕ್ತಿಯನ್ನು ಒಳಗೆ ಕರೆದುಕೊಂಡು ಜಂಗಬಹದ್ದೂರನ ಆರಾಮು ಕುರ್ಚಿಯ ಸಮೀಪದಲ್ಲಿಯೇ ಒಂದು ಕುರ್ಚಿಯನ್ನು ತಂದಿರಿಸಿದನು. ಜಂಗಬಹದ್ದೂರನು ಬಂದ ವ್ಯಕ್ತಿಗೆ "ರಾಮ್ ರಾಮ್" ಮಾಡಿ, "ರಘುನಾಥ ಪಂತರೇ! ಹೀಗೆ ಬನ್ನಿ! ನಿಮ್ಮ ಗಾಯಗಳೆಲ್ಲಾ ಮಾಯ್ದಿವೆಯೇ? ನಿಮ್ಮ ಆರೋಗ್ಯ ಹೇಗಿದೆ ಈಗ?" ಎಂದು ಬಾಯಿ, ಕಣ್ಣು, ಹುಬ್ಬುಗಳಿಂದಲೂ ವಿಚಾರಿಸಿದನು.

**ರಘುನಾಥ:**—ಗಾಯಗಳೇನೋ ಒಣಗಿವೆ. ಆದರೆ (ದೇಹ ದಲ್ಲಿ) ಶಕ್ತಿ ಮೊದಲಿನಷ್ಟು ಬರಲಿಲ್ಲ. ನಿಮ್ಮ ಉಪಕಾರವನ್ನು ಎಂದೆಂದಿಗೂ ಮರೆಯಲಾರೆ. ಸಕಾಲದಲ್ಲಿ ನೀವು ಒದಗಿದಿರಿ. ಅಲ್ಲ ದಿದ್ದರೆ, ಮಹಾಬಲೇಶ್ವರಕ್ಕೆ ಹೋದ ನಾನು ಅಲ್ಲಿಂದ ನೆಟ್ಟಗೆ ಕೈಲಾಸದ ಹಾದಿಯನ್ನೇ ಹಿಡಿಯ ಬೇಕಾಗಿತ್ತು. ಆ ಸುಲಿಗೆಗಾರರು ನಮ್ಮಂಥವರ ಮೇಲೆಯೇ ಈ ಬಗೆಯ ಅತ್ಯಾಚಾರ ನಡೆಸುವುದಾದರೆ ಬಡ ಜನರ ಪಾಡೇನೆನ್ನಬೇಕು?

**ಜಂಗ:**—ಓಹೋ! ಮಾವಳಿಗಳ ಗುಟ್ಟು ನಿಮಗೆ ಗೊತ್ತಿಲ್ಲ ವೇನೋ? ಶಿವಾಜಿಯ ಕಾಲದಿಂದಲೂ ಅವರು ಬಡವರನ್ನು ಸುಲಿಯು ವುದಿಲ್ಲ. ಬಡವರ ಮೇಲೆ ಅವರಿಗೆ ದಯೆ ಅನುತಾಪವು ಬಹಳ. ಶ್ರೀ ಮಂತರನ್ನು ಕಂಡರೆ ಅವರಿಗಾಗದು. ನಾವು ನಮ್ಮ ಸ್ವಂತ ಬೆವರಿನ ಧನದಿಂದ ಜೀವಿಸದೆ ಇತರರ ದುಡಿತದ ಹಣವನ್ನು ಕಿತ್ತುಕೊಂಡು ಸುಖಜೀವನ ಮಾಡುವ ಮೈಗಳ್ಳರೆಂದು ಅವರ ಅಭಿಪ್ರಾಯ.

**ರಘುನಾಥ:**—ಮಾವಳಿಗಳ ವಿಚಾರವು ಎಂಥದ್ದೆ ಇರಲಿ! ನನ್ನ ಪ್ರಾಣವನ್ನು ಅವರು ಕಿತ್ತುಕೊಳ್ಳಲಿರುವಾಗ, ನೀವು ತೋರಿಸಿದ ಅಮಾನುಷ ಪೌರುಷವನ್ನು ಕೇಳಿ ನನ್ನ ಮಾತಾಪಿತೃಗಳು ತುಂಬಾ ಚಕಿತರಾದರು. ನಿಮ್ಮನ್ನು ಒಮ್ಮೆ ನಮ್ಮ ಮನೆಗೆ ಕರೆಯಿಸಿ ಸ್ವಂತ ಮಾತುಗಳಿಂದಲೇ ತಮಗೆ ಧನ್ಯವಾದವನ್ನು ಅರ್ಪಿಸಬೇಕೆಂದು ಅವ ರಿಗೆ ತುಂಬಾ ಲವಲವಿಕೆ. ಅದಕ್ಕೆ ಅನುಕೂಲವಾಗಿಯೇ ಒಂದು ಸುಸಂಧಿಯು ಈಗ ದೊರಕಿವೆ.

**ಜಂಗ:**—ಅಂಥದೇನದು?

**ರಘುನಾಥ:**—ಇನ್ನೆರಡು ದಿನಗಳಲ್ಲಿ ಸಾಯಂಕಾಲ ನಮ್ಮ ಮನೆಯಲ್ಲಿ ಒಂದು 'ಟೀ ಪಾರ್ಟೀ' ಇದೆ. ಅದಕ್ಕೆ ನಿಮ್ಮನ್ನು ನಾನು ಸ್ವತಃ ಆಮಂತ್ರಿಸಬೇಕೆಂದು ನನ್ನ ಮಾತಾಪಿತೃಗಳು ನನ್ನನ್ನು ಇಲ್ಲಿಗೆ ಕಳುಹಿಸಿರುವರು.

**ಜಂಗ:**—ಓಹೋ, ನಿಮ್ಮ ಜೀವದ ಮೇಲೆ ಬಂದ ಅಪಾಯವು ತಪ್ಪಿಹೋದ ದೆಸೆಯಿಂದ ತಮ್ಮ ಸಂತೋಷವನ್ನು ವ್ಯಕ್ತಗೊಳಿಸುವು ದಕ್ಕಾಗಿ ಈ ಟೀ ಪಾರ್ಟಿಯೇ?

**ರಘುನಾಥ:**—"ಅಲ್ಲ, ಅಲ್ಲ. ನಿಮಗೆ ಆ ಸಮಾಚಾರವು ಇನ್ನು ಗೊತ್ತಾಗದೆ ಇರಬಹುದು. ರಾಜರ ಜನ್ಮದಿನದ ಬಹುಮಾನ ಬಿರುದುಗಳಲ್ಲಿ ನಮ್ಮ ತಂದೆಯವರಿಗೆ "ರಾಜಕಾರ್ಯಧುರಂಧರ" ಎಂಬ ಬಿರುದನ್ನೂ ಖಿಲ್ಲತನ್ನೂ ದಯೆಪಾಲಿಸಿರುವುದಾಗಿ ಗವರ್ನರ್ ಸಾಹೇಬರಿಗೆ ತಂತೀ ವರ್ತಮಾನ ಬಂದಿದೆ. ಗವರ್ನರ್ ಸಾಹೇಬರು ಅದನ್ನು ನಿನ್ನೆಯೇ ನಮಗೆ ತಿಳಿಸಿದರು. ಆ ಸಂತೋಷದ ಸಮಾರಂಭಕ್ಕಾಗಿ ಪೂನೆಯ ಮುಖಂಡ ಗೃಹಸ್ಥರಿಗೆಲ್ಲಾ ಒಂದು ಟೀ ಪಾರ್ಟಿ ಕೊಡಬೇಕೆಂದು ನಿಶ್ಚಯಿಸಿದೆವು. ತಮ್ಮನ್ನು ಆಮಂತ್ರಿಸಲು ನಾನೇ ಬಂದಿರುವೆನು." ಅಷ್ಟರಲ್ಲಿ ಬಂಗಲೆಯ ಒಂದು ಕೋಣೆಯೊಳಗಿಂದ ಮಧುರವಾದ ಸತಾರಿನ ಧ್ವನಿಯೊಡನೆ ಸಮ್ಮಿಳಿತವಾದ ಕಂಠಸ್ವರವು ಕೇಳಿಸಿತು. ರಘುನಾಥ ಪಂತನು ಈ ಅಪೂರ್ವ ಕಂಠಸ್ವರವನ್ನು ಕೇಳಿ ನಾಲ್ಕೈದು ನಿಮಿಷ ತಟಸ್ಥನಾಗಿ, "ಜಂಗಬಹದ್ದೂರರೇ! ಈ ಬಂಗಲೆಯಲ್ಲಿ ನೀವು ಇರುವುದೊಬ್ಬರೇ ಎಂದು ಎಲ್ಲರ ನಂಬಿಕೆ. ಹಾಗಾದರೆ, ಇಲ್ಲಿ ಸ್ತ್ರೀಯ ಕಂಠದಿಂದ ಹೊರಡುವ ಇಂಪಾದ ಸ್ವರವು ಎಲ್ಲಿಂದ?"

**ಜಂಗ:**—(ನಸುನಗುತ್ತಾ)—ಅವಳು ಮತ್ತಾರೂ ಅಲ್ಲ, ನನ್ನ ಸಾಕುಮಗಳು ಅಯೇಷೆ. ವಿನೋದಕ್ಕಾಗಿ ಅವಳು ಹಾಡುವಂತಿದೆ.

**ರಘುನಾಥ:**—ತಮ್ಮ ಸಾಕುಮಗಳೇ! ತಾವು ಎಲ್ಲಿಯೂ ಅವಳನ್ನೊಡಗೂಡಿ ಬಂದುದನ್ನು ಯಾರೂ ಕಂಡಿಲ್ಲ. ಅವಳು ಘೋಷಾ ಪದ್ಧತಿಯನ್ನು ಅನುಸರಿಸುತ್ತಾಳೆಯೋ?

**ಜಂಗ:**—ಛೇ! ಛೇ! ಆ ಬಾಲೆಗೆ ಅಂಥ ನಿರ್ಬಂಧಗಳೇನೂ ಇಲ್ಲ. ಆಗರ್ಭ ಶ್ರೀಮಂತೆಯಾದ ಅವಳು ತನ್ನ ಬಾಲ್ಯದಲ್ಲಿಯೇ ಅಪೂರ್ವ ಸಂಕಷ್ಟಗಳನ್ನು ಅನುಭವಿಸಿದಳು. ಆದುದರಿಂದ ಅವಳಿಗೆ ಯಾವುದೊಂದು ಬಗೆಯ ಪ್ರತಿಬಂಧಕಗಳನ್ನೂ ನಾನು ಇಟ್ಟಿಲ್ಲ. ತನ್ನ ಕಾಲವನ್ನು ಅವಳು ಗ್ರಂಥಪಠನ, ಗಾಯನ, ಚಿತ್ರಲೇಖನ ಮುಂತಾದ ಕಲೆಗಳಲ್ಲಿಯೇ ಕಳೆಯುತ್ತಿರುವಳು.

**ರಘುನಾಥ:**—ಅಂದರೆ ಒಂದು ಕಾಲದಲ್ಲಿ, ಗನಿಯಲ್ಲಿ, ಕೀಳು ಲೋಹಗಳ ಅದುರಿನೊಂದಿಗೆ ಇದ್ದು ಮಲಿನವಾಗಿರುವ ಚಿನ್ನವು

ತಮ್ಮಂಥ ರಸಾಯನ ಶಾಸ್ತ್ರಜ್ಞರ ಕೈಸೇರಿ ಹದಿನಾರು ಬಣ್ಣದ ಪುತ್ಥಳಿ ಚಿನ್ನವಾಗುತ್ತದೆ, ಎನ್ನುವಿರಾ?

**ಜಂಗ:**—ಅವಳು ಪುತ್ಥಳಿ ಚಿನ್ನವೊ ಬೆಟ್ಟಿ ಬಂಗಾರವೊ ಎಂಬುದನ್ನು ಅವಳ ಸಂಭಾಷಣೆ, ವರ್ತನಗಳಿಂದ ನೀವೇ ಗೊತ್ತು ಹಚ್ಚಬಹುದು. ತಾರುಣ್ಯದ ವಯಸ್ಸು ವಿಶಾರಿ ಕಾರಣಾಂತರದಿಂದ ಅವಿವಾಹಿತನಾದ ನನಗೆ ಇಂಥ ಹೀರಕವು ಮಣ್ಣಿನ ರಾಶಿಯಲ್ಲಿ ಹುದುಗಿರುವುದು ಹಿತವಾಗಿ ಕಾಣಿಸಲಿಲ್ಲ. .ಅದನ್ನು ಚಿನ್ನದ ಕುಂದಣದಲ್ಲಿ ಇರಿಸಬೇಕೆಂಬುವೆ ನನ್ನ ಇಚ್ಛೆ! ನನ್ನ ಸದಾ ಚಿಂತನೆ.

**ರಘುನಾಥ:**—ಅಂಥ ಸದಿಚ್ಛೆಯು ತಮ್ಮಂಥ ಗುಣಗ್ರಾಹಿಗಳಿಗೆ ತಕ್ಕುದೇ; ಅದಿರಲಿ. ತಮ್ಮ ಅಯೇಷೆಯ ಮೃದು ಮಧುರ ಗಾನವನ್ನು ನಾನೂ ಕೇಳಬೇಕೆಂದಿದ್ದೇನೆ. ಅಂಥ ಲವಲವಿಕೆಯನ್ನು ತೃಪ್ತಿಪಡಿಸಲು ಸಾಧ್ಯವಿದೆಯೇ?

**ಜಂಗ:**—ಗಫೂರ! ಅಯೇಷೆಯನ್ನು ಇಲ್ಲಿಗೆ ಬರ ಹೇಳು. ಅವಳ ಗಾಯನವು ಇಲ್ಲಿಯೇ ಆಗಲಿ, ನಾವಿಬ್ಬರೂ ಕೇಳುವೆವು.

ಗಫೂರನು ಬಹದ್ದೂರರ ಮಾತನ್ನು ಕೇಳಿದೊಡನೆಯೇ ಅಯೇಷೆಯನ್ನು ಕರೆದುಕೊಂಡು ಅವಳ ಹಿಂದಿನಿಂದ ತಾನು ಸತಾರನ್ನು ಹೊತ್ತು ತಂದನು. ಅಯೇಷೆಯು ಜಂಗಬಹದ್ದೂರರ ಕುರ್ಚಿಯಿಂದ ತುಸು ದೂರದಲ್ಲಿ ರತ್ನ ಕಂಬಳಿಯ ಮೇಲೆ ಕುಳಿತುಕೊಂಡಳು.

**ಜಂಗ:**—ಮಗೂ ಅಯೇಷಾ! ನಮ್ಮ ಈ ಗೆಳೆಯನು ನಿನ್ನ ಗಾಯನವನ್ನು ದೂರದಿಂದ ಕೇಳಿಯೇ ಮುಗ್ಧನಾಗಿರುವನು. ಒಂದೆರಡು ಗಜಲ್‌ಗಳನ್ನೂ ಹಾಡಿ ನಿನ್ನ ಸಂಗೀತಜ್ಞಾನದ ಪರಿಚಯವನ್ನು ನಮಗೆ ಮಾಡಿಸಲಾರೆಯಾ?

ಅಯೇಷೆ ನಸುನಕ್ಕು ಸತಾರನ್ನು ಸರಿಗೊಳಿಸುತ್ತ ಅತ್ಯುಚ್ಚವಾದ ಸ್ವರದಿಂದ ಹಾಡತೊಡಗಿದಳು. ಜಂಗಬಹದ್ದೂರನು ಕುರ್ಚಿಯಲ್ಲಿ ಕುಳಿತವನು ಗಾಯನದ ತರಂಗಗಳಲ್ಲಿ ಕ್ರೀಡಿಸುತ್ತ ಉನ್ಮತ್ತಾವಸ್ಥೆಯಲ್ಲಿ ಕಣ್ಣು ಮುಚ್ಚಿ ಹುಕ್ಕೆಯನ್ನು ಸೇದುತ್ತ, ಕೊಂಚ ಹೊತ್ತು ಕುಳಿತನು. ರಘುನಾಥ ಪಂತನೂ ಗಾಯನವನ್ನು ಕೇಳುತಿದ್ದ ಹಾಗೆ ತಲೆದೂಗುತ್ತ

ಸ್ವರ್ಗಸುಖವನ್ನು ಅನುಭವಿಸುವವನಂತೆ ತಟಸ್ಥನಾಗಿದ್ದನು. ಹೀಗೆ ಇವರಿಬ್ಬರು ಗಾನಾಮೃತ ಸೇವನೆಯಿಂದ ವಿಸ್ಮೃತಿಯನ್ನು ಹೊಂದಿರು ವಾಗಲೇ ಈ ಬಾಲೆಯ ವರ್ಣನೆಯನ್ನು ನಾವು ಮಾಡಲು ಯತ್ನಿಸುವೆವು.

ಉದ್ಗ್ರಂಥಗಳಲ್ಲಿ ಅಪ್ಸರೆಯರ ಗಾನವೇ ಅತ್ಯುತ್ಕೃಷ್ಟವೆಂದು ಹೊಗಳಿರುವರು. ಅಪ್ಸರೆಯರನ್ನೂ ನಾವು ಕಣ್ಣಾರೆ ಕಂಡಿಲ್ಲವಾದುದ ರಿಂದ ನಮಗೆ ತಿಳಿಯದ ವಸ್ತುವನ್ನು ಈ ಬಾಲೆಯ ರೂಪಲಾವಣ್ಯ ಗಳಿಗೆ ಸರಿಹೋಲಿಸಲು ಯತ್ನಿಸುವುದು ಭ್ರಮೆಯಾದೀತು. ನಿಮ್ಮ ಮಗಳು ಪರಮ ಸುಂದರಿಯೂ, ನಿಷ್ಕಳಂಕ ಮನಸ್ಸಿನ ಶಾಂತಚಿತ್ತಳೂ ಇರಬೇಕೆಂದು ನೀವು ಕಲ್ಪಿಸುವುದಾದರೆ ಆ ಸೌಂದರ್ಯ ಮತ್ತು ಆ ಗುಣಸಮುದಾಯವು ಯಾವ ಮೂರ್ತಿಯಲ್ಲಿ ಐಕ್ಯವಾಗಿದ್ದರೆ ನಿಮಗೆ ಸುಖವನ್ನು ಕೊಡಬಹುದೆಂದು ನೀವು ಭಾವಿಸುವಿರೊ ಅಂಥ ಸುಖ ವನ್ನು ಈಗ ಜಂಗಬಹದ್ದೂರನು ಅಯೇಷೆಯಿಂದ ಅನುಭವಿಸು ತಿದ್ದನೆಂದು ತಿಳಿಯಿರಿ. ಈ ಬಾಲೆಯು ತಾರುಣ್ಯದಲ್ಲಿ ಆಗಲೆ ಕಾಲಿಟ್ಟಿದ್ದಳು. ಗೌರಾಂಗ, ಬಳುಕುವ ಮೈ, ನಸುನಗುವ ಮುಖ, ಈ ನಗುವಿನಲ್ಲಿ ಮಿನುಗುವ ಹಲ್ಲುಗಳ ಮಾಲೆ, ಅವುಗಳ ಮಿನುಗನ್ನು ಪೂರ್ಣ ಕಾಣಿಸದೆ ಮುಚ್ಚಲು ಯತ್ನಿಸುವ ಕೆಂದುಟಿಗಳು, ಅರಿತೆರೆದ ಕಣ್ಣುಗಳು, ವಿಶಾಲವಾದ ಹಣೆ, ಶುಭ್ರ ಬಿಳುಪಾದ ಜರೀ ಅಂಚಿನ ಲಂಗ, ಲಂಗದ ಮೇಲೆ ಮೈಗೆ ಒತ್ತಾಗಿ ಸುತ್ತಿದ ಜರೀ ಅಂಚಿನ ಗುಲಾಬಿ ಬಣ್ಣದ ಪಟ್ಟೆ ಸೀರೆ, ಅದೇ ಬಣ್ಣದ ಕುಮಿಾಸು, ಕಂಠಕ್ಕೆ ಒತ್ತಾಗಿ ಮುತ್ತಿನ ಚಿಕ್ಕದೊಂದು ಹಾರ, ಕೈಗೆ ಎರಡೆರಡು ಚಿನ್ನದ ಬಳೆಗಳು, ಈ ಬಳೆಗಳಲ್ಲಿ ಅಲ್ಲಲ್ಲಿ ಚಿಕ್ಕ ಕೆಂಪು, ವಜ್ರಗಳು. ಇಷ್ಟೆ ಅಲಂಕಾರದಿಂದ ನೀವು ಅಯೇಷೆಯ ಚಿತ್ರವನ್ನು ಕಲ್ಪಿಸಿಕೊಳ್ಳುವಿ ರಾದರೆ ನಮ್ಮ ವರ್ಣನೆಯು ಮುಗಿಯಿತೆನ್ನಬಹುದು. ಹೆಸರಿನಂತೆ ಅಯೇಷೆಯು ಮುಸಲ್ಮಾನಿ ತರುಣಿಯಂತೆ ಕಾಣುತಿದ್ದಳಲ್ಲದೆ ಹಿಂದೂ ವಿನ ಲಕ್ಷಣಗಳು ಅವಳಲ್ಲಿ ಕಾಣುತ್ತಿರಲಿಲ್ಲ.

ಗಾಯನವು ಫಕ್ಕನೆ ನಿಂತು ಹೋಯಿತು. ಅವರ ತರಂಗ ಗಳಲ್ಲಿ ಓಲಾಡುತಿದ್ದ ಜಂಗಬಹದ್ದೂರನೂ ರಘುನಾಥ ಪಂತನೂ

ಫಕ್ಕನೆ ನಿದ್ದೆಯಿಂದ ಎಚ್ಚೆತ್ತಹಾಗೆ ಒಬ್ಬರನ್ನೊಬ್ಬರು ನೋಡುತಿದ್ದರು. ಒಂದೆರಡು ನಿಮಿಷಗಳು ದಾಟಿದ ಮೇಲೆ ರಘುನಾಥ ಪಂತನು

"ಇದೆಂತಹ ಅಪೂರ್ವ ಗಾನ! ಸತಾರಿನ ಸ್ವರದಲ್ಲಿ ಮಿಳಿತವಾಗಿ ಮನಸ್ಸಿಗೆ ಅತಿಶಯ ಶಾಂತಿದಾಯಕವಾದ ಇಂಥ ವಿಚಿತ್ರ ಗಾನ ಸುಖವನ್ನು ಇದುವರೆಗೆ ನಾನೆಂದೂ ಅನುಭವಿಸಿಲ್ಲ."

**ಜಂಗ**:—ಅವಳ ಗಾನವು ಎಷ್ಟು ಮಧುರವೊ, ಅವಳ ನಿಷ್ಕಳಂಕ ಮನಸ್ಸಿನ ವೃತ್ತಿವ್ಯಾಪಾರಗಳೂ, ನಡೆನುಡಿಗಳೂ ಅಷ್ಟೆ ಉದಾತ್ತವಾಗಿವೆ. ಲೋಕದ ಡಂಭಾಚಾರದ ಸಂತೆಯಲ್ಲಿ ಅಲೆದಲೆದು, ಸುಳಿಸುಳಿದು, ಅಲ್ಲಿ ಕಾಣುವ "ತಕಾರಿ" ವಸ್ತುಗಳ ನೋಟದಿಂದ ಜಿಗುಪ್ಸೆ ಹತ್ತಿದ ಮನಸ್ಸಿಗೆ ಶಾಂತಿಯನ್ನೀಯುವುದಕ್ಕೆ ಇಂಥ ಬಾಲಿಕೆಯ ಗಾನವೊ, ಅವಳ ನಡೆನುಡಿಗಳೊ ಬೇಕಾಗುತ್ತಿವೆ. ಎತ್ತರವಾದ ಆಕಾಶದಲ್ಲಿ ಹಾರಿ ಹಾರಿ, ಸೂರ್ಯನ ಬೇಗೆಯಿಂದ ಬೇಸತ್ತು ಗರಿಕೆದರಿದ ಹಕ್ಕಿಯು ಎತ್ತರವಾದ ಮತ್ತು ನಿರ್ಜನವಾದ ಕೋಡುಗಲ್ಲಿನ ಮೇಲೆ ಕುಳಿತು ತನ್ನ ಪಕ್ಕಗಳನ್ನು ಕೊಕ್ಕಿನಿಂದ ಸೀವಿ ಸರಿಗೊಳಿಸುತ್ತಿದೆ. ಅಂತೆಯೇ ಬಾಹ್ಯಾಡಂಬರದ ಲೋಕದಲ್ಲಿ ಸುಳಿಸುಳಿದು, ಬಳಲಿ ಅಕಲವಿಕಲವಾದ ನನ್ನ ಮನಸ್ಸು ಈ ಬಾಲೆಯ ಗಾನ ಸಲ್ಲಾಪಗಳಿಂದ ಶಾಂತಿಯನ್ನು ಹೊಂದುತ್ತಿದೆ.

**ರಘುನಾಥ**:—ಈ ತರುಣಿಗೆ ಬಾಲ್ಯದಲ್ಲಿಯೇ ಕಷ್ಟ ಸಂಕಷ್ಟಗಳು ಒದಗಿದವು ಎನ್ನುತ್ತೀರಲ್ಲ! ಆ ಕಥೆಯನ್ನು ನಾನೂ ಕೇಳಬಹುದೇ?

**ಜಂಗ**:—ಅಡ್ಡಿಯಿಲ್ಲ; ಅವಳ ನುಡಿಗಳಿಂದಲೇ ನೀವು ಕೇಳಬಹುದು. ಆದರೆ ಅದು ಬಹಳ ದುಃಖಕರವಾದ ಕಥೆ. ಅದನ್ನು ಒಮ್ಮೆ ಬಹಳ ಕಾಲದ ಹಿಂದೆ, ಅವಳು ಸವಿಸ್ತಾರವಾಗಿ ನನಗೆ ಹೇಳಿದಳು. ಆಗ ಗಟ್ಟಿಯಾದ ಶಿಲೆಯು, ಸ್ಫೋಟನದ ಮದ್ದಿನಿಂದ ಒಡೆದು, ಅದರೊಳಗಿಂದ ಬುಗ್ಗೆಯು ಉಕ್ಕಿ ಬರುವ ಹಾಗೆ, ಕಠಿನವಾದ ನನ್ನ ಎದೆಯು ಕೂಡಾ ಬಿರಿದು ಹೋದಂತಾಗಿ ದುಃಖವು ದ್ರವಿಸಿತು.

**ರಘುನಾಥ:**—ಅಂಥ ದುಃಖಕರವಾದ ಕಥೆಯನ್ನು ನಾನೇಕೆ-ನಾನೇಕೆ ಕೇಳಬಾರದು? ನನ್ನ ಒಡಹುಟ್ಟಿನವಳ ಮೇಲಿರಬೇಕಾದ ತಾಪವೂ ವಾತ್ಸಲ್ಯವೂ ಈ ಬಾಲಿಕೆಯ ಮೇಲೆ ನನ್ನಲ್ಲಿ ಮೊಳೆತಿವೆ. ಆದುದರಿಂದ ಅವಳ ದುಃಖದಲ್ಲಿ ನಾನೇಕೆ ಸಹಭಾಗಿಯಾಗಬಾರದು?

**ಜಂಗ:**—"ಹಾಗಿದ್ದರೆ"—ಎಂದು ಅಯೇಷೆಯನ್ನು ತನ್ನ ಬಳಿಗೆ ಕರೆದು ಇನ್ನೊಂದು ಕುರ್ಚಿಯಲ್ಲಿ ಕುಳ್ಳಿರ ಹೇಳಿದನು. ಗಫೂರನು ಒಡನೆಯೆ ಹಿಂದಿನಿಂದ ಬಂದು ಕುರ್ಚಿಯನ್ನು ತಂದಿಟ್ಟನು. ಜಂಗಬಹದ್ದೂರನು "ಮಗೂ, ಅಯೇಷಾ! ನಿನ್ನ ಪೂರ್ವ ವೃತ್ತಾಂತವನ್ನು ಕೇಳಿ ನಿನ್ನ ದುಃಖದಲ್ಲಿ ಸಹಭಾಗಿಯಾಗಬೇಕೆಂದು ಈ ನನ್ನ ಸನ್ಮಿತ್ರನು ಕುತೂಹಲಚಿತ್ತನಾಗಿದ್ದಾನೆ. ಧೀರತನದಿಂದ ಹೇಳು! ಹಳೇ ಕಥೆಯಾದುದರಿಂದ ಹೆಸರುಗಳನ್ನು ಹೇಳಬೇಕಾಗಿಲ್ಲ, ಕಂಡೆಯಾ! ಆ ನಾಮೋಚ್ಚಾರಣೆಯಿಂದ ಈಗ ವಿಶೇಷ ಫಲವೂ ಇಲ್ಲ."

"ಹಾಗೆಯೇ ಆಗಲಿ" ಎಂದು ಆಲೋಚಿಸುತ್ತ ಅಯೇಷೆಯು ಸಮೀಪದಲ್ಲೆ ಗೋಡೆಗೆ ಒತ್ತಾಗಿರುವ ಮೇಜಿನ ಮೇಲಿರುವ 'ಫಿಲ್ಟರಿ'ನಿಂದ ಒಂದು 'ಟಂಬ್ಲರಿ'ನಲ್ಲಿ ನೀರನ್ನು ಸುರಿದು ಕುಡಿದು ಹೀಗೆ ಆರಂಭಿಸಿದಳು:—

"ಒಂದು ರಾತ್ರೆ—ಆಗ ನನಗೆ ಬರೆ ನಾಲ್ಕು ವರ್ಷ ಪ್ರಾಯ—ನನ್ನ ತಾಯಿ ನನ್ನ ಮಂಚದ ಬಳಿಯಲ್ಲಿ ಕುಳಿತು ನನಗೆ ನಿದ್ದೆಬರುವಂತೆ ಕಥೆಯನ್ನು ಹೇಳುತಿದ್ದಳು. ಆಗ ಫಕ್ಕನೆ ಅವಸರದಿಂದ ನನ್ನ ತಂದೆಯು ನಾವಿರುವ ಕೋಣೆಯೊಳಗೆ ಬಂದರು. ಅವರ ಕಣ್ಣುಗಳು ಕೆಂಪಾಗಿದ್ದವು. ಅವರ ತುಟಿಗಳು ನಡುಗುತ್ತಿದ್ದವು. ಆ ಚಿತ್ರವು ಈಗಲೂ ನನ್ನ ಕಣ್ಣಮುಂದೆ ಸುಳಿಯುತ್ತಿದೆ—ಅವರು ನಮ್ಮ ತಾಯಿಯನ್ನು ಕರೆದು "ಇಗೊ ಈ ಮಗುವನ್ನು ಕರೆದುಕೊಂಡು, ಅದರ ದಾದಿಯೊಂದಿಗೆ ಈಗಲೆ ಹೊರಡು! ವಿರಾಮವಿಲ್ಲ. ತಳುವಿದರೆ—ವಿಳಂಬಿಸಿದರೆ—ಘೋರ ವಿಪತ್ತು. ನಿಮಗಿಬ್ಬರಿಗೂ ಪ್ರಾಣಾಪಾಯವಿದೆ. ನಾನು ಆ ದುರಾತ್ಮನ ಕುಹಕವನ್ನು ಬಯಲಿಗಿಟ್ಟು, ಇನ್ನೆರಡು ತಾಸುಗಳಲ್ಲಿಯೇ ನೀವಿದ್ದಲ್ಲಿಗೆ ಬಂದು ಸೇರುವೆನು. ನಿನ್ನೊಂದಿಗೆ

ನಮ್ಮ ಗುಮಾಸ್ತನೂ ಒಬ್ಬ ಆಳೂ ಬರುವನು. ಇಲ್ಲಿಗೆ ಎಂಟು ಮೈಲು ದೂರವಿರುವ ನಮ್ಮ ವಿರಾಮವನದ ಚಿಕ್ಕ ಮನೆಯಲ್ಲಿ ಸ್ವಲ್ಪ ಹೊತ್ತು ಅಡಗಿರಿ'' ಎಂದನು. ಚುಟಿ ಎರಡು ಮಾಡದೆ ನನ್ನ ತಾಯಿ ದಾದಿಯನ್ನು ಕರೆದುಕೊಂಡು ಹೊರಟಳು. ಕಲ್ಲುಮುಳ್ಳೆನ್ನದೆ ನಡೆದು ರಾತ್ರಿಯಲ್ಲಿಯೆ—ಚಿಕ್ಕದೊಂದು ಕಂದೀಲಿನ ಬೆಳಕಿನ ಸಹಾಯ ದಿಂದ—ವಿರಾಮವನದ ಮನೆಯನ್ನು ಸೇರಿದೆವು. ಅದು ನಮ್ಮ ತಂದೆ ತನ್ನ ತಾರುಣ್ಯದಲ್ಲಿ ಸಮೀಪದ ಕಾಡಿನಲ್ಲಿ ಬೇಟೆಯಾಡುತಿದ್ದಾಗ, ವಿಶ್ರಮಿಸುತಿದ್ದ ಮನೆ. ನಮಗೆ ದಾರಿ ತೋರಿಸಲು ಬಂದ ಗುಮಾಸ್ತನು ನಮ್ಮನ್ನು ಅಲ್ಲಿಯೆ ಭದ್ರವಾಗಿರ ಹೇಳಿ ಹೊರಟುಹೋದನು. ನಾನೂ ನಿದ್ದೆ ಹೋದೆನು. ಆದರೆ ನನ್ನ ತಾಯಿಯೂ ದಾದಿಯೂ ಮಾತ್ರ ನಿದ್ದೆ ಹೋಗಲಿಲ್ಲ. ಅವರಿಬ್ಬರೂ ಏನನ್ನೊ ಪಿಸುಗುಟ್ಟುತ್ತಾ ಇದ್ದು ದಾದಿಯು ನನ್ನ ಬೆನ್ನು ತಟ್ಟುತ್ತಾ ಇದ್ದಳು. ಮರುದಿನ ರಾತ್ರಿಯ ವರೆಗೆ ತಂದೆಯವರ ಸಮಾಚಾರವೇ ಇಲ್ಲ. ಒಂಭತ್ತು ಘಂಟೆಯ ಸುಮಾರಿಗೆ ಹೊರಬಾಗಿಲನ್ನು ಯಾರೋ ತಟ್ಟಿದಂತಾಯಿತು. ನನ್ನ ತಂದೆಯೋ ಬಂದರೆಂದು ನೆನಸಿ ದಾದಿಯು ಹೋಗಿ ಬಾಗಿಲನ್ನು ತೆರೆದಳು. ಬಂದವನು ನನ್ನ ತಂದೆಯಲ್ಲ. ತಂದೆಯ ಗುಮಾಸ್ತನು; ಹಿಂದಿನ ರಾತ್ರೆ ನಮ್ಮೊಡನೆ ಬಂದವನು. ಅವನನ್ನು ಕಾಣುವ ವರೆಗೆ ನನ್ನ ತಾಯಿ ನನ್ನ ತಂದೆಯ ಆಗಮನವನ್ನೆ ಹಾರೈಸಿಕೊಂಡಿದ್ದು ತಿಂಡಿಯೇನೂ ತಕ್ಕೊಂಡಿರಲಿಲ್ಲ. (ಭಾಗೀರಥಿಯ) ತೀರ್ಥವನ್ನು ಒಂದು ಚಮ್ಚ ಮಾತ್ರ ಬಾಯಿಗೆ ಹಾಕಿಕೊಂಡಿದ್ದಳು. ಅವನನ್ನು ಕಂಡೊಡನೆ ನಮ್ಮ ತಾಯಿ ತವಕದಿಂದ "ಮನೆಯ ಕಡೆ ಸಮಾಚಾರ ವೇನು? ಯಜಮಾನರು ಬರಲಿಲ್ಲವೇಕೆ?'' ಎಂದಳು. ಗುಮಾಸ್ತನು ತನ್ನ ಬೆವರಿದ ಮುಖವನ್ನು ಹೊದ್ದುಕೊಂಡ ಉತ್ತರೀಯದಿಂದ ಒರಸುತ್ತಾ 'ದರೋಡೆ, ಬೆಂಕಿ—ಯಜಮಾನರು—' ಎಂದು ಅಸ್ಪಷ್ಟ ಸ್ವರದಿಂದ ಏನನ್ನೋ ನುಡಿದನು. ನಮ್ಮ ತಾಯಿ ಅದನ್ನು ಕೇಳಿ ಕಳ ವಳದಿಂದ ಚಿಟ್ಟನೆ ಚೀರುತ್ತ ಧೊಪ್ಪನೆ ನೆಲದ ಮೇಲೆ ಬಿದ್ದು ಬಿಟ್ಟಳು. ಬಿದ್ದವಳು ಮತ್ತೆ ಏಳಲಿಲ್ಲ. ಅವಳ ಪ್ರಾಣವು ನಮ್ಮ ತಂದೆಯವರ ಪ್ರಾಣದೊಂದಿಗೆ—''

ಇಲ್ಲಿ ಅಯೇಷೆ ಸ್ವಲ್ಪ ತಡೆದಳು. ಒಮ್ಮೆ ಮಧುರಗಾನವು ಹೊರಟ ಕಂಠವು ಸ್ವಲ್ಪ ಬೀಗಿಕೊಂಡಿರುವುದರಿಂದಲೂ ಕಣ್ಣುಗಳು ಕೊಂಚ ಒದ್ದೆಯಾದುದನ್ನು ತೋರಿಸಬಾರದೆಂಬ ತವಕದಿಂದಲೂ ಅಯೇಷೆ "ಫಿಲ್ಬರಿನ" ಬಳಿಗೆ ಹೋಗಿ ಇನ್ನೊಂದು ಗುಟುಕು ನೀರನ್ನು ಕುಡಿದಳು, ಮತ್ತೆ ಕಥೆಯನ್ನು ಪ್ರಾರಂಭಿಸಿದಳು:—

"ಈ ದುರವಸ್ಥೆಯನ್ನು ಕಂಡು ನಮ್ಮ ದಾದಿಯು ನನ್ನನ್ನು ತಬ್ಬಿ ಕೊಂಡು ಮೊರೆಯಿಟ್ಟಳು. ಆಗ ಆ ಮನುಷ್ಯನು "ಎಲೆ! ಇನ್ನು ಅತ್ತು ಪ್ರಯೋಜನವಿಲ್ಲ. ಆದುದು ಆಗಿ ಹೋಯಿತು. ಮುಂದಿನ ವ್ಯವಸ್ಥೆ ಇನ್ನು ನಡೆಯ ಬೇಕಾಗಿದೆ. ಈಗ ಈ ಮಗುವನ್ನು ಎತ್ತಿ ಕೊಂಡು ನಮ್ಮಲ್ಲಿಗೆ ನನ್ನೊಂದಿಗೆ ಬಾ" ಎಂದನು. ಆಗ ಆ ದಾಸಿಯು "ಛಿ! ಮುಟ್ಠಾಳ! ಸ್ವಾಮಿದ್ರೋಹಿ! ನಿನ್ನ ಮೋರೆಯನ್ನು ನೋಡಿದರೆ ನರಕವೇ ಪ್ರಾಪ್ತಿ, ತೊಲಗತ್ತ!" ಎಂದಳು. ಅವಳ ನಿಷ್ಠುರ ವಾಕ್ಯಗಳ ಕಾರಣವೇನೆಂದು ಆಗ ನನಗೆ ಗೊತ್ತಾಗಲಿಲ್ಲ. ಅಷ್ಟರಲ್ಲಿ ಅವನು "ನೀನು ಬಾರದಿದ್ದರೆ ಬಿಡು. ನಮ್ಮ ಧನಿಯ ಮಗುವನ್ನು ನಾನೇ ಎತ್ತಿ ಕೊಂಡು ಹೋಗುವೆನಂತೆ; ಬಾರಮ್ಮಾ ಇತ್ತ!" ಎಂದು ನನ್ನನ್ನು ಎತ್ತಲು ಕೈಚಾಚಿದನು. ಅಷ್ಟರಲ್ಲಿ ಆ ದಾಸಿಯು ಅಲ್ಲೆ ಸಮೀಪದಲ್ಲಿ ಬಿದ್ದಿರುವ ಹಳೆ ತುಪಾಕಿಯ ನಳಿಗೆಯೊಂದನ್ನು ತೆಗೆದು ಬಲವಾಗಿ ಆತನ ತಲೆಗೆ ಎಸೆದು ಬಿಟ್ಟಳು. ಮಂಡೆಯೊಡೆದ ಶಬ್ದದಂತೆ ಕೇಳಿಸಿತು. ಆ ಮನುಷ್ಯನು ತನ್ನ ರಕ್ತಪ್ರವಾಹದಲ್ಲಿ ಬಿದ್ದುಬಿಟ್ಟನು. ಆಗ ಅವನ ಮೋರೆಯ ಮೇಲೆ ಉಗುಳಿ—ದಾಸಿಯು ನನ್ನ ಪೋಷಾಕುಗಳನ್ನು ಒಂದು ಮೂಟೆ ಕಟ್ಟಿ, ನನ್ನನ್ನು ಎತ್ತಿಕೊಂಡು ಆ ಕತ್ತಲೆಯಲ್ಲಿಯೇ ಎಲ್ಲಿಗೊ ನಡೆದು ಬಿಟ್ಟಳು."

ಅಯೇಷೆ ಇನ್ನೊಮ್ಮೆ ಕುಸು ನೀರು ಕುಡಿದಳು. ರಘುನಾಥ ಪಂತನ ಕಣ್ಣುಗಳಲ್ಲಿ ನೀರಿನ ಪಸೆಯು ಹೊರಟಿತು. ಆರಾಮ ಕುರ್ಚಿಯ ಮೇಲೆ ಬಿದ್ದುಕೊಂಡ ಜಂಗಬಹದ್ದೂರನು ಕಣ್ಣುಮುಚ್ಚಿ ಕೊಂಡು ತುಟಿಗಳನ್ನು ಬಿಗಿಯಾಗಿ ಅಮುಕಿ ಹಿಡಿದು ನಿದ್ದೆಹೋಗು ವಂತೆ ನಟಿಸಿದ್ದನು. ಅಯೇಷೆ ಪುನಃ ಆರಂಭಿಸಿದಳು:—

"ನಮ್ಮ ದಾಸಿ ನನ್ನನ್ನು ಎತ್ತಿಕೊಂಡು ಅಲ್ಲಿಗೆ ಹತ್ತು ಮೈಲು ದೂರವಿರುವ ತನ್ನ ಊರಮನೆಗೆ ನಡೆದಳು. ಅವಳಿಗೆ ಈಗ ಒಬ್ಬಳು ತಾಯಿ ಮಾತ್ರ ಇದ್ದಳು. ದಾದಿಯ ಅಕ್ಕನೊಬ್ಬಳು ಕೆಲವು ಕಾಲದ ಹಿಂದೆಯೇ ತೀರಿಹೋಗಿದ್ದಳಂತೆ. ನಾನು ಆ ಅಕ್ಕನ ಮಗಳೆಂದು ಈ ದಾಸಿ ತನ್ನ ತಾಯಿಗೆ ಸಮಾಧಾನ ಪಡಿಸಿ ನನ್ನನ್ನು ಅಲ್ಲಿಯೇ ಸಾಕಿದಳು. ನನಗೆ ಅಯೇಷೆಯೆಂದು ಹೆಸರಿಟ್ಟವಳೂ ಅವಳೇ. ಅಲ್ಲಿ ಪಟ್ಟೆಹುಳ ಗಳನ್ನು ಸಾಕಿ ನೂಲನ್ನು ಸಿದ್ಧಮಾಡುವ ಉದ್ಯೋಗವು ಅವಳಿಗಿತ್ತು. ಅದರಿಂದಲೆ ನಮ್ಮ ಜೀವನವು ಸಾಗುತ್ತಿತ್ತು. ಹಾಗೆಯೇ ಸುಮಾರು 12 ವರ್ಷಗಳು ಕಳೆದುವು. ಒಂದು ದಿನ ನನ್ನ ದಾಸಿಯನ್ನು ಕುರಿತು "ಚಿಚಾನಿ! (ಚಿಕ್ಕತಾಯಿ) ನೀನು ಆ ಗುಮಾಸ್ತನಿಗೆ ಬೈದು ಹೊಡೆದು ದೇಕೆ? ಅವನು ಸತ್ತು ಹೋದನೇನೊ?" ಎಂದೆನು. ಅದಕ್ಕವಳು "ಆ ಪಿಶಾಚಿಯು ಸತ್ತುಹೋಗಿಲ್ಲವಂತೆ. ಅವನಿಗೆ ಯಮಾಲಯ ದಲ್ಲಿಯೂ ಸ್ಥಳ ದೊರಕದಿರಬಹುದು" ಎಂದು ಕ್ರೂರ ದೃಷ್ಟಿಯಿಂದ ಹೇಳಿದಳು. ಅವಳು ಯಾವಾಗಲೂ ನನ್ನೊಡನೆ ಬಿರುನುಡಿಗಳನ್ನು ಆಡಿದವಳಲ್ಲ. ಅವಳ ಅಂದಿನ ಕಠಿನೋಕ್ತಿಗಳನ್ನು ಕೇಳಿದೊಡನೆ ನಾನು ಬೆರಗಾದೆನು. ಅವಳ ವರ್ತನವು ನನಗೆ ಮೆಚ್ಚುಗೆಯಾಗಲಿಲ್ಲವೆಂದು ಅವಳು ತಿಳಿದಳು. ಒಡನೆಯೇ ನನ್ನನ್ನು ತಬ್ಬಿಹಿಡಿದು "ಮಗೂ ಅಯೇಷಾ! ಆ ಸೈತಾನನೆ ನಿನ್ನ—ನಮ್ಮ ಕಷ್ಟಸಂಕಷ್ಟಗಳಿಗೆ ಕಾರಣನು. ನಮ್ಮ ಧನಿಯ ಕೊಲೆ, ಮನೆಗೆ ಬೆಂಕಿ, ದರೋಡೆ ಈ ಎಲ್ಲ ಅಕೃತ್ಯ ಗಳು ಅವನ ಫಿತೂರಿಯಿಂದಲೇ ನಡೆದುವು. ಆ ಕಥೆಯನ್ನು ಇನ್ನೂ ಮರೆತು ಬಿಡುವುದೇ ಒಳ್ಳೇದು. ಅದೆಲ್ಲ ದೈವೇಚ್ಛೆಯೆನ್ನೋಣ. ಆದರೂ ಆ ಮುಟ್ಠಾಳನ ಪ್ರಸ್ತಾಪವೆತ್ತಿದರೆ ನನಗೆ ಮೈ ಜುಮ್ಮೆನ್ನುತ್ತದೆ. ಆದುದರಿಂದ ಇನ್ನವನ ಮಾತೆತ್ತ ಬೇಡಮ್ಮಾ!" ಎಂದು ನನ್ನ ಗಲ್ಲವನ್ನು ಚುಂಬಿಸಿದಳು. ಅಂದಿನಿಂದ ಆ ಪ್ರಸ್ತಾಪವನ್ನು ನಾನು ಎತ್ತಲೇ ಇಲ್ಲ. ಆದರೂ ಆ ಹಳೇ ಚಿತ್ರಗಳೆಲ್ಲ ಈಗಲೂ ನನ್ನ ಹೃದಯದಲ್ಲಿ ಶಿಲೆಯ ಮೇಲೆ ಕೊರೆದಂತೆ ಅಚ್ಚಳಿಯದೆ ನಿಂತಿವೆ."

"ಅನಂತರ ಕೆಲವು ದಿನಗಳಲ್ಲಿ ನಮ್ಮ ದಾಸಿಗೆ ಜ್ವರವು ಆರಂಭಿ ಸಿತು. ಆಗ ಅವಳು ತನ್ನ ಜೀವದಾಸೆಯನ್ನು ತೊರೆದಳು. ಆದರೆ ನನ್ನ

ವಿಷಯುವಾಗಿಯೆ ಅವಳಿಗೆ ಚಿಂತೆ ಹಿಡಿದಿತ್ತೆಂದು ಅವಳು ಜ್ವರದಿಂದ ನರಳುವಾಗ ಆಡುತ್ತಿದ್ದ ಬಿಡಿ ಮಾತುಗಳಿಂದ ನನಗೆ ಗೊತ್ತಾಯಿತು. ಜ್ವರದಿಂದ ಅವಳು ಬಹಳ ಕೃಶಳಾಗಿದ್ದಳು. ಅಲ್ಲಿ ಮೌಲ್ವಿ ಮಲಿಕ ಜಾಫರನೆಂಬ ಒಬ್ಬ ಹಕೀಮನು ಅವಳಿಗೆ ಚಿಕಿತ್ಸೆ ಮಾಡುತ್ತಿದ್ದನು. ರೋಗವು ದಿನೇ ದಿನೇ ಪ್ರಬಲವಾಗುತ್ತಿದ್ದುದರಿಂದ ಅವಳು ಆ ಹಕೀಮ ನೊಂದಿಗೆ ನನ್ನ ನಿಜಸ್ಥಿತಿಯುನ್ನು ಗುಟ್ಟಿನಿಂದ ಹೇಳಿ ಕಣ್ಣೀರು ಸುರಿಸಿದಳು. ಆಗ ಹಕೀಮನು ಅವಳ ಒಪ್ಪಿಗೆಯುನ್ನು ಪಡೆದು ತನ್ನಾಪ್ತರಾದ ಈ ಮಹಾಶಯರ ನೆಳಲನ್ನು ನಾನು ಸೇರುವಂತೆ ಏರ್ಪಡಿಸಿದನು. ಕೆಲವು ದಿನಗಳಲ್ಲಿ ದಾಸಿಯ ಪ್ರಾಣವು ಸ್ವಸ್ಥಚಿತ್ತ ವಾಗಿ ಹಾರಿಹೋಯಿತು. ಹಕೀಮನು ದಾಸಿಯ ಮುದಿ ತಾಯಿಗೆ ಜೀವನಕ್ಕೆ ಬೇಕಾದ ಹಣವನ್ನು ಕೊಡುವಂತೆ ಏರ್ಪಡಿಸಿ, ನನ್ನನ್ನು ಇವರ ವಶಕ್ಕೆ ಒಪ್ಪಿಸಿದನು. ಅದಾಗಿ ಈಗ ಎರಡು ವರ್ಷಗಳು ಕಳೆದುವು. ಈಗ ಇವರು ನನ್ನನ್ನು ಸಾಕುತಂದೆಯುಂತೆ—" ಎಂದು ಪ್ರೇಮ ಪುರಸ್ಸರವಾಗಿ ಜಂಗಬಹದ್ದೂರರ ಕಡೆಗೆ ನೋಡುತ್ತ ಗದ್ಗದ ಕಂಠದಿಂದ ತನ್ನ ಕಥೆಯುನ್ನು ಮುಗಿಸಿ ಇನ್ನೊಮ್ಮೆ ನೀರು ಕುಡಿಯುವ ನೆವನದಿಂದ ತನ್ನ ಕೋಣೆಗೆ ಹೊರಟು ಹೋದಳು.

ರಘುನಾಥನ ಕಣ್ಣುಗಳು ನೀರಿನಿಂದ ತೊಯ್ದಿದ್ದುವು. ಎದೆ ಗಾರನೆನಿಸಿಕೊಂಡ ಜಂಗಬಹದ್ದೂರನು ಕೂಡ ಅವಾಕ್ಕಾಗಿ ಕಣ್ಣು ಮುಚ್ಚಿಕೊಂಡೇ ಕುಳಿತಿದ್ದನು. ಅವನ ಎದೆಯು ಬೇಗಬೇಗನೆ ಶ್ವಾಸೋಚ್ಛ್ವಾಸಗಳನ್ನು ತೆಗೆಯುತ್ತಿದ್ದುದರಿಂದ ಮಾತ್ರವೇ ಅವನ ಮನಸ್ಸಿನ ಕಳವಳವು ವ್ಯಕ್ತವಾಗುತ್ತಿತ್ತು. ಸ್ವಲ್ಪ ಹೊತ್ತಿನ ಅನಂತರ ಅವನೂ ಕಣ್ದೆರೆದನು. ಅಷ್ಟರೊಳಗೆ ಆ ಕೋಣೆಯ ಮಧ್ಯದಲ್ಲಿ ವಿದ್ಯುತ್ಶಕ್ತಿಯ ದೀಪವು ಜಗ್ಗನೆ ಉರಿಯ ತೊಡಗಿತು. ರಘುನಾಥ ಪಂತನು ಎದ್ದನು. ಜಂಗಬಹದ್ದೂರನೂ ಕಣ್ಣುಗಳನ್ನು ತೆರೆದನು. ರಾತ್ರಿಯಾಯಿತೆಂದು ರಘುನಾಥಪಂತನು ಏಳುವಾಗ "ಜಂಗ ಬಹದ್ದೂರರೇ! ಟೀ ಪಾರ್ಟಿಗೆ ಅಯೋಷೆಯೂ ಬರಲಾರಳೇ? ಅವಳ ಪರಿಚಯದಿಂದ ನಮ್ಮ ತಾಯಿಗೆ ತುಂಬಾ ಆನಂದವಾದೀತು."

**ಜಂಗ:**--ಇಲ್ಲ! ಇಲ್ಲ! ಅವಳು ತರುಣಿಯಾಗಿದ್ದರೂ ಹಲವು ವಿಷಯಗಳಲ್ಲಿ ಏನೇನೂ ಅರಿಯದ ಕೂಸಾಗಿದ್ದಾಳೆ. ಅವಳಿಗೆ ಅಂಥ ಸಾಮಾಜಿಕ ವಿನೋದಗಳು ಒಗ್ಗುವುದಿಲ್ಲ. ಆ ನಿಷ್ಕಳಂಕ ಮನಸ್ಸಿಗೆ ಲೋಕದ ಮಾಯಾತಂತ್ರಗಳ ಅನುಲೇಪನವಾಗಬಾರದೆಂದೇ ನನ್ನ ಆಸೆ.

**ರಘು:**—ತಮ್ಮ ಇಚ್ಛೆಯಿದ್ದಂತಾಗಲಿ! ಆದರೆ ತಾವು ಮಾತ್ರ ಬರಲು ಮರೆಯ ಬೇಡಿರಿ.

ಹೀಗೆ ಹೇಳಿ ರಘುನಾಥ ಪಂತನು ಜಂಗಬಹದ್ದೂರನಿಗೆ ಹಸ್ತ ಲಾಘವವನ್ನು ಕೊಟ್ಟು ವಿಕ್ಟೋರಿಯ ಹತ್ತಿ ತನ್ನ ಮಂದಿರಕ್ಕೆ ತೆರಳಿದನು.

---

## ಒಂಬತ್ತನೆಯ ಅಧ್ಯಾಯ

## ಪೋಪಟಲಾಲ, ವಿಮದಲಾಲ

ಜಂಗಬಹದ್ದೂರನು ರಘುನಾಥನನ್ನು ಕಳುಹಿಸಿಕೊಟ್ಟು ಮರಳಿ ತನ್ನ ಕೋಣೆಯಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತುಕೊಂಡನು. ಗಫೂರನು ಅವನ ಕೈಸನ್ನೆಯಿಂದಲೇ ಹುಕ್ಕೆ ತಯಾರಾಗಬೇಕೆಂದು ತಿಳಿದು, ಹುಕ್ಕೆಗೆ ಹೊಸ ಗುಡಾಕೆಯನ್ನು ಹಚ್ಚಿ, ಬೆಂಕಿಯ ಕೆಂಡಗಳನ್ನು ಚಿಲುಮೆಯಲ್ಲಿಟ್ಟನು. ಜಂಗಬಹದ್ದೂರನು ಹುಕ್ಕೆಯನ್ನು ಸೇದುತ್ತಾ ಏನನ್ನೊ ಯೋಚಿಸುತ್ತ ಕುಳಿತಿದ್ದನು. ಅಷ್ಟರಲ್ಲಿ ಗಫೂರನು ಪುನಃ ಬಂದು ಖಾತ್ಯಾವಾಡದಿಂದ ಪೋಪಟಲಾಲನು ಬಂದಿರುವನೆಂದೂ ಆತನನ್ನು ಮಗ್ಗಲಕೋಣೆಯಲ್ಲಿ ಇರಿಸಿದ್ದೇನೆಂದೂ ತಿಳಿಸಿದನು. ಜಂಗಬಹದ್ದೂರನ ಅಪ್ಪಣೆ ಪಡೆದು ಗಫೂರನು ಪೋಪಟಲಾಲನನ್ನು ಕೋಣೆಯೊಳಕ್ಕೆ ಕರೆತಂದು ಬಾಗಿಲನ್ನು ಮುಚ್ಚಿ ಹೊರಗೆ ಕಾದಿದ್ದನು. ಜಂಗಬಹದ್ದೂರನು ಅವನನ್ನು ನಖಶಿಖಾಂತವಾಗಿ ಒಮ್ಮೆಗೆ ದೃಷ್ಟಿಸಿ:—

"ನಿಮ್ಮನ್ನು ಪರಶುರಾಮ ದೀಕ್ಷಿತರು ಇಲ್ಲಿಗೆ ಕಳುಹಿಸಿದರೆ?"

**ಪೋಪಟಲಾಲ:**—(ರಾಮ ರಾಮ ಮಾಡಿ)—ಹೌದು.

**ಜಂಗ:**—ಅವರು ನಿಮಗೆ ಏನು ಹೇಳಿದರು?

**ಪೋಪಟಲಾಲ**:—'ತಾವು ಅನಾಥಬಂಧುಗಳು. ತಮ್ಮಂಥವರಿಂದ ನನ್ನ ಮನೋವ್ಯಥೆಯೆಲ್ಲ ದೂರವಾಗಬಹುದು' ಎಂದು.

**ಜಂಗ**:—ನಿಮ್ಮ ಪೂರ್ವಕಥೆಯನ್ನು ಅವರು ನನಗೆ ಬರೆದು ತಿಳಿಸಿರುವರು.

'ಧಾರಾಳವಾದ ಹಿರಿಯರ ಆಸ್ತಿಯನ್ನು ದುಂದುಗಾರಿಕೆಯಲ್ಲಿ ವೆಚ್ಚಮಾಡಿ ಎಲ್ಲವನ್ನೂ ಕಳೆದುಕೊಂಡಿರಿ. ಅದೇ ದುಃಖದಿಂದ ನಿಮ್ಮ ಪತ್ನಿ ರೋಗಪೀಡಿತಳಾಗಿ ಇಹವನ್ನು ತೊರೆದಳು' ಎಂದು ಅವರು ಬರೆದಿರುವರು.

ಪೋಪಟಲಾಲನು ಸ್ವಲ್ಪ ನಾಚಿ ತಲೆ ತಗ್ಗಿಸಿ ಬಲಗೈಯಿಂದ ತುರಿಸಿಕೊಳ್ಳುತ್ತ ವಿನಯದಿಂದ "ಅದೆಲ್ಲವೂ ನಿಜ. ಈಗ ಒಮ್ಮೆಗೆ ಜೀವನಕ್ಕೆ ಏನಾದರೂ ದಾರಿ ಸಿಕ್ಕಿದರೆ"—

**ಜಂಗ**:—ಯಾವ ವೃತ್ತಿಯನ್ನು ಕೈಕೊಳ್ಳಬಲ್ಲಿರಿ?

**ಪೋಪಟ**:—ಹಿರಿಯರ ಆಸ್ತಿ ಸಾಕಷ್ಟು ಇದ್ದುದರಿಂದ ಏನೊಂದೂ ವೃತ್ತಿಯನ್ನು ಕಲಿಯಲಿಲ್ಲ. ತಾರುಣ್ಯದ ಗಡಿ ದಾಟಿದುದರಿಂದ ಈಗೇನೂ ಮಾಡಲು ಬಾರದು. ಅದೇ ನನ್ನ ಸಂಕಷ್ಟ.

**ಜಂಗ**:—"ಅಂದರೆ ಹಿರಿಯರ ಆಸ್ತಿಯಿದ್ದರೆ ಸದ್ವೃತ್ತಿ ಸದ್ವ್ಯಾಪಾರಗಳಿಗೆ ಮನಸ್ಸು ಒಗ್ಗುವುದಿಲ್ಲ ಎನ್ನುವಿರಾ?"

ಪೋಪಟಲಾಲನು ಮಾತೆತ್ತದೆ ತಲೆ ತಗ್ಗಿಸಿ ತುಸುಹೊತ್ತು ನಿಂತು,

**ಪೋಪ**:—ನನಗೆ—ನಡುಪ್ರಾಯ ದಾಟಿದ ನನಗೆ—ಜೀವನವು ಸುಖವಾಗಿ ಸಾಗಬೇಕೆಂದಾದರೆ ತಾವೇ ಗತಿ ಎಂದು ದೀಕ್ಷಿತರು ನನಗೆ ಹೇಳಿದರು.

**ಜಂಗ**:—ಅಂದರೆ ವೈಬಾಗದ ವೈಗಳ್ಳರಿಗೆ ನಾನೊಬ್ಬ ಗುರು; ನನ್ನ ಮನೆಯೆಂಬುದು ಒಂದು ಮಠ, ಹೀಗೇನು, ದೀಕ್ಷಿತರ ಮತ?

**ಪೋಪ**:—'ಗತಿವಿಹೀನರ ಗತಿ ತಾವೇ' ಎಂದು ಅವರು ಅಂದರು.

**ಜಂಗ**:—ಅವರು ಇನ್ನೊಬ್ಬ ಯುವಕನನ್ನೂ ಇಲ್ಲಿಗೆ ಕಳುಹಿಸಿರುವರು. ಅವನು ನಿಮ್ಮ ಮಗನಂತೆ! ತನ್ನ ತಂದೆ ಯಾರು ಎಂದು

ತಿಳಿಯದೆ ಅನಾಥನಾಗಿ ಬೀದಿಬೀದಿಗಳಲ್ಲಿ ತಿರುಕುಳಿಯಾಗಿ ಅಲೆಯು ತಿದ್ದನಂತೆ!

**ಪೋಪ:**—ನನ್ನ ದುಂದುಗಾರಿಕೆಯ ದಿನಗಳಲ್ಲಿ ನಾನು ಭ್ರಮರ ದಂತೆ ಉನ್ಮತ್ತನಾಗಿ ಎಷ್ಟೋ ಕಡೆಗಳಲ್ಲಿ ವಿಹರಿಸಿದ್ದೇನೋ ನಿಜ. ಆದರೆ ನನಗೊಬ್ಬ ಮಗನಿದ್ದಾನೆಂದು ನಾನು ಇದು ವರೆಗೂ ಕೇಳಿ ಅರಿಯೆ.

**ಜಂಗ:**—ಲೋಕದ ಸ್ಥಿತಿಯೇ ಹೀಗೆ. ಪರಶುರಾಮ ದೀಕ್ಷಿತರು ಎಲ್ಲಿಯೊ ವೈದ್ಯ ಚಿಕಿತ್ಸೆಯನ್ನು ಮಾಡುತ್ತಿರುವ ಕಾಲದಲ್ಲಿ ಈ ಸಮಾಚಾರವು ಅವರ ಕಿವಿಗೆ ಬಿತ್ತಂತೆ. ಆ ಹುಡುಗನು ತುಂಟ ತಿರುಕುಳಿಯಾಗಿ ಬೀದಿಬೀದಿಗಳಲ್ಲಿ ಅಲೆಯುವುದನ್ನು ನೋಡಿ, ದೀಕ್ಷಿತರು ಆ ಪೋಲಿ ಹುಡುಗನನ್ನು ಇಲ್ಲಿಗೆ ಕಳುಹಿಸಿರುವರು. ಅವನನ್ನು ನಿಮ್ಮ ಮಗನೆಂದು ನೀವು ಒಪ್ಪಿಕೊಂಡು ನಡೆಯಿಸುವುದಾದರೆ ನಿಮಗೆ ತಿಂಗಳಿಗೆ ಒಂದು ಸಾವಿರ ರೂಪಾಯಿಗೆ ಕಡಿಮೆಯಾಗದಂತೆ ನಿಮ್ಮ ಸ್ವಂತ ಖರ್ಚಿಗೆ ಕೊಡುವೆನು. ಹುಡುಗನಿಗೆ ಅವನ ವೆಚ್ಚಕ್ಕೆ ಬೇಕಾದ ಹಣವನ್ನು ನಿಮ್ಮ ಇಬ್ಬರ ಹೆಸರಿನಲ್ಲಿ ಇಲ್ಲಿಯದೊಂದು ಬೇಂಕಿನಲ್ಲಿ ಠೇವಣಾತಿಯಾಗಿ ಇರಿಸುವೆನು. ನೀವು ಇದಕ್ಕೆ ಒಪ್ಪಿದರೆ ನಿಮ್ಮ ಕುಲಗೌರವಕ್ಕೆ ತಕ್ಕಂತೆ ನೀವಿಬ್ಬರೂ ಜೀವಿಸಬಹುದು. ನಿಮ್ಮ ಮನೋಗತವೇನು?

ಪೋಪಟಲಾಲನು ವಿಚಿತ್ರ ವಿಚಾರಕ್ಕೆ ಒಳಬಿದ್ದನು. ಅವನು ದುಂದುಗಾರಿಕೆಯಿಂದ ತನ್ನ ಮನೆಮಾರನ್ನು ಕಳಕೊಂಡರೂ, ಇನ್ನೂ ದೊಡ್ಡ ಕುಲದವನು ಎಂಬ ಅಭಿಮಾನವಿದ್ದು ಏನೂ ವೃತ್ತಿಯನ್ನು ಮಾಡಲಾರದೆ ಕಷ್ಟಪಡುತಿದ್ದನು. ಆದರೆ ಯಾರೆದುರಿಗೂ ತನ್ನ ಕುಲ ಗೌರವವನ್ನು ಹೊಗಳುವುದು ಇತರರನ್ನು ತೆಗಳುವುದು ಇದೇ ಅವನ ವೃತ್ತಿಯಾಗಿತ್ತು. ಎಲ್ಲಿ ನಾಲ್ಕು ಮಂದಿ ಕ್ಲಬ್ಬಿನಲ್ಲಿ ಕೂಡಿದರೂ ಅಲ್ಲಿ ಅವನು ಹೋಗದೆ ಇರನು. ಸಿಕ್ಕಿದವರೊಡನೆ ತನ್ನ ತಿಂದಿ ಪುರಸ್ಕಾರಕ್ಕೆ ಸಾಲವಾಗಿ ಬೇಡುತ್ತಿರುವ ಪರಪುಷ್ಪನಾದರೂ ತನ್ನ ಬಿಂಕದ ಮಾತುಗಳ ಕಂಥೆಯನ್ನು ಎಲ್ಲಿಯೂ ಬಿಚ್ಚದೆ ಇರನು. ಅವನಿಗೆ ಸಾಲ ಕೊಡುವಾಗ ಅದು ಹಿಂದೆ ತಮಗೆ ಕೈಸೇರುವುದಲ್ಲವೆಂದು ಹಲವರಿಗೆ

ಗೊತ್ತಿತ್ತು. ಆದರೆ ಅವರು ಅವನ ಹಿರಿಯರ ಕುಲದ ಕಡೆಗೆ ದೃಷ್ಟಿ ಇಟ್ಟು, ಹಣದ ಚೀಲದ ಕಟ್ಟನ್ನು ಬಿಚ್ಚುತ್ತಿದ್ದರು. ಕೈಕಡವಾಗಿ ಪಡೆದ ಹಣವನ್ನೆಲ್ಲ ಇನ್ನೆಂಟು ದಿನಗಳಲ್ಲಿ ಹಿಂದೆ ತೆರುವೆನೆಂದು ಪೋಪಟಲಾಲನು ಎಷ್ಟೋ ಸಲ ಹೇಳುತ್ತಿದ್ದನು. 'ಅದು ಪೋಪಟನ (ಗಿಳಿಯ) ಮಾತು, ಬಾಯಿಪಾಠ ಕಲಿತುದನ್ನು ಉಚ್ಚರಿಸುತ್ತಾನೆ' ಎಂದು ಹಿಂದಿನಿಂದ ಎಲ್ಲರೂ ನಸುನಗುತ್ತಿದ್ದರು. ಈಗ ಪೋಪಟಲಾಲನು ತನ್ನ ಪಿತ್ರಾರ್ಜಿತ ಆಸ್ತಿಯನ್ನೆಲ್ಲ ಕಂಡುಮಾಡಿ ಇತರರ ಉಚ್ಛಿಷ್ಟಕ್ಕೂ ತನ್ನ ಸುಖಾಕಾಂಕ್ಷೆ ಯಿಂದ—ಮುಖ್ಯವಾಗಿ ಕಾಯಕಷ್ಟ ಮಾಡದೆ ಕೂತುಣ್ಣಬೇಕೆಂಬ ಅಭಿಲಾಷೆಯಿಂದ—ಕೈಚಾಚುವಂಥವನಿದ್ದನು. ತನ್ನ ಮಗನ ರೂಪ ವಾಗಿ ಕಂಡುಹಿಡಿದ ವ್ಯಕ್ತಿಯು ತನ್ನ ಮಗನೊ ಅಲ್ಲವೊ ಎಂಬ ಸಂದೇ ಹವು ಈ ಪೋಪಟಲಾಲನಿಗೆ ಇದ್ದಿತ್ತು. ತನ್ನ ಕೊರಳಿಗೆ ಒಂದು ಕುಂಟೆ ಯನ್ನು ಕಟ್ಟಿಕೊಳ್ಳುವುದು ಅಷ್ಟೊಂದು ಅನುಕೂಲವಾಗಿ ಆತನಿಗೆ ಕಾಣಲಿಲ್ಲ. ಆದರೆ ಜಂಗಬಹದ್ದೂರರಿಗೆ ಮನ ನೋಯಿಸಿದರೆ ತನಗೆ ಜೀವಾಂತ್ಯದ ವರೆಗೆ ಚಾಚುವ ಸುಖಜೀವನದ ದಾರಿಯನ್ನು ತಾನೇ ಮುಳ್ಳು ಕಂಟಿಗಳಿಂದ ಮುಚ್ಚಿದಂತಾಗುತ್ತದೆ, ಆದರೆ ತನ್ನ ಮಗನೆಂದು ಪರಿಚಯವಿಲ್ಲದವನೊಬ್ಬನನ್ನು ಕಟ್ಟಿಕೊಂಡು ಪೂನೆಯಲ್ಲಿಯೇ ಸಾರ್ವದಾ ವಾಸಮಾಡುವುದು ಹೇಗಾದೀತು ಎಂಬ ವಿಚಾರವೂ ಪೋಪಟಲಾಲನಿಗೆ ಬಂದಿತ್ತು. ಅದೂ ಅಲ್ಲದೆ ಈ ನೂತನ ವ್ಯಕ್ತಿಯು ತನ್ನ ಸ್ವೇಚ್ಛಾವಿಹಾರಕ್ಕೆ ಅಡ್ಡಿಯಾಗುವುದಿದ್ದರೆ ಏನುಮಾಡಲಿ ಎಂಬುದೂ ಅವನನ್ನು ಬಾಧಿಸುತ್ತಿತ್ತು. ಇದರಿಂದ ತುಸುಹೊತ್ತು ಅವನು ಜಂಗ ಬಹದ್ದೂರರಿಗೆ ಮರುತ್ತರ ಕೊಡದೆ ಸುಮ್ಮನಿದ್ದನು.

ಜಂಗಬಹದ್ದೂರರು ಇದನ್ನು ಕಂಡು:—ಏನು ಬಹಳ ವಿಚಾರ ದಲ್ಲಿ ಬಿದ್ದಂತೆ ಕಾಣುತ್ತದೆ? ನನ್ನ ಶರ್ತಗಳು ಕಠಿನವೇ? ನಿಮ್ಮ ಮಗ ನನ್ನು ನೀವು ಮನೆಗೆ ಕರೆದುಕೊಳ್ಳುವುದರಲ್ಲಿ ತಪ್ಪೇನು?

**ಪೋಪಟ**:—ಹಾಗಲ್ಲ. ನಾನು ಈ ಮಗನನ್ನು—ಇದುವರೆಗೆ ನೋಡದೆ ಇದ್ದವನನ್ನು—ಅವನ ಗುಣನಡತೆ ಗೊತ್ತಾಗದೆ ನನ್ನ ಬೆನ್ನಿಗೆ ಕಟ್ಟಿಕೊಂಡು ಇಲ್ಲೆ ಬಿದ್ದಿರುವುದು ಸಾಧ್ಯವಾದೀತೇ?

ಪೋಪಟಲಾಲನನ್ನು ಕಂಡು ತಾತ್ಸಾರಸೂಚಕವಾದ ನಸು ನಗೆಯು ಜಂಗಬಹದ್ದೂರನ ಮುಖದ ಮೇಲೆ ವ್ಯಾಪಿಸಿತು. ಕೂಡಲೇ ಮುಖವನ್ನು ಇನ್ನೊಂದು ಕಡೆ ತಿರುಗಿಸಿ—"ಪೋಪಟಲಾಲರೇ! ನಿಮ್ಮ ಕಾಲವು ಹೇಗೂ ಈಗ ಮಧ್ಯಾಹ್ನ 4 ಗಂಟೆಗೆ ಸಮಾಪಿಸಿತು. ಇನ್ನೂ ಉಳಿದುದು ಸೂರ್ಯಾಸ್ತಮಾನಕ್ಕೆ ಕೊಂಚವೇ ಹೊತ್ತು. ನೀವು ಎಲ್ಲಿಗೆ ಬೇಕಾದರೂ ಪರ್ಯಟನ ಮಾಡಬಹುದು. ಆದರೆ ನಿಮ್ಮ ಮಗನು ಮಾತ್ರ ಇಲ್ಲಿಯೆ ಇರಲಿ. ಆತನಿಗೆ ಯೋಗ್ಯ ಕುಟುಂಬಗಳ ಪರಿಚಯ ಮಾಡಿಸಿ ಅವುಗಳಲ್ಲೊಂದರಿಂದ ಒಂದು ಹೆಣ್ಣನ್ನು ವಿವಾಹಮಾಡಿಸಿದರೆ ನಿಮ್ಮ ಕುಲವು ಉತ್ತರೋತ್ತರವಾಗಿ ಉಳಿಯುವುದಿಲ್ಲವೇ?"

ಪೋಪಟಲಾಲನಿಗೆ ಈ ಹಂಚಿಕೆಯು ಸಮ್ಮತವಾಯಿತು. ಜಂಗಬಹದ್ದೂರರ ಹಾಗೂ ದೀಕ್ಷಿತರ ಉಪಕಾರಸ್ಮರಣೆ ಮಾಡಿದನು. ಅನಂತರ "ಪೋಪಟಲಾಲರೇ! ನೀವು ನಾಳೆ ಇಷ್ಟೇ ಹೊತ್ತಿಗೆ ಇಲ್ಲಿಗೆ ಬನ್ನಿರಿ. ಆಗ ನಿಮಗೆ ನಿಮ್ಮ ಮಗನ ಭೇಟಿಯಾಗುವುದು. ಈಗ ಈ ಹಣವನ್ನು ತಕ್ಕೊಳ್ಳಿರಿ. ನಿಮ್ಮ ಕುಲಕ್ಕೆ ತಕ್ಕ ಉಡುಪನ್ನು ಧರಿಸಿ ಇಲ್ಲಿಗೆ ಬನ್ನಿರಿ."

ಪೋಪಟಲಾಲನು ಇದಕ್ಕೊಪ್ಪಿ 'ರಾಮರಾಮ' ಮಾಡಿ, ಜಂಗಬಹದ್ದೂರನು ಇತ್ತ ಹಣದ ನೋಟುಗಳನ್ನು ಕಿಸೆಯೊಳಗೆ ತೂರಿಸಿ ಬೀದಿಗೆ ಇಳಿದನು. ಗಫೂರನು ಅವನೊಂದಿಗೆ ಬೀದಿಯ ಗೇಟಿನ ವರೆಗೆ ಹೋಗಿ ಗೇಟನ್ನು ಪುನಃ ಮುಚ್ಚಿ ಒಳಕ್ಕೆ ಬಂದನು. ಅನಂತರ ಜಂಗಬಹದ್ದೂರನು "ಗಫೂರ! ಆ ತುಂಟ ಪೋರನನ್ನು ಕರೆದು ತಂದಿದ್ದಿಯಾ? ಅವನನ್ನು ಹೆಡಮುರಿ ಕಟ್ಟಿ ತರಬೇಕಾಯಿತೆ?" ಎಂದು ಕೇಳಿದನು.

**ಗಫೂರ**:- ಇಲ್ಲ, ನನ್ನ ಕೈಯಲ್ಲಿರುವ ಚಾಟಿ, ಮತ್ತು ಕಿಸೆಯಲ್ಲಿದ್ದ ಪಿಸ್ತೂಲನ್ನು ನೋಡಿ ಆ ಪೋಕರಿಯು ಸುಮ್ಮನೆ ನನ್ನೊಂದಿಗೆ ಬಂದನು.

**ಜಂಗ**:— ಅವನು ಎಲ್ಲಿರುವನು?

**ಗಫೂರ**:— ಇನ್ನೊಂದು ಕೋಣೆಯಲ್ಲಿರುವನು. ಅಪ್ಪಣೆಯಾದರೆ ಆತನನ್ನು ಇಲ್ಲಿಗೆ ತರುವೆನು.

ಜಂಗಬಹದ್ದೂರನು ಆದೀತೆಂದು ತಲೆಯನ್ನು ಅಲ್ಲಾಡಿಸಿದನು. ಒಡನೆಯೆ ಗಫೂರನು ಬಂಗಲೆಯ ಒಂದು ಕೋಣೆಯಿಂದ ಆ ತುಂಟ ಹುಡುಗನನ್ನು ಕೈ ಹಿಡಿದು ಎಳೆದು ತಂದನು. ಕೈಯಲ್ಲಿರುವ ಚಾಟಿಯ ಮತ್ತು ಪಿಸ್ತೂಲಿನ ಕಡೆಗೆನೆ ತುಂಟನ ದೃಷ್ಟಿಯಿತ್ತು. ಅವನು ಕೈ ಕಟ್ಟಿ, ಜಂಗಬಹದ್ದೂರನ ಮುಂದೆ ನಿಂತನು. ಈ ವಿಚಿತ್ರ ವ್ಯಕ್ತಿಯನ್ನು ನೋಡಿ ಆರಾಮ ಕುರ್ಚಿಯಿಂದೆದ್ದ ಜಂಗಬಹದ್ದೂರನು ತುಟಿಗಳನ್ನು ತುಸು ಓರೆಮಾಡಿ ನಸುನಕ್ಕು, ಮೇಜಿನ ಕಡೆಗೆ ಸವಿಾಪಿಸಿದನು. ಮೇಜಿನ ಮೇಲೆ ದೊಡ್ಡದೊಂದು ಪಿಸ್ತೂಲು, ಗೋಡೆಯ ಕೊಕ್ಕೆಯ ಮೇಲೆ ಒಂದೆರಡು ಖಡ್ಗಗಳು, ಒಂದೆರಡು ಬಂದೂಕುಗಳು ಇದ್ದುವು. ಅನಂತರ ಆ ಹುಡುಗನನ್ನು ನಖಶಿಖಾಂತವಾಗಿ ಒಮ್ಮೆ ನೋಡಿದನು. ಹುಡುಗನ ಮೈಕಟ್ಟು ಬಿಗುಪಾಗಿತ್ತು. ಮೈಕೈಗಳಲ್ಲಿ ಕೊಳೆ ತುಂಬಿದ್ದು ಹರಕು ಅಂಗಿ ಮೊಳಕಾಲು ವರೆಗಿನ ಒಂದು ಇಜಾರನ್ನು ಧರಿಸಿ ಕೊಂಡಿದ್ದ ಈತನ ಮುಖದ ಮೇಲೆ ಮೋಡದೊಳಗಿನ ಚಂದ್ರನಂತೆ ಒಂದು ಬಗೆಯ ವಿಲಕ್ಷಣ ಕಾಂತಿಯಿತ್ತು. ಕಣ್ಣುಗಳಲ್ಲಿ ಒಂದು ಬಗೆಯ ಕ್ರೂರತನ ಮತ್ತು ಏನು ಮಾಡಲಿಕ್ಕೂ ಹೇಸದ ಧಾಂಡಿಗ ತನವು ಹೊರಸೂಸುತಿದ್ದರೂ ದೃಷ್ಟಿಯು ಒಂದೇ ಕಡೆ ನೆಲೆ ನಿಲ್ಲದೆ ಹಾವಿನಂತಹ ಮೋಹಕ ಶಕ್ತಿಯಿತ್ತು. ಎಣ್ಣೆಯ ತಟುಕನ್ನು ಕೆಲಕಾಲ ದಿಂದಲೂ ನೋಡದಿದ್ದು ಅವನ ಮುಂಗುರುಳು ತಲೆ ತುಂಬಾ ಪಸರಿಸಿ ಜಟೆಕಟ್ಟಿ ಇತ್ತು. ಜಂಗಬಹದ್ದೂರನ ದೀರ್ಘಾಕಾರವನ್ನು ನೋಡು ತಿದ್ದ ತರುಣನು ತನ್ನನ್ನು ಏತಕ್ಕೆ ಇಲ್ಲಿ ಕರೆಸಿದರೆಂದು ತುಸುಬೆರಗಾಗಿ ಒಮ್ಮೆ ಜಂಗಬಹದ್ದೂರನನ್ನೂ ಇನ್ನೊಮ್ಮೆ ಆ ಕೋಣೆಯಲ್ಲಿರುವ ಹಲವು ವಸ್ತುಗಳನ್ನೂ ನೋಡುತ್ತ ಇರುವಾಗ, ಆತನ ದೃಷ್ಟಿಯು ಅಲ್ಲಿರುವವರ ಕಣ್ಮರೆಯಾಗಿ ಏನನ್ನಾದರೂ ದೋಚಿಕೊಳ್ಳಬಹುದೋ ಎಂದು ನೋಡಿಕೊಳ್ಳುವಂತಿತ್ತು. ಜಂಗಬಹದ್ದೂರನು ಈತನನ್ನು ನೋಡಿ—"ಎಲಾ ಭಿಕಾಜಿ ಎಂದರೆ ನೀನೆ ಏನು?" ಎಂದು ಕೇಳಿದನು.

**ಭಿಕಾಜಿ:**—"ಹೌದು ನಾನೇ!" ಎಂದು ತನ್ನ ಬಲಗೈಯಿಂದ ತನ್ನ ಎದೆಯನ್ನು ತಟ್ಟಿ ಹೇಳಿದನು.

**ಜಂಗ**:— ನಿನ್ನ ತಂದೆ ಯಾರು?

**ಭಿಕಾಜಿ**:— ಸರ್ವ ಜಗತ್ತಿನ ತಂದೆಯೇ ನನ್ನ ತಂದೆ.

**ಜಂಗ**:— ನಿನ್ನ ಊರು ಯಾವುದು?

**ಭಿಕಾಜಿ**:— ನಾನು ತಳವೂರಿದ್ದೆ ನನ್ನ ಊರು.

**ಜಂಗ**:— ನಿನ್ನ ವೃತ್ತಿ?

**ಭಿಕಾಜಿ**:— ನಿವೃತ್ತಿ.

**ಜಂಗ**:— ನಿನಗೆ ವಿದ್ಯೆ ಉಂಟೇ?

**ಭಿಕಾಜಿ**:— ಒಮ್ಮೆ ಉಂಟು, ಒಮ್ಮೆ ಇಲ್ಲ; ನೇವಿದ್ಯ.

ಜಂಗಬಹದ್ದೂರರಿಗೆ ಈ ದಿಟ್ಟತನದ ನುಡಿಗಳನ್ನು ಕೇಳಿ ತುಸು ಮುಗುಳುನಗೆ ಬಂತು. ಅದನ್ನು ಅಲ್ಲಿಯೇ ಅಡಗಿಸಿ ತನ್ನ ಬಲವಾದ ಅಗಲವಾದ ಅಂಗೈಯನ್ನು ಆತನ ಹೆಗಲ ಮೇಲೆ ಇಟ್ಟು "ಇಗೊ! ನೀನು ಇನ್ನೂ ತರುಣನು. ನಿನ್ನ ಕುಲಗೋತ್ರವೇನೆಂದು ತಿಳಿಯದೆ ಅಡ ನಾಡಿಯಾಗಿ ಬೀದಿಬೀದಿಗಳಲ್ಲಿ ಅಲೆಯುತಿದ್ದೆ. ನೀನು ಒಳ್ಳೆ ಕುಲದಲ್ಲಿ ಹುಟ್ಟಿದವನು. ಎಳೇ ಕೂಸಾಗಿದ್ದಾಗಲೇ ಕಳ್ಳರು ನಿನ್ನನ್ನು ಕದ್ದೊ ಯ್ದರು. ನಿನ್ನನ್ನು ಕಳಕೊಂಡ ನಿನ್ನ ತಂದೆ ನಿನ್ನನ್ನು ಹುಡುಕುತ್ತಲೆ ಇದ್ದನು. ನಿನ್ನ ತಂದೆ ಶ್ರೀಮಂತನು. ಒಮ್ಮೆ ನೀನು ಆತನ ಕೈ ಸೇರಿದೆಯೆಂದರೆ ಆತನಿಗೆ ಹೊಸ ಚೇತನ ಬಂದಂತಾಗುವುದು. ನಿನಗೂ ಸುಖಜೀವನವು ದೊರೆಯುವುದು. ಅದಕ್ಕೆ ಬದಲಾಗಿ ತುಂಟರೊಡನೆ ಪುಂಡರೊಡನೆ ಪೋಕರಿಗಳೊಡನೆ ಒಡನಾಡುತಿದ್ದರೆ ನಿನಗೆ ಬಂದೀಖಾನೆಯೆ ಪ್ರಾಪ್ತಿ, ತಿಳಿಯಿತೆ? ನಿನಗೆ ಇದರಲ್ಲಿ ಯಾವುದು ಹಿತ ಎಂದು ಬೇಗನೇ ಹೇಳು."

ಭಿಕಾಜಿಯು ಈಗ ವಿಚಾರದಲ್ಲಿ ಬಿದ್ದನು. ಇಷ್ಟರವರೆಗೆ ಅವನೊ ಡನೆ ಈ ಬಗೆಯಲ್ಲಿ ಸ್ಪಷ್ಟೋಕ್ತಿಗಳಿಂದ ಸುಖಪ್ರಾಪ್ತಿಯನ್ನು ಕುರಿತು ಯಾರೂ ನುಡಿದುದಿಲ್ಲ. ಹೊಲಸು ಬೈಗಳು, ರೇಗಿಸುವ ಮಾತುಗಳು ಮುಂತಾದ ಸಹಸ್ರನಾಮಗಳನ್ನು ಸಾರ್ವದಾ ಪಠಿಸುತಿದ್ದ ಭಿಕಾಜಿಗೆ ಈ ಬಗೆಯ ನಯನುಡಿಗಳ ರೀತಿಯೇ ಹೊಸ ತೆರನಾಗಿ ಕಂಡಿತು. ತಾನು ಕನಸಿನಲ್ಲಿದ್ದೇನೋ ಎಂಬಂತೆ ಒಮ್ಮೆ ತನ್ನ ತಲೆಯನ್ನೂ

ಮೋರೆಯನ್ನೂ ಸವರಿಕೊಂಡನು. ತಾನು ಎಚ್ಚರದಲ್ಲಿದ್ದೇನೆ ಎಂದು ಭಾಸವಾದೊಡನೆ ಜಂಗಬಹದ್ದೂರನ ಮುಂದೆ ಕೈಜೋಡಿಸಿ "ತಾವು ಹೇಳಿದಂತೆ ಸುಖವು ನನ್ನ ಪಾಲಿಗೆ ಬರುವುದಾದರೆ ತಮ್ಮ ಅಪ್ಪಣೆಯಂತೆ ನಡೆಯಲು ಸಿದ್ಧವಿದ್ದೇನೆ" ಎಂದು ನುಡಿದನು.

**ಜಂಗ**:—ಹಾಗಾದರೆ ಇಗೊ! ನಿನ್ನ ತಂದೆಯು ನಾಳೆ ಇಷ್ಟೇ ರಾತ್ರಿಯಲ್ಲಿ ಇಲ್ಲಿಗೆ ಬರುವನು. ಆತನಿಗೆ ನೀನು ಈಗಿನಂತೆ ಭಿಕಾಜಿ ಯಾಗಿ ಕಾಣಲಾರೆ. ನಿನ್ನ ನಿಜವಾದ ಹೆಸರು ವಿಮುದಲಾಲನಂತೆ! ನೀನು ವಿಮುದಲಾಲನಾಗಿಯೇ ಆತನನ್ನು ಕಾಣಬೇಕು. ಇಗೊ, ಇಲ್ಲಿ 100 ರೂಪಾಯಿಯ ನೋಟು ಇದೆ. ಇದರಿಂದ ಒಳ್ಳೆ ಉಡುಪು ತೊಡುಪುಗಳನ್ನು ಕೊಂಡುಕೊ, ತಲೆಯನ್ನು ಸರಿಯಾಗಿ ಕ್ಷೌರಮಾಡಿಸಿ ಚೆನ್ನಾಗಿ ಸ್ನಾನ ಮಾಡಿ ಕೂದಲನ್ನು ಬಾಚಿಕೊ. ಹಣ ಕೈಗೆ ಸಿಕ್ಕಿತೆಂದು ಎಲ್ಲಿಯಾದರೂ ಓಡಿಹೋಗಬೇಡ. ಓಡಿಹೋದೆಯಾದರೆ ನೋಟಿನ ನಂಬ್ರ ನನಗೆ ಗೊತ್ತಿದೆ. ನಿನ್ನ ಬೆನ್ನ ಹಿಂದೆಯೆ ಈ ಗಫೂರನು ನಿನ್ನನ್ನು ಹೊಂಚಿಕೊಂಡಿದ್ದಾನೆಂದು ತಿಳಿ. ಆತನಿಗೆ ನಿನ್ನ ಮೋಸದ ಸಂದೇಹವು ಬಂದರೆ ಕೂಡಲೇ ಆತನು ನಿನ್ನನ್ನು ಪೋಲಿಸಿನವರ ಕೈಗೆ ಒಪ್ಪಿಸಿ ಬಿಡುವನು. ಆ ಮೇಲೆ ನಿನಗೆ ಜೈಲೇ ಪ್ರಾಪ್ತಿ. ಗಫೂರನ ಕಣ್ಮರೆಯಾಗಿ ನೀನು ಎಲ್ಲಿಗೂ ಹೋಗಲಾರೆ. ಎಚ್ಚರವಿರಲಿ!

ಭಿಕಾಜಿಯು "ಆಗಲಿ! ತಮ್ಮ ಅಪ್ಪಣೆಯನ್ನು ಮೀರಲಾರೆ" ಎಂದು ಹೇಳಿ ನೋಟನ್ನು ಪಡೆದು ಜಂಗ ಬಹದ್ದೂರನಿಗೆ ನಮಸ್ಕರಿಸಿ ಹೊರಟು ಹೋದನು.

ಅವನು ಕೋಣೆಯನ್ನು ಬಿಟ್ಟು ಹೊರಗೆ ಹೋಗುವ ವರೆಗೆ ಅವನನ್ನೆ ನೋಡುತ್ತ ನಿಂತಿದ್ದ ಜಂಗ ಬಹದ್ದೂರನು ತನ್ನೊಳಗೆ ಹೀಗಂದನು:—"ಈಗಿನ ಬಡ ತರುಣರ ಅವಸ್ಥೆಯೇ ಹೀಗೆನ್ನ ಬೇಕೇ? ಆರೋಗ್ಯವು ಚೆನ್ನಾಗಿದ್ದು ಬುದ್ಧಿಶಕ್ತಿಯ ತೀಕ್ಷ್ಣತೆ ಇದ್ದರೂ ಸದ್ವೃತ್ತಿ ಗಳಲ್ಲಿ ಕೈಹಾಕಿ ತಮ್ಮ ಬೆವರಿನ ಧನದಿಂದ ಜೀವನ ಮಾಡುವ ಬದಲಾಗಿ ಜುಗಾರು ಕಳ್ಳತನ ಮುಂತಾದ ದುರ್ವ್ಯಸನಗಳಲ್ಲಿ ಹೊರಳಾಡುವುದೇ ಸುಖಜೀವನವೆಂದು ಭಾವಿಸುವರಲ್ಲ! ಇಂಥವರಿಗೆ ಸುಧಾರಿತ ಜೀವನ

ಕ್ರಮವನ್ನು ಕಲ್ಪಿಸಿಕೊಟ್ಟರೆ ಅದನ್ನು ಅನುಸರಿಸುವುದು ಪಥ್ಯವಾದೀತೇ? ಸಂಪತ್ತಿನ ಉಯ್ಯಾಲೆಯಲ್ಲಿ ತೂಗುತ್ತಿರುವಾಗ ಈ ತರುಣನು ಆ ಸುಖವನ್ನು ತೃಣೀಕರಿಸಿ ದುರ್ವ್ಯಸನಗಳ ಕೂಪಕ್ಕೆ ಹಾರುವುದಕ್ಕೆ ತವಕಗೊಳ್ಳುವನೆ ಎಂದು ನೋಡಬೇಕಾಗಿದೆ. "ಆಸೆಗೆ ಪಾರವಿಲ್ಲ; ಮನವೇ ಸೈರಿಸು."

---

## ಹತ್ತನೆ ಅಧ್ಯಾಯ

### ಮೋರೋಪಂತನ ಹೊಸ ಅವತಾರ

ಪ್ರಾತಃಕಾಲ ಏಳು ಗಂಟೆಯ ಸಮಯ. ಪೂನಾ ನಗರವಾಸಿಗಳು ಆಗಲೇ ಎದ್ದು ತಂತಮ್ಮ ದಿನವಹಿಯ ಕೆಲಸಗಳಿಗೆ ತೊಡಗಿದ್ದರು. ಶ್ರೀಮಂತರ ಮನೆಗಳಲ್ಲಿ ಬೆಳಗ್ಗಿನ ಚಾ ಕುಡಿದು ವರ್ತಮಾನ ಪತ್ರಿಕೆಗಳನ್ನೊ, ಅಂದಿನ ಟಪ್ಪಾಲುದ್ವಾರ ಬಂದ ಪತ್ರಗಳನ್ನೊ ಓದುವ ಸಮಾರಂಭವು ನಡೆದಿತ್ತು. ಇಂಥದ್ದೊಂದು ಶ್ರೀಮಂತರ ಮನೆಯ ಬೈಠಕಖಾನೆಯಲ್ಲಿ ನಮ್ಮೊಂದಿಗೆ ವಾಚಕರು ಪ್ರವೇಶಿಸ ಬೇಕಾಗುವುದು. ಇಲ್ಲಿ ವೃದ್ಧನೊಬ್ಬನು ಲೋಡಿಗೆ ಮೈ ಆನಿಸಿಕೊಂಡು ಕುಳಿತು ಪತ್ರಿಕೆಯನ್ನು ಓದುತಿದ್ದನು. ವೃದ್ಧನ ವಯಸ್ಸು ಸುಮಾರು ಐವತ್ತು ಇರಬಹುದು. ಅಂಗಾಂಗಗಳಲ್ಲಿ ಸುಕ್ಕು ಬೀಳ ತೊಡಗಿದ್ದು ಬಾಯೊಳಗಿನ ಹಲ್ಲುಗಳು ಕೆಲವು ಉದುರಿಹೋಗಿ, ಗಲ್ಲಗಳು ಒಳಸೇರಿದ್ದುವು. ಕಣ್ಣುಗಳಲ್ಲಿ ಮಾತ್ರ ಒಂದು ಬಗೆಯ ಕಾಂತಿ ಇತ್ತು. ತಲೆಯ ಹಿಂಭಾಗದಲ್ಲಿ ಚಿಕ್ಕದೊಂದು ನರೆತ ಶಿಖೆಯ ಸುತ್ತಲೂ ಚಿಕ್ಕ ಕೂದಲಿನ ಸುತ್ತು, ಅಗಲವಾದ ಹಣೆ, ಬೆಳ್ಳಗಾದ ಹಣೆಯ ಮೇಲೆ ತ್ರಿಪುಂಡ್ರ ಸ್ನಾನುವೊಂದು ಪ್ರಾತರ್ವಿಧಿಗಳ ಕಾಲದಲ್ಲಿ ಮಾಸಿಹೋಗಿದ್ದು, ಅದರ ಕುರುಹು ಕಾಣುತ್ತಿತ್ತು. ಮೈಗೆ ಸಡಿಲಾದ ಕಸೆ ಕಟ್ಟಿದ ಬಿಳುವಂಗಿಯನ್ನು ತೊಟ್ಟಿದ್ದನು. ಇದರ ಕೈಗಳು ಉದ್ದವಿದ್ದು ನೆರಿನೆರಿಯಾಗಿ ಕೈಗಳಲ್ಲಿ ಮುದಚಿಕೊಂಡಿದ್ದುವು. ಅವನ ಎದುರುಗಡೆಯಲ್ಲಿ ಚಿಕ್ಕದೊಂದು ಮೇಜು, ಅದರ ಮೇಲೆ ಲೇಖನಿ, ರತಿದಾನಿ, ಶಾಯಿ ಮುಂತಾದವುಗಳನ್ನು ಇಟ್ಟ ಪೆಟ್ಟಿಗೆಯೊಂದು. ವೃದ್ಧನು ಈ ಮೇಜಿನ ಮೇಲೆ ಕಾಲುಗಳನ್ನು ಚಾಚಿಕೊಂಡು ಪತ್ರಿಕೆಯನ್ನೋದುವುದರಲ್ಲಿಯೇ ಮಗ್ನ

ನಾಗಿದ್ದನು. ಫಕ್ಕನೆ—"ಇದೇನು ಸಮಾಚಾರ!" ಎಂದು ಇನ್ನೊಮ್ಮೆ ಪತ್ರಿಕೆಯಲ್ಲಿದ್ದುದನ್ನು ಗಟ್ಟಿಯಾಗಿ ಓದಿದನು:—"ವಿಲಾಯತಿಯಿಂದ ಹೊರಟ 5 ದೊಡ್ಡ ಹಡಗುಗಳು ಈ ತಾರೀಕಿಗೆ ಮುಂಬಯಿಗೆ ತಲಪ ಬೇಕಿತ್ತು. ಆದರೆ 'ಅರಬೀ ಕಡಲಲ್ಲಿ ತುಫಾನು ಎದ್ದಿದೆ' ಎಂದು ತಂತಿ ವರ್ತಮಾನವಿದೆ. ಅದರ ಪರಿಣಾಮವೇನೆಂದು ಎಲ್ಲರೂ ವ್ಯಾಕುಲ ಚಿತ್ತರಾಗಿ ಹಾರೈಸುತ್ತಲಿದ್ದಾರೆ." ವೃದ್ಧನು ಈ ಪತ್ರಿಕೆಯಲ್ಲಿರುವ ತಂತಿ ಸಮಾಚಾರವನ್ನು ಮತ್ತೊಮ್ಮೆ ಓದಿದನು. ಅನಂತರ "ನಮ್ಮ ಸರಕನ್ನು ತುಂಬಿಸಿದ ಭಾಗೀರಥಿಯೆಂಬ ಹಡಗು ಈ ಸಮಯದಲ್ಲಿ ಏಡೆನನ್ನು ದಾಟಿಬಂದಿರಬೇಕು. ಈ ಭಾಗೀರಥಿ ಈ ವೃದ್ಧಾಪ್ಯದಲ್ಲಿ ನನ್ನನ್ನು ಕಾಶಿಯಾತ್ರೆಗೆ ಅಟ್ಟಿಬಿಡುವಳೇ? ಮುಂಬಯಿಯ ನಮ್ಮ ದಲಾಲರಿಗೆ ತಂತಿಬಿಟ್ಟು ಈಗಲೇ ವರ್ತಮಾನ ತರಿಸುವೆನು," ಎಂದು ಮೇಜಿನ ಬಾಗಿಲನ್ನು ಎತ್ತಿ ಅದರೊಳಗಿಂದ ತಂತಿ ಫೋರ್ಮನ್ನು ಬರೆದು ತನ್ನ ಸಿಪಾಯಿಯನ್ನು ಕರೆದು "ಇಗೋ! ಈ ತಂತಿಯನ್ನು ತಂತಿ ಆಫಿಸಿಗೆ ಕೊಡು. ಮರುತ್ತರ ಬರುವ ವರೆಗೆ ಅಲ್ಲಿಯೇ ಕಾದಿರು; ಉತ್ತರ ಕೈಸೇರಿದೊಡನೆ ಓಡಿ ಬಾ" ಎಂದು ಕಳುಹಿಸಿ ತಲೆಯನ್ನು ಕೈಗೆ ಆನಿಸಿ ಯೋಚನೆಯಿಂದ ಕುಳಿತಿದ್ದನು. ಇವನೇ ಈ ಗ್ರಂಥದ ಮೊದಲನೆ ಅಧ್ಯಾಯದಲ್ಲಿ ನಿಮಗೆ ಪರಿಚಯ ಮಾಡಿ ಕೊಟ್ಟ ಮೋರೋ ಪಂತನು. ಆತನು ತನಗೆ ಅಂದು ರಾತ್ರೆಯಲ್ಲಿ ಆ ಅಪೂರ್ವ ವ್ಯಕ್ತಿಯಿಂದ ದೊರಕಿದ ಜವಾಹೀರುಗಳ ಚೀಲವನ್ನು ಎತ್ತಿಕೊಂಡು ಪೂನೆಗೆ ಬಂದು ವಾಸಿಸಿ, ಈಗ ಸುಮಾರು ಹದಿನೈದು ವರ್ಷಗಳಾಗಿದ್ದುವು. ಈ ಕಾಲ ದಲ್ಲಿ ಆ ಜವಾಹೀರುಗಳನ್ನು ಮುಂಬಯಿಗೆ ಆಗಾಗ ಹೋಗಿ ವಿಕ್ರಯಿಸಿ ಚಿಕ್ಕ ವ್ಯಾಪಾರದ ಮಳಿಗೆಯನ್ನು ಹಾಕಿ ತನ್ನ ಸ್ವಾಭಾವಿಕ ಪಾಂಡಿತ್ಯ ಮತ್ತು ಪ್ರಾಮಾಣಿಕತೆಗಳಿಂದ ದೊಡ್ಡ ಸಾಹುಕಾರನಾಗಿದ್ದು ದೊಡ್ಡ ಮಹಡಿ ಮನೆಯಲ್ಲಿ ಈಗ ವಾಸವಾಗಿದ್ದನು. ಇವನ ಮಳಿಗೆಯ ಹೆಸರು ಮುಂಬಯಿಯ ಪ್ರಸಿದ್ಧ ವರ್ತಕರೆಲ್ಲರಿಗೂ ತಿಳಿದೇ ಇತ್ತು, ವಿಲಾಯತಿಯಿಂದ ಮೆಂಚೆಸ್ಟರ್ ಬಟ್ಟೆಯನ್ನು ನೇರವಾಗಿ ತರಿಸಿ ವಿಕ್ರ ಯಿಸುವ ಇವನ ಬಂಡಸಾಲೆಗಳು ಮುಂಬಯಿಯಲ್ಲಿಯೂ ಪೂನೆ

ಯಲ್ಲಿಯೂ ಇದ್ದವು. ಈ ಬಗೆಯಲ್ಲಿ ಶ್ರೀಮಂತನಾಗಿದ್ದರೂ ಮೋರೋಪಂತನು ತನ್ನ ಪೂರ್ವಾಚಾರವನ್ನು ಬಿಡದೆ ಧಾರ್ಮಿಕ ಗ್ರಂಥಪಠನ ಇತ್ಯಾದಿಗಳನ್ನು ತನ್ನ ವಿರಾಮದ ವೇಳೆಯಲ್ಲಿ ಜರಗಿಸುತ್ತಲೇ ಇದ್ದನು. ಮೋರೋಪಂತನು ಪೂನೆಗೆ ಬಂದ ಎರಡು ಮೂರು ವರ್ಷಗಳಲ್ಲಿಯೆ ಅನ್ನಪೂರ್ಣೆಯಲ್ಲಿ ರಾಮದಾಸ ಪಂತನೆಂಬ ಮಗನೂ, ಜಗಮೋಹಿನಿ ಯೆಂಬ ಮಗಳೂ ಹುಟ್ಟಿದರು. ಕಿರಿಯಳಾದ ಮೋಹಿನಿಗೆ ಒಂದು ವರ್ಷ ದಾಟುವಷ್ಟರೊಳಗೆ ಅನ್ನಪೂರ್ಣೆ ಜ್ವರದಲ್ಲಿ ಬಿದ್ದು ಸ್ವರ್ಗಸ್ಥಳಾದಳು. ಹೀಗಾಗಿ ಮೋರೋಪಂತನ ಸಂಪತ್ತಿನ ಸುಖದಲ್ಲಿ ಬಹಳ ಕಾಲ ಸಹಭಾಗಿಯಾಗುವುದನ್ನು ವಿಧಾತನು ಅವಳ ಹಣೆಯಲ್ಲಿ ಬರೆದಿರಲಿಲ್ಲ. ಮೋರೋಪಂತನು ಎರಡನೆ ವಿವಾಹವಮಾಡಿಕೊಳ್ಳಲು ಒಪ್ಪಲಿಲ್ಲ. ತನ್ನ ಮಕ್ಕಳನ್ನು ಮಮತೆಯಿಂದ ಸಾಕಿ ಯೋಗ್ಯ ರೀತಿಯ ದೇಶೀಯ ಶಿಕ್ಷಣವನ್ನು ಕೊಡಿಸಿದ್ದನು. ಮಕ್ಕಳಿಬ್ಬರು ಅನ್ನಪೂರ್ಣೆಯ ಮತ್ತು ಮೋರೋಪಂತನ ಗುಣಗಳನ್ನೂ ರೂಪವನ್ನೂ ಹೋಲುತಿದ್ದು ಸೌಜನ್ಯ ಶಿಷ್ಟಾಚಾರಗಳ ಮೂರ್ತಿಗಳಾಗಿದ್ದರು. ಮೋರೋಪಂತನು ಯೋಚಿಸುತ್ತ ಕುಳಿತಿರುವುದನ್ನು ಬೈಠಕಖಾನೆಗೆ ಥಕ್ಕನ ಬಂದ ಮೋಹಿನಿ ನೋಡಿ "ಅಪ್ಪಾ! ಏನು? ಚಿಂತೆಯಿಂದ ಕುಳಿತಿರುವಿರಿ" ಎಂದಳು.

**ಮೋರೋ:**— ವೃದ್ಧಾಪ್ಯದಿಂದ ಸೊರಗಿರುವ ಮರದ ಕೊರಡು ನಾನು; ನನಗೆ ಸುಖವೇನು, ದುಃಖವೇನು?

**ಮೋಹಿನಿ:**— ಆ ಮಾತು ಅಂತಿರಲಿ, ನಿಮ್ಮ ಮೋರೆಯ ಮೇಲೆ ಏನೊ ಕಠಿನ ಪ್ರಸಂಗದ ಚಿಹ್ನೆಗಳು ಕಾಣುತ್ತವೆ.

ಮೋರೋಪಂತನು ಬಾಯಿಯೆತ್ತದೆ ವರ್ತಮಾನ ಪತ್ರಿಕೆಯಲ್ಲಿರುವ ಸಮಾಚಾರದ ಕಡೆಗೆ ಬೆರಳಿಟ್ಟು ತೋರಿಸಿದನು.

**ಮೋಹಿನಿ:**— ಅಷ್ಟೆಯೇ? ಅದರಿಂದ ಏನೂ ಸ್ಪಷ್ಟವಾದಂತಿಲ್ಲ. ನಮ್ಮ ದಲಾಲರಿಗೆ ಮುಂಬಯಿಗೆ ತಂತಿ ಬಿಟ್ಟು ತಿಳಿಯ ಬಾರದೇ?

**ಮೋರೋಪಂತ:**— ತಂತಿ ಬಿಟ್ಟಿರುವೆನು. ಉತ್ತರವಿನ್ನೂ ಬರಲಿಲ್ಲ. ಹೀಗಾಗಿ ನನ್ನ ಎದೆ ತಳಮಳಿಸುತ್ತದೆ. ಈ ಸಂಸಾರವೆಂಬದು ಸಾಗರದಂತೆ ಉಬ್ಬರ ಇಳಿತಗಳಿಂದ ಕೂಡಿದೆ.

**ಮೋಹಿನಿ:**— ಆದರೆ ಕಷ್ಟಕಾಲದಲ್ಲಿ ಅಧೀರನಾಗುವುದರಿಂದ ಕಾರ್ಯಸಾಧನೆಯಾದೀತೇ?

**ಮೋರೋ:**— ಮಗೂ, ನನ್ನ ಕಳವಳದ ಗುಟ್ಟು ನಿನಗಿನ್ನೂ ಚೆನ್ನಾಗಿ ಹತ್ತಲಿಲ್ಲ. ಈ ಹಡಗದಲ್ಲಿ ನನ್ನ ಸಂಪೂರ್ಣ "ಸೊತ್ತು" ಅಡಗಿದೆ. ಹಡಗು ಮುಳುಗಿತೆಂದರೆ ನಾನು ಗಂಗಾಸ್ನಾನಕ್ಕೇ ಹೊರಡ ಬೇಕಾಗುವುದು. ನನ್ನ ತಾರುಣ್ಯದಲ್ಲಿ ದಾರಿದ್ರ್ಯದ ಯಾತನೆಯನ್ನು ಅತಿರೇಕವಾಗಿ ಅನುಭವಿಸಿದೆನು. ಆ ಮೇಲೆ ದೇವರ ಕೃಪಾದೃಷ್ಟಿಯು ಏನೋ ಅಕಸ್ಮಾತ್ತಾಗಿ ನನ್ನ ಮೇಲೆ ಬಿತ್ತು. ಅಯಾಚಿತವಾಗಿ ಧನವು ದೊರೆಯಿತು. ಇಷ್ಟರ ವರೆಗೆ ಆ ಸಂಪತ್ತಿನ ಸುಖವನ್ನು ಅನುಭವಿಸಿದೆನು. ಈಗ ವೃದ್ಧಾಪ್ಯದಲ್ಲಿ ಪುನಃ ಬಡತನದ ಯಾತನೆ ಯನ್ನು ಅನುಭವಿಸಲಿದೆಯೋ ಎಂದು ಒಂದು ಚಿಂತೆ. ಅದರಲ್ಲಿಯೂ ಆಗರ್ಭಶ್ರೀಮಂತರಾಗಿ ಹುಟ್ಟಿದ ನೀವೆರಡು ಮಕ್ಕಳು ನನ್ನೊಂದಿಗೆ ಈ ಬಡತನವನ್ನು ಅನುಭೋಗಿಸಲಿಕ್ಕೆ ಆದೀತೆ? ನನ್ನೆದುರಿಗೆ ನೀವಿಬ್ಬರು ಕಷ್ಟಪಡುವುದನ್ನು ನಾನು ನೋಡಿ ಸಹಿಸುವುದಾದರೂ ಹೇಗೆ?

**ಮೋಹಿನಿ:**— ಅಪ್ಪಾ! ನಿಮಗೆ ಬಡತನವಿದ್ದಾಗ ಒಬ್ಬ ವಿಚಿತ್ರ ವ್ಯಕ್ತಿಯು ಧನಸಹಾಯ ಮಾಡಿದ್ದನೆಂದು ಒಮ್ಮೆ ನೀವು ಹೇಳಿದಿರಲ್ಲ! ಆ ಮೇಲೆ ಅವನು ನಿಮಗೆ ಕಾಣಲು ಸಿಗಲಿಲ್ಲವೇ? ಈ ಕಾಲದಲ್ಲಿ ಅವನು ಇದ್ದಿದ್ದರೆ ನಿಮ್ಮ (ಮನಸ್ಸಿನ) ವ್ಯಥೆಯನ್ನು ದೂರಪಡಿಸು ತಿದ್ದನೋ ಏನೋ?

**ಮೋರೋ:**— ಮಗೂ, ಆ ವಿಚಿತ್ರ ಪುರುಷನನ್ನು ನಾನು ಆ ಮೇಲೆ ಕಾಣಲೇ ಇಲ್ಲ. ನನ್ನ ಕಾಲವಾದರೂ ಸಮೀಪಿಸುತ್ತಾ ಬಂತು. ಅಸ್ತಮಾನಕ್ಕೆ ಇನ್ನು ಒಂದೆರಡು ಗಳಿಗೆ ಉಳಿದಿರಬಹುದು; ಆದ್ದರಿಂದ ದಾರಿದ್ರ್ಯದ ದವಡೆಯಲ್ಲಿ ತುತ್ತಾಗಿ ಬಹಳ ಕಾಲ ನಾನು ಸಿಲುಕಿರ ಲಾರೆನು. ಆದರೆ ನಿನ್ನಂಥಾ ಕೋಮಲ ಲತೆಗೆ ಈ ದಾರಿದ್ರ್ಯದ ಸುಂಟರ ಗಾಳಿಯು ಸೋಂಕಿತೆಂದರೆ ಅದರ ಪರಿಣಾಮವು ಏನಾದೀ ತೆಂಬುದೇ ನನಗೆ ದಿಗಿಲು ಹುಟ್ಟಿಸುತ್ತದೆ.

**ಮೋಹಿನಿ:**— ಅಪ್ಪಾ! ಸೃಷ್ಟಿಸಿದ ದೇವರು ನಮ್ಮ ಹಣೆಯಲ್ಲಿ ಒಂದು ಹಿಡಿ ಅನ್ನವನ್ನು ಬರೆದಿಟ್ಟಿಲ್ಲವೆ? ನೀನು ವಿಚಾರಶೀಲನು.

ಧರ್ಮಗ್ರಂಥಗಳನ್ನು ಓದಿದವನು. ನೀನೇ ಈ ಬಗೆಯಾಗಿ ಅಧೀರನಾದರೆ—

**ಮೋರೋ:**—ಸರಿ, ಚೆನ್ನಾಗಿ ಹೇಳಿದೆ. ಸಂಪತ್ತಿನ ಮೌಢ್ಯವು ನನ್ನ ವಿಚಾರಶಕ್ತಿಗೆ ತಗಲಿ ಅದನ್ನು ಸಂಕುಚಿತವಾಗಿ ಮಾಡಿತು. ಹೀಗಾಗಿ ದಯಾಮಯನಾದ ಆ ಭಗವಂತನ ವಿಸ್ಮರಣೆಯು ನನ್ನಲ್ಲಿ ಉಂಟಾಯಿತು.

ಅಷ್ಟರಲ್ಲಿ ಆಳು ತಂತಿಯ ಉತ್ತರವನ್ನು ತಂದನು. ಮೋರೋ ಪಂತನು ಅದನ್ನು ಓದಿ 'ಹರೇ ರಾಮ್!' ಎಂದು ಹೇಳಿ ಮೂರ್ಛಿತ ನಾದನು. ಮೋಹಿನಿಯ ಕೂಗನ್ನು ಕೇಳಿ ಅವಳ ಅಣ್ಣನಾದ ರಾಮ ದಾಸನು ಓಡಿಬಂದು ಮೋರೋಪಂತನಿಗೆ ಶೈತ್ಯೋಪಚಾರವನ್ನು ನಡೆಸಿ ದನು. ಅದೇ ಕಾಲದಲ್ಲಿ ಜಂಗಬಹದ್ದೂರರು ಹೊರಗೆ ಬಂದಿರುವ ರೆಂದು ಜವಾನನು ತಿಳಿಸಿದನು. ಅವನ ಹಿಂದೆಯೇ ಜಂಗನೂ ಒಳಕ್ಕೆ ಬಂದು ಈ ದುಃಖಕರವಾದ ನೋಟವನ್ನು ಕಂಡು 'ಓಹೋ ಅಕಾಲ ದಲ್ಲಿ ಬಂದುಬಿಟ್ಟೆ. ತುಫಾನಿನ ಸಮಯದಲ್ಲಿ ನಿಮ್ಮ ಹಡಗು ಅರಬೀ ಕಡಲಿಗೆ ಇಳಿದಿತ್ತೆಂದು ನಾನೂ ಕೇಳಿದೆ. ಅನಂತರದ ಸುದ್ದಿ ಯೇನಾದರೂ ಉಂಟೇ ಎಂದು ವಿಚಾರಿಸಲು ಬಂದೆ' ಎಂದನು.

ರಾಮದಾಸನು, ಮೋರೋಪಂತನ ಕೈಯಲ್ಲಿರುವ ತಂತಿಯನ್ನು ಜಂಗಬಹದ್ದೂರನ ಕೈಗೆ ಕೊಟ್ಟನು. ಅವನು ಅದನ್ನು ಓದಿ ತಲೆದೂ ಗುತ್ತಾ ಒಂದೆರಡು ನಿಮಿಷಗಳ ನಂತರ "ರಾಮದಾಸ್! ಮುಂಬಯಿಯ "ವಾಟ್ಸನ್" ಕಂಪೆನಿಯವರು ನಿಮ್ಮ ಮೇಲೆ ಎರಡು ಲಕ್ಷ ರೂಪಾ ಯಿಯ ಹುಂಡಿಯನ್ನು ಬರೆದು ನನಗೆ ಕಳುಹಿಸಿದ್ದರು. ಅದನ್ನು ವಟಾಯಿಸಲು ನಾನು ಇಲ್ಲಿಗೆ ಬಂದಿದ್ದೆ. ಆದರೆ ಈ ಕಳವಳದ ಕಾಲ ದಲ್ಲಿ ನಿಮಗೆ ಈಗ ಪೀಡಿಸಲಾರೆನು. ಈ ಹಣವನ್ನು ಇನ್ನೆರಡು ತಿಂಗ ಳಲ್ಲಿ ನನಗೆ ಕೊಡುವುದಾಗಿ ನೀವು ಈ ಕಾಗದದ ಮೇಲೆ ಬರೆದು ಕೊಡುವುದಾದರೆ ಸಾಕಾಗುವುದು.

**ರಾಮದಾಸ:**—ನಾನು ಬರೆದು ಅದಕ್ಕೆ ನಮ್ಮ ಅಪ್ಪನವರು ಸಹಿ ಇತ್ತರೆ ಸಾಕೇ?

**ಜಂಗ:**— ಅಷ್ಟೇ ಸಾಕು—ಧಾರಾಳವಾಯ್ತು.

ರಾಮದಾಸನು ಆಗ ಮೂರ್ಛೆಯಿಂದ ಕಣ್ಣು ತೆರೆದ ಮೋರೋ ಪಂತನ ಸಹಿಯನ್ನು ಆ ಕಾಗದದ ಮೇಲೆ ಮಾಡಿಸಿ ಆ ಕಾಗದವನ್ನು ಜಂಗ ಬಹದ್ದೂರನ ಕೈಗೆ ಒಪ್ಪಿಸಿದನು. ಜಂಗ ಬಹದ್ದೂರನು ಎದ್ದು ಹೊರಗೆ ಹೋಗುವಾಗ ಮುಖವನ್ನು ತಿರುಗಿಸಿ ಆ ತಂದೆ ಮಕ್ಕಳನ್ನೇ ದೃಷ್ಟಿಸುತ್ತಾ "ಅನ್ಯರ ಹಸಿವೆಯನ್ನು ತಿಳಿಯುವ, ಅನ್ಯರ ಕಷ್ಟಗಳಲ್ಲಿ ಕರುಳು ಕರುಗುವ ಈ ಸೌಮ್ಯ ಮೂರ್ತಿಗೆ ಇಂಥ ಕಷ್ಟವೇ! ಆಗಲಿ ಒಂದು ವೇಳೆ ಹಡಗು ನಿಜವಾಗಿ ಮುಳುಗಿದ್ದರೂ ಅಷ್ಟೇ ಸರಕು ತುಂಬಿದ ಇನ್ನೊಂದು ಹಡಗನ್ನು ಸಿದ್ಧಪಡಿಸಿ ಅದು ಅದೇ ಹೆಸರಿನಿಂದ ಈತನ ಕೈಸೇರುವಂತೆ ಮಾಡಿ ಈ ಗುಣನಿಧಿಯ ಕಳವಳವನ್ನೂ ಕಷ್ಟಪರಂಪರೆಯನ್ನೂ ನೀಗಿಸುವೆನು" ಎನ್ನುತ್ತಾ ಬಂಡಿಯನ್ನು ಹತ್ತಿ ತನ್ನ ಬಂಗಲೆಗೆ ಹಿಂತಿರುಗಿದನು.

---

## ಹನ್ನೊಂದನೆ ಅಧ್ಯಾಯ

## ಅಪೂರ್ವ ಸಮಾಗಮ

ಅಸ್ಮಾನಬಾಗಿನ ಬಂಗಲೆ. ಅದರ ಬೈಠಕಖಾನೆಯಲ್ಲಿ ಜಂಗ ಬಹದ್ದೂರನು ಹುಕ್ಕೆಯನ್ನು ಸೇದುತ್ತಾ ಆರಾಮ ಕುರ್ಚಿಯಲ್ಲಿ ಒರಗಿದ್ದನು. ಸಾಯಂಕಾಲ 7 ತಾಸಿನ ಸಮಯ. ಗಫೂರನು ಮೆಲ್ಲಗೆ ಬಂದು ಹೊರಗೆ ಪೋಪಟಲಾಲನು ಬಂದಿರುವುದನ್ನು ತಿಳಿಸಿದನು. ಜಂಗಬಹದ್ದೂರನ ಅಪ್ಪಣೆಯ ಮೇರೆಗೆ ಪೋಪಟಲಾಲನು ಗಫೂರನೊಡನೆ ಬೈಠಕಖಾನೆಯೊಳಕ್ಕೆ ಪ್ರವೇಶ ಮಾಡಿದನು. ಆರಾಮಕುರ್ಚಿಯಿಂದಲೇ ಜಂಗಬಹದ್ದೂರನು ಪೋಪಟಲಾಲನನ್ನು ತುಸುಸಮಯ ನೋಡಿದನು. ಇಂದು ಪೋಪಟಲಾಲನ ಸ್ಥಿತಿಯು ತೀರಾ ಮಾರ್ಪಟ್ಟಿತ್ತು. ಹೆರವರ ಹಣ ಅನಾಯಾಸವಾಗಿ ಕೈಸಿಕ್ಕಿದರೆ ಸ್ಥಿತಿಯು ಹೇಗೆ ಮಾರ್ಪಡುತ್ತದೆ ಎಂಬುದಕ್ಕೆ ಪೋಪಟಲಾಲನು ಒಂದು ನಿದರ್ಶನವಾಗಿದ್ದನು. ಹಿಂದಿನ ದಿನದ ಮಾಸಿದ ಬಟ್ಟೆಗಳಲ್ಲಿ ಒಂದೂ ಅವನ ಮೈಮೇಲಿರಲಿಲ್ಲ. ಶುಭ್ರವಾದ ಬಿಳಿ ಜರಿ ಅಂಚಿನ ವೇಷ್ಟಿಯನ್ನು ಪಾದ

ಗಳ ವರೆಗೆ ಚಾಚುವಂತೆ ಹಿಂದೂ ಮುಂದೂ ಪಂಚಕಚ್ಚೆ ಹಾಕಿ ಉಟ್ಟಿದ್ದನು. (ಮೈಗೆ) ಉದ್ದವಾದ ಕೈಗಳಲ್ಲಿ ತುಂಬಾ ನೆರಿಗೆಗಳುಳ್ಳ ಬಿಳೇ ಅಂಗಿ, ಅದರ ಮೇಲೆ ಬಲ ಹೆಗಲಿನಿಂದ ಎಡಕಂಕುಳನ್ನು ದಾಟಿ ಒಂದು ಸುತ್ತುಮಾಡಿದ ಜರಿ ಅಂಚಿನ ಶಾಲು,—ತಲೆಗೆ ಜರಿಚಂಚುಳ್ಳ ಪಾಗು, ಕಾಲಿಗೆ ಪೂನೆಯ ಪಾಪೋಸು, ಕೈಯಲ್ಲಿ ಕೆತ್ತನೆ ಕೆಲಸದ ಜಂತದ ಹಿಡಿಯುಳ್ಳ ಬೆತ್ತ, ಅಂತೂ ಪೋಪಟಲಾಲನು ಒಮ್ಮೆ ಶ್ರೀಮಂತ ನಿದ್ದಾಗ ಯಾವ ಪೋಷಾಕನ್ನು ಅನುದಿನವೂ ಧರಿಸಿಕೊಳ್ಳುತಿದ್ದನೋ ಅದನ್ನೇ ಇಂದು ಧರಿಸಿ ಸುಲಕ್ಷಣವಾಗಿ ಕಾಣುತಿದ್ದನು. ಒಳಗೆ ಬಂದೊಡನೆಯೇ ಜಂಗ ಬಹದ್ದೂರನಿಗೆ "ರಾಮ್ ರಾಮ್" ಮಾಡಿ ನಿಂತನು.

**ಜಂಗ:**—ಕುರ್ಚಿಯಿಂದ ಎದ್ದು ಪೋಪಟಲಾಲನನ್ನು ಇನ್ನೊಮ್ಮೆ ನೋಡಿ "ಸರಿ, ಈಗ ಚೆನ್ನಾಗಿದೆ. ನಿಮ್ಮ ಕುಲ ಗೌರವಕ್ಕೆ ತಕ್ಕ ಉಡು ಪನ್ನೇ ಈಗ ಧರಿಸಿರುವಿರಿ. ನಿಮ್ಮ ಮಗನು ಈಗಲೇ ಬರುವನು. ನಿನ್ನೆ ಹೇಳಿದ ನನ್ನ ಮಾತುಗಳು ನಿಮಗೆ ಮರವೆಯಾಗಲಿಲ್ಲವಲ್ಲಾ! ತುಸು ಹೊತ್ತು ಇಲ್ಲಿರಿ. ನಿಮ್ಮ ವಿಮದಲಾಲನು ಹೊರಗೆ ಬಂದಿದ್ದರೆ ಅವನನ್ನು ಈಗಲೇ ಈ ಕೋಣೆಯೊಳಕ್ಕೆ ಕಳುಹಿಸುವೆನು. ನಿರಾತಂಕ ವಾಗಿ ಪರಸ್ಪರ ಪರಿಚಯುವನ್ನು ನೀವು ಮಾಡಿಕೊಳ್ಳಬಹುದು."

ಅನಂತರ ಜಂಗಬಹದ್ದೂರನು ಬೈಠಕ ಖಾನೆಗೆ ಒತ್ತಾಗಿರುವ ಇನ್ನೊಂದು ಕೋಣೆಯೊಳಗೆ ಪ್ರವೇಶ ಮಾಡಿದನು. ಅಲ್ಲಿ ಭಿಕಾಜಿಯು ಗಫೂರನೊಡನೆ ನಿಂತಿದ್ದನು. ಅವನೂ ಮೊದಲಿನ ಭಿಕಾಜಿಯಾಗಿರ ಲಿಲ್ಲ. ತೀರಾ ಮಾರ್ಪಟ್ಟಿದ್ದನು. ಟ್ವೀಡ್ ಬಟ್ಟೆಯ ಇಜಾರು, ಅದೇ ಬಟ್ಟೆಯ ಫಾರ್ಸಿ ಕೋಟು, ಕತ್ತಿಗೆ ಬಿಳೇ ಕೊಲರ್, ತಲೆಯ ಕೂದ ಲನ್ನು ವೆಸಲೀನ್ ಹಚ್ಚಿ ಚೆನ್ನಾಗಿ ಬಾಚಿಕೊಂಡು ಕಾಲಿಗೆ ಇಂಗ್ಲಿಷ್ ಮಾದರಿಯ ಬೂಟ್ಸುಗಳನ್ನು ಮೆಟ್ಟಿದ್ದನು, ಕೈಯಲ್ಲಿ ಬೆಳ್ಳಿಯ ಹಿಡಿಯ ಸಪ್ಪೂರವಾದ ಮಲಾಕಾ ಬೆತ್ತ, ಅಂತೂ ಆ ಕಾಲದ ಸುಧಾರಿತ ತರು ಣರ ಪ್ರತಿರೂಪವಾಗಿದ್ದನು. ಅವನನ್ನು ಕಂಡೊಡನೆ ಜಂಗ ಬಹದ್ದೂ ರನ ಮೋರೆಯ ಮೇಲೆ ನಸುನಗೆಯು ಫಕ್ಕನೆ ಕಾಣಿಸಿಕೊಂಡು

ಮಾಯವಾಯಿತು. ಜಂಗಬಹದ್ದೂರನು ಅವನ ಸಮೀಪಕ್ಕೆ ಹೋಗಿ ಅವನ ಬೆನ್ನನ್ನು ತಟ್ಟಿ 'ಇಗೋ ಈಗ ನೀನು ಸಭ್ಯನಂತೆ ಕಾಣುತ್ತಿ. ಈಗ ನೀನು ಭಿಕಾಜಿಯಲ್ಲ, ವಿಮದಲಾಲ ಎಂಬುದನ್ನು ಸ್ಮರಣೆಯಲ್ಲಿಡು. ನಿನ್ನ ತಂದೆಯೊಡನೆ ಯೋಗ್ಯ ರೀತಿಯಿಂದ ವರ್ತಿಸಿದರೆ ಆತನ ಹೇರಳ ಧನಕ್ಕೆ ನೀನೇ ಹಕ್ಕುದಾರನಾಗುವೆ. ಈಗ ನಮ್ಮ ಉಮದಾಬಾಗ್ ಬಂಗಲೆಯ ಸಮೀಪ ನಿನಗೋಸ್ಕರ ನಿನ್ನ ತಂದೆ ಒಂದು ಹೊಸ ಮನೆಯನ್ನು ಕೊಂಡುಕೊಳ್ಳುವನು. ಸುಖವಾಗಿ ನೀನು ಜೀವನ ನಡಿಸುವುದಕ್ಕೆ ಬೇಕಾದ ಹಣವನ್ನು ನಿನ್ನ ತಂದೆ ನಿನಗೆ ಕೊಡಲಿಕ್ಕಿರುವನು. ಇಲ್ಲಿಯ ಪ್ರಜಾಮುಖಂಡರ ಪರಿಚಯವು ನಿನಗೆ ಆತನಿಂದಲೇ ಆಗುವುದು. ಮುಂದೆ ಸತ್ಕುಲ ಪ್ರಸೂತೆಯಾದ ಕನ್ನಿಕೆಯನ್ನು ತಂದು ಆತನೇ ನಿನಗೆ ವಿವಾಹ ಮಾಡಿಸುವನು. ಈಗ ಬೈಠಕಖಾನೆಯೊಳಗೆ ಹೋಗಿ ನಿನ್ನ ತಂದೆಯನ್ನು ತಬ್ಬಿಕೊಳ್ಳು. ನಿನ್ನನ್ನು ಕಾಣಬೇಕೆಂದು ಆತನು ತವಕದಿಂದಿರುವನು. ನಾನು ಈಗ ಹೇಳಿದ ಮಾತುಗಳನ್ನು ಮಾತ್ರ ಮರೆಯಬೇಡ'' ಎಂದು ಬೈಠಕಖಾನೆಯ ಒಳಬಾಗಿಲನ್ನು ತೆರೆದು ಭಿಕಾಜಿಯನ್ನು ಒಳಗೆ ಕಳುಹಿಸಿದನು. ಆ ಮೇಲೆ ತನ್ನಲ್ಲಿ ಸೇವಾವೃತ್ತಿಯನ್ನು ಕೆಲವು ಕಾಲದಿಂದ ಮಾಡುತ್ತಿದ್ದ ಚಮನಲಾಲ್ ಎಂಬವನನ್ನು ಮೆಲ್ಲಗೆ ಕರೆದು "ಚಮನಲಾಲ್! ನೀನು ತೋರಿಸಿಕೊಳ್ಳದೆ ಈ ಕಿಟಿಕಿಯೊಳಗಿನಿಂದ ಬೈಠಕಖಾನೆಯೊಳಗೆ ಇಣಿಕಿ ನೋಡು. ಅಲ್ಲಿದ್ದ ಇಬ್ಬರ ಪರಿಚಯವು ನಿನಗೆ ಇದೆಯೋ ಹೇಳು'' ಎಂದನು.

ಚಮನಲಾಲನು ಅಡ್ಡವಾಗಿ ನಿಂತು ಕಿಟಿಕಿಯ ಕನ್ನಡಿಯ ಬಾಗಿಲಿನಿಂದ ಒಳಕ್ಕೆ ಇಣಿಕಿನೋಡಿ ಫಕ್ಕನೆ ಕೆರಳಿದಂತಾಗಿ 'ಹುಜೂರ್! ಅವನೇ ಅವನು! ಆ ತುಂಟನು! ಈಗ ತೀರಾ ವೇಷ ಬದಲಾಯಿಸಿಕೊಂಡಿದ್ದಾನೆ. ಅವನೇತಕ್ಕೆ ಇಲ್ಲಿಗೆ ಬಂದಿರುವನು?'

**ಜಂಗ:**— ಚಮನಲಾಲ್! ಮೆಲ್ಲನೆ ಮಾತನಾಡು. ಅವನು ಎಂದರೆ ಯಾರು ಮುದುಕನೋ? ತರುಣನೋ?

**ಚಮನಲಾಲ್:**— ಮುದುಕನ ಪರಿಚಯವು ನನಗಿಲ್ಲ. ತುಂಟನೆಂದರೆ ಆ ತರುಣನು. ನನ್ನ ಸ್ವಂತ ಕೈಗಳಿಂದ ಎತ್ತಿ ತಂದ ಬಾಲ

ಕನು — ಅವನೆಷ್ಟು ಪೋಷಾಕನ್ನು ಮಾರ್ಪಡಿಸಿದರೂ ನಾನು ಗುರುತಿಸು ಲಾರೆನೇ? ಇಗೊ, ಅವನ ಕೆನ್ನೆಯ ಪ್ರದೇಶದಲ್ಲಿರುವ ಮಚ್ಚೆಯನ್ನು ನಾನು ಹೇಗೆ ಮರೆತೇನು? ಶಿಶುಹತ್ಯವನ್ನು ತಪ್ಪಿಸಿ ನಾನೇ ಆತನನ್ನು ಎತ್ತಿ ತಂದೆನು. ಅವನು ಎಂಟು ಹತ್ತು ವರ್ಷ ಪ್ರಾಯಕ್ಕೆ ಬರುವ ವರೆಗೆ ನಾನೇ ಆ ಘಾತಕಿಯನ್ನು ಸಾಕಿದೆನು. ಕೊನೆಗೆ ಆತನ ತುಂಟತನ ವನ್ನು ಸೈರಿಸಲಾರದೆ ಮಾತೃದ್ರೋಹಿಯಾದ ಆ ಚಾಂಡಾಲನನ್ನು ನಾನೇ ನಮ್ಮ ಮನೆಯಿಂದ ಹೊಡೆದು ಹೊರಕ್ಕೆ ಅಟ್ಟಿದೆನು. ಎಷ್ಟು ಕಾಲ ವಾದರೂ ಆತನನ್ನು ನಾನು ಗುರುತಿಸಬಲ್ಲೆನು. ಈ ಕಾಳಸರ್ಪನು ಇಲ್ಲಿಗೇಕೆ ಬಂದಿರುವನು! ಅಯ್ಯೊ! ಆ ಮುದುಕನನ್ನು ತಬ್ಬಿಕೊಳ್ಳುತ್ತ ಲಿದ್ದಾನೆ. ಅವನ ಹೊಟ್ಟೆಯನ್ನು ತಿವಿದು ಅವನ ಪ್ರಾಣವನ್ನು ಹೀರ ಲಿಕ್ಕಿಲ್ಲವೇ?

**ಜಂಗ**:—"ಅವನು ಇಲ್ಲಿಗೆ ಏತಕ್ಕೆ ಬಂದನೆಂದು ನಿನಗೆ ಮುಂದೆ ಗೊತ್ತಾಗುವುದು. ಈಗ ಸದ್ದು ಮಾಡದೆ ಒಳಕ್ಕೆ ಹೋಗು" ಎಂದು ಚಮನಲಾಲನನ್ನು ಇನ್ನೊಂದು ಕಡೆಗೆ ಕಳುಹಿಸಿ, ಜಂಗ ಬಹದ್ದೂರನು ಕಿಟಿಕಿಯೊಳಗಿನಿಂದ ತಂದೆ ಮತ್ತು ಮಗನ ಸಂವಾದವನ್ನು ಕೇಳುತ್ತಾ ನಿಂತನು. ಬೈಠಕಖಾನೆಯೊಳಗೆ—

**ಪೋಪಟ**:— ನನ್ನ ಮಗ ವಿಮದಲಾಲ್ ಎಂದರೆ ನೀನೆ ಏನು?

**ವಿಮದಲಾಲ್**:— ಹಾಗೆಂದು ಜಂಗಬಹದ್ದೂರರ ಅಪ್ಪಣೆ.

**ಪೋಪಟ**:— ಅದೇನು ಹಾಗೆನ್ನುವೆ?

**ವಿಮದ**:—ನೀವು 'ಮಗ' ಎಂದು ಕರೆಯುವಾಗ 'ಏ ನನ್ನ ತಂದೆ!' ಎಂದು ನಾನೆನ್ನಬೇಕು. ನೀವು 'ಇತ್ತ ಬಾ' ಎಂದರೆ 'ಏನಂದಿಯಪ್ಪಾ!' ಎಂದು ನಾನು ಕೇಳಬೇಕು. ಇದೊಂದು ಅವರಿಂದ ಏರ್ಪಾಡು ಆಯಿತು.

**ಪೋಪಟ**:— ಹಾಗೆಂದರೇನು?

**ವಿಮದ**:— ಬಾಲ್ಯದಿಂದಲೂ ನನ್ನನ್ನು ಸಾಕಿದ ತಂದೆಯೊಬ್ಬನು ಜೀವಂತನಾಗಿರುವಾಗ ಇನ್ನೊಮ್ಮೆ ಇಲ್ಲಿ 'ತಂದೆ ಯಾಕೆ?' ಎಂದು ಜಂಗಬಹದ್ದೂರರನ್ನು ಕೇಳಲು ನನಗೆ ಧೈರ್ಯ ಬರಲಿಲ್ಲ.

**ಪೋಪಟ**:—ಅಂದರೆ—

**ವಿಮುದ**:—ತಿಪ್ಪಲುತಿರುಕನಾಗಿ ಬೀದಿ ಬೀದಿಗಳಲ್ಲಿ ಅಲೆದು, ಪೋಲೀಸಿನವರ ಕೊರಡೆಯ ಏಟುಗಳನ್ನು ತಿನ್ನುವುದಕ್ಕಿಂತ ಚಲೋ ಮನೆಯಲ್ಲಿ ವಾಸಮಾಡಿಕೊಂಡು, ಬೇಕಾದ ಹಾಗೆ ತಿಂಡಿ ತಿಂದು ಜೀವಿಸೆಂದು ಜಂಗ ಬಹದ್ದೂರರು ನನಗೆ ಅಪ್ಪಣೆಕೊಡುವಾಗ "ಅಪ್ಪ ಣಿಕೆಮಾಡಲು" ಕಲಿಸಿದರು. ಆಗ "ಕಾವಲಿಯ ಸಮಾಚಾರ ನನ ಗೇಕೆ" ಎಂದು, ನಾನು ಸುಮ್ಮನಾದೆ.

**ಪೋಪಟ**:—ಹಾಗೆನ್ನ ಬೇಡ. ಕಾರಣಾಂತರದಿಂದ ನೀನು ಯಾವ ದೆಸೆಗೆ ಬಂದಿಳಿದಿದ್ದರೂ ನೀನು ನಿಜವಾಗಿಯೂ, ನನ್ನ ಮಗನೆಂದು ಜಂಗ ಬಹದ್ದೂರರಿಗೆ ರುಜುವಾತು ಸಿಕ್ಕಿದೆ. ಅವರೇ ನಿನ್ನ ಪತ್ತೆ ಹಚ್ಚಿ ನಿನ್ನನ್ನು ಇಲ್ಲಿಗೆ ಕರೆಸಿದರು.

**ವಿಮುದಲಾಲ**:—ಆಗಲಿ. ಅದರಿಂದ ನನಗೆ ಸುಖವೇ ದೊರೆ ಯುವ ಕಾರಣ ಈ ಏರ್ಪಾಡಿಗೆ ನನ್ನ ಆಕ್ಷೇಪವಿಲ್ಲ.

**ಪೋಪಟಲಾಲ್**:—ಹಾಗಿದ್ದರೆ ನನ್ನನ್ನು ಇನ್ನೊಮ್ಮೆ ತಬ್ಬಿಕೊ.

ಅಷ್ಟರಲ್ಲಿ ಜಂಗ ಬಹದ್ದೂರರು ಬೈಠಕಖಾನೆಯೊಳಗೆ ಸದ್ದಿಲ್ಲದೆ ಪ್ರವೇಶಮಾಡಿ—'ಪೋಪಟಲಾಲರೇ! ಬಹು ಕಾಲದಿಂದ ವಿಯೋಗ ವಾದ ತಂದೆ ಮಕ್ಕಳೀರ್ವರಿಗೂ ಈ ಸುಖಸಮಾಗಮವಾದಂತಾಯಿತು. ಇನ್ನು ಇಲ್ಲಿಯೇ ನಿಮಗೋಸ್ಕರ ಏರ್ಪಡಿಸಿದ ಮನೆಯಲ್ಲಿ ನೀವು ಸುಖ ವಾಗಿರಬಹುದು. ಆ ಮನೆಯನ್ನು ಗಫೂರನು ನಿಮಗೆ ತೋರಿಸುವನು."

ಪೋಪಟಲಾಲನೂ ವಿಮುದಲಾಲನೂ ಜಂಗ ಬಹದ್ದೂರರಿಗೆ 'ರಾಮ್ ರಾಮ್' ಮಾಡಿ ಗಫೂರನೊಂದಿಗೆ ಹೊರಗೆ ಇಳಿದು ಹೋದರು. ಜಂಗ ಬಹದ್ದೂರರು ಅವರನ್ನೇ ದೃಷ್ಟಿಸುತ್ತ "ಆಹಾ ಇಂಥಾ ಪಿತ, ಸುತರ ಜತೆ—ಇದೊಂದು ನೂತನ ಕತೆಯೋ ಸರಿ! ಪಾಪಕೂಪದಿಂದ ಎತ್ತಿ, ಏನೊಂದೂ ಕಷ್ಟವಿಲ್ಲದ ಸುಖಜೀವನವು ಸರಾಗವಾಗಿ ನಡೆಯುವಂತೆ ಏರ್ಪಡಿಸಿದ ಕಾಲದಲ್ಲಿಯೂ ಈ ತರುಣನ ಅವಸ್ಥೆಯು ಏನಾದೀತೆಂದು ನೋಡಲಿಕ್ಕಿದೆ" ಎಂದು ಆರಾಮ ಕುರ್ಚಿ ಯಲ್ಲಿ ಕುಳಿತುಕೊಂಡು ಹುಕ್ಕೆಯನ್ನು ಸೇದ ತೊಡಗಿದರು.

# ಹನ್ನೆರಡನೆ ಅಧ್ಯಾಯ

## ಗಂಗಾರಾಮ ಮತ್ತು ಭಿಕಾಜಿಯ ಸಮಾಗಮ

ಸಾಯಂಕಾಲ ನಾಲ್ಕು ತಾಸಿನ ಸಮಯ. ನಂದೂಲಾಲ ಸೇಟನು ಹುಂಡಿ ಬಂಡಸಾಲೆಯ ಆಫೀಸು ಕೋಣೆಯಲ್ಲಿ ಗುಮಾಸ್ತೆಯರು ಬರೆದ ಲೆಕ್ಕವನ್ನು ಕೂಡಿಸಿ ನಗದಿ ಶಿಲಕನ್ನು ತಾಳೆ ನೋಡುತ್ತಿದ್ದನು. ಅಷ್ಟರಲ್ಲಿ ಒಂದು ವಿಕ್ಟೋರಿಯವು ಬಂಡಸಾಲೆಯ ಎದುರಿನಲ್ಲಿ ನಿಂತಿತು. ಇಬ್ಬರು ವ್ಯಕ್ತಿಗಳು ಅದರಿಂದ ಇಳಿದು ಆಫೀಸು ಕೋಣೆಯೊಳಗೆ ಪ್ರವೇಶಮಾಡಿದರು. ನಂದೂಲಾಲಸೇಟನು "ರಾಮರಾಮ" ಮಾಡಿ ಅವರಿಬ್ಬರನ್ನೂ ತನ್ನ ಬಳಿಯಲ್ಲೇ ರತ್ನಗಂಬಳಿಯ ಮೇಲೆ ಕೂರಿಸಿದನು. ಬಂದವರಲ್ಲಿ ಒಬ್ಬನು ವೃದ್ಧನು, ಇನ್ನೊಬ್ಬನು ತರುಣನು.

**ವೃದ್ಧ**:—ಸೇಟಜೀ! ನನ್ನ ಹೆಸರು ಪೋಪಟಲಾಲ. ಈತನು ನನ್ನ ಮಗ ವಿಮಲಾಲ. ನಾವಿಬ್ಬರೂ ಕಾಥಿಯಾವಾಡದವರು. ನಾನು ಕೆಲವು ದಿನಗಳಲ್ಲಿ ದಕ್ಷಿಣ ದೇಶಕ್ಕೆ ಹೋಗಲಿರುವೆನು. ಈ ಮಗನನ್ನು ಪೂನೆಯಲ್ಲಿ ಕೆಲವು ಕಾಲವಿರಿಸಬೇಕಾಗಿದೆ. ಅವನ ಖರ್ಚಿಗೆ ಬೇಕಾದಾಗ ಹಣ ಸಿಗುವಂತೆ ನಿಮ್ಮೊಡನೆ ಹಣವನ್ನು ಚಾಲತಿ ಠೇವಣಾತಿಯಾಗಿರಿಸಲು ಸಾಧ್ಯವುಂಟೆ? ನಮ್ಮ ಮಿತ್ರರೊಬ್ಬರು ಈ ಬಂಡಸಾಲೆಯ ಹೆಸರನ್ನು ಹೇಳಿದ ಕಾರಣ ನಾವು ಇಲ್ಲಿಗೆ ಬಂದೆವು.

**ನಂದೂ**:—ಆ ಮಿತ್ರರು ಯಾರೊ?

**ಪೋಪಟ**:—ಷಂಷೇರ ಜಂಗ ಬಹದ್ದೂರರು.

**ನಂದೂ**:—ನೀವು ಜಂಗ ಬಹದ್ದೂರರ ಮಿತ್ರರೇ? ಹಾಗಿದ್ದರೆ ಚೆನ್ನಾಯಿತು. ಅವರ ಮಿತ್ರರೆಂದರೆ ನಮ್ಮ ಮಿತ್ರರೆಂದೇ ಭಾವಿಸಬೇಕು. ನೀವು ಎಷ್ಟು ಹಣ ಇರಿಸುವಿರಿ?

**ಪೋಪಟ**:—ಐದು ಲಕ್ಷ ರೂಪಾಯಿ. ಈ ಯುವಕನು ಜಂಗ ಬಹದ್ದೂರರ ಉಮದಾಬಾಗ ಬಂಗಲೆಯ ಸಮೀಪವೇ ಒಂದು ಮನೆಯಲ್ಲಿ ವಾಸಮಾಡುತ್ತಿರುವನು. ಈ ಹಣ ನಿಮ್ಮಲ್ಲಿರಲಿ. ನಾನು ಒಂದೆರಡು ದಿನಗಳಲ್ಲಿಯೇ ಇಲ್ಲಿಂದ ತೆರಳಲಿರುವೆನು.

**ನಂದೂ:**—"ಪರ್ವಾ ಇಲ್ಲ. ನಿಮ್ಮ ಮಗನೆಂದರೆ ನಮ್ಮ ಮಗನಂತೆ ನೋಡಿಯೇವು. ಯಾವಾಗ ಬೇಕಿದ್ದರೂ ಅವನು ಹಣ ನಮ್ಮಿಂದ ಪಡೆಯಬಹುದು. ಈ 'ಚೆಕ್ಕ' ಪುಸ್ತಕ ಒಂದು ತೆಗೆದುಕೊಳ್ಳಿರಿ," ಎಂದು ಹೇಳಿ, ಪೋಪಟಲಾಲನು ತಂದ ನೋಟುಗಳನ್ನು ಎಣಿಸಿ, ತನ್ನ ಪಕ್ಕದಲ್ಲಿರುವ ಭದ್ರವಾದ ಕೋಣೆಯ ಬಾಗಿಲನ್ನು ತೆರೆದು, ಅವನ್ನು ಕಬ್ಬಿಣದ ಪೆಟ್ಟಿಗೆಯೊಳಗೆ ಇರಿಸಿ ಹೊರಗೆ ಬಂದನು. ಪೋಪಟಲಾಲನೂ ವಿಮದಲಾಲನೂ ತಮ್ಮ ಮನೆಗೆ ಹೋಗಲು ಎದ್ದರು. ನಂದೂಲಾಲನು 'ಪಾನಸುಪಾರಿ'ಯನ್ನು ತರಿಸಿ, ಅವರಿಗೆ ಕೊಟ್ಟು ಸುಗಂಧದ ಅತ್ತರನ್ನು ಅವರ ಮೈ ಮೇಲೆ ಚಿಮುಕಿಸಿದನು. ಅನಂತರ ಅವರಿಬ್ಬರೂ 'ರಾಮ ರಾಮ' ಮಾಡಿ ವಿಕ್ಟೋರಿಯವನ್ನು ಹತ್ತಲಿಕ್ಕಿದ್ದರು. ಅಷ್ಟರಲ್ಲಿ ಪೋಪಟಲಾಲನು ಏನೊ ನೆನಪಿಗೆ ಬಂದಂತೆ ನಟಿಸಿ "ಮಗೂ! ನೀನು ವಿಕ್ಟೋರಿಯದಲ್ಲಿ ಮನೆಗೆ ಹೋಗು. ನಾನೊಬ್ಬ ಸ್ನೇಹಿತನನ್ನು ಕಂಡು ಇನ್ನೆರಡು ತಾಸುಗಳಲ್ಲಿ ಮನೆಯನ್ನು ಸೇರುವೆನು" ಎಂದನು. ವಿಮದಲಾಲನಿಗೂ ತನ್ನ ಹೊಸ ಪೋಷಾಕದಲ್ಲಿ ಪೂನೆಯ ಬೀದಿಗಳನ್ನು ತಿರುಗಬೇಕೆಂದು ಮನಸ್ಸಾಯಿತು. ಹೀಗೆ ಅವರಿಬ್ಬರು ವಿಕ್ಟೋರಿಯವನ್ನು ಕಳುಹಿಸಿ ಒಬ್ಬೊಬ್ಬರು ಒಂದೊಂದು ದಿಕ್ಕನ್ನು ಹಿಡಿದರು. ವಿಮದಲಾಲನು ಕೈಯಲ್ಲಿರುವ ಬೆತ್ತವನ್ನು ತಿರುಗಿಸುತ್ತ ದೊಡ್ಡ ರಸ್ತೆಯಲ್ಲಿ ಹೋಗುತ್ತಿರುವಾಗ ಯಾರೊ ಅವನ ಹೆಗಲ ಮೇಲೆ ಕೈಯನ್ನು ಇಟ್ಟು ಗಟ್ಟಿಯಾಗಿ ನಗುತ್ತ:—

"ಎಲೊ ಭಿಕಾಜಿ! ಗಂಗಾರಾಮನ ಪರಿಚಯ ಸಿಗಲಿಲ್ಲವೇ" ಎಂದನು. ವಿಮದಲಾಲನು ಮುಖ ತಿರುಗಿಸಿ, ತನ್ನನ್ನು ಯಾರೊ ಗೇಲಿ ಮಾಡುವಂತಿದ್ದಾರೆಂದು ನೆನಸಿ, ಆತನ ಕೈಯನ್ನು ತನ್ನ ಹೆಗಲಿನಿಂದ ಕಿತ್ತೆಸೆದನು. ಗಂಗಾರಾಮನು ಪುನಃ ಅವನ ಬೆನ್ನು ತಟ್ಟಿ "ಏನೊ ಭಿಕಾಜಿ! ಈ ದಿನ ಮದುಮಗನಂತೆ ತೋರುತ್ತೀ. ಒಳ್ಳೆ 'ಫೆಶನ್'ನಲ್ಲಿದ್ದಿ! ನನ್ನನ್ನು ಮರೆತು ಬಿಟ್ಟೆಯಾ?" ಎಂದು ಇನ್ನೊಮ್ಮೆ ಕೇಳಿದನು.

**ವಿಮುದ:**—ಎಲೊ ನೀನಾರು? ನಿನ್ನ ಪರಿಚಯವು ನನಗಿಲ್ಲ. ಏನೊ ತಪ್ಪು ಗ್ರಹಿಕೆಯಿಂದಿರುವೆ? ಯಾರನ್ನು ಉದ್ದೇಶಿಸಿ ನೀನು ಕರೆದೆ?

**ಗಂಗಾರಾಮು:**—ಎಲೊ ನಿನ್ನ ಆಟವೆಲ್ಲ ನನ್ನೊಡನೆ ಹಿಡಿಯು ಲಾರದು. ಈಗೇನು ಹೊಸ ಪೋಷಾಕವನ್ನು ಧರಿಸಿದೊಡನೆ ನಿನ್ನನ್ನು ಗುರುತಿಸಲಾರೆನೆಂದು ಬಗೆದೆಯಾ? ನೀನು ಈಗ ಹೊಸ ಛಿಕಾಜಿ ಯಾದರೂ ನಾನು ಹಳೇ ಗಂಗಾರಾಮುನೇ! ಈ ನೂತನ ಪೋಷಾಕು ಎಲ್ಲಿಂದ ದೊರೆಯಿತು? ಯಾವ ದೊಡ್ಡ ಮನೆಯಲ್ಲಿ ದರೋಡೆ ಮಾಡಿದೆ? ನಿನ್ನನ್ನು ಕಾಣದೆ ಕೆಲವು ದಿನಗಳಾದವು. ಎಲ್ಲಿ ಕಣ್ಮರೆ ಯಾದೆಯೆಂದು ಪತ್ತೆ ಸಿಗಲಿಲ್ಲ. ನಿನಗೆ ಎಲ್ಲಿ ಅಪಾಯ ಬಂತೊ ಎಂದು ಬೀದಿಬೀದಿಗಳಲ್ಲಿ ಅಲೆದು ನಿನ್ನನ್ನು ಹಗಲು ರಾತ್ರೆ ಹುಡುಕು ತಿದ್ದೆ.

ವಿಮುದಲಾಲನು ಈ ಗಂಗಾರಾಮುನ ಕೈಯಿಂದ ತಾನು ಇನ್ನು ತಪ್ಪಿಸಿಕೊಳ್ಳಲಾರೆನೆಂದು ದಿಗಿಲುಗೊಂಡನು. ಆದರೂ ಸಭ್ಯ ಪೋಷಾ ಕಿನ ತಾನು ಇಂಥ ತಿರುಕನೊಡನೆ ಬಹಿರಂಗವಾಗಿ ಬೀದಿಯಲ್ಲಿ ಸಲ್ಲಾಪ ನಡೆಸುವುದು ಅನುಚಿತವೆಂದು ತಿಳಿದನು. ಇವನ ಬಾಯಿ ಮುಚ್ಚಿಸುವ ಉಪಾಯ ಕಾಣಬೇಕೆಂದು ಯುಕ್ತಿ ತೆಗೆದು

**ವಿಮುದ:**—ಗಂಗಾರಾಮು! ಸುಮ್ಮನಿರು! ಇಗೊ! ಇಲ್ಲಿ ಮರ ಗಳ ತೋಪು ಇದೆ. ಅಲ್ಲಿ ಹೋಗುವನಕ ಸುಮ್ಮನಿರು. ಆ ಮೇಲೆ ನಿನ್ನ ಪುರಾಣ ಬಿಚ್ಚು.

**ಗಂಗಾ:**—ಹೂಂ! ಹಾಗೆನ್ನು! ಹೊಸ ವೇಷ ಬಂದೊಡನೆ ಹಳೆ ಗೆಳೆಯನನ್ನು ದುರ್ಲಕ್ಷ್ಯಮಾಡಬೇಡ. ಗುಟ್ಟಿನಿಂದ ಮಾತಾಡುವೆನೆಂದು ಮೊದಲೆ ಹೇಳಬಾರದಿತ್ತೆ? ಇಷ್ಟೆಲ್ಲ ದ್ರಾವಿಡ ಪ್ರಾಣಾಯಾಮವೇಕೆ? ಮುಂದೆ ಹೋಗು, ಹಿಂದೆಯೆ ಬರುವೆನು.

ಇಬ್ಬರೂ ತೋಪಿನ ನೆರಳನ್ನು ಸೇರಿದರು. ಈಗ ಇವರಿಬ್ಬರಿಗೂ ಪರಿಚಯವು ಹೇಗಾಯಿತೆಂದು ಹೇಳೋಣ. ಈ ಗಂಗಾರಾಮುನೆಂದರೆ ಹಿಂದೆ ನಿಮ್ಮ ಪರಿಚಿತನಾದ ಖಾನಾವಳಿಯ ಗಂಗಾರಾಮುನು.

ಮುತ್ತಿನ ಸಾವುಕಾರನ ಕೊಲೆಯ ಸಂಬಂಧ ಇವನನ್ನು ಪೋಲಿಸು ಠಾಣ್ಯಕ್ಕೆ ಕೊಂಡುಹೋದರೆಂದು ಮಾತ್ರ ನಾವು ಓಂದೆ ತಿಳಿಸಿದ್ದೆವು. ಅಲ್ಲಿ ಗಂಗಾರಾಮನೂ, ಅವನ ಹೆಂಡತಿಯೂ ಸಾವುಕಾರನನ್ನು ಕೊಲೆ ಮಾಡಿದುದಾಗಿ ಕ್ರಿಮಿನಲ್ ಮೊಕದ್ದಮೆಯು ನಡೆಯಿತು. ಗಂಗಾರಾಮನು ಯಾವನೊ ಒಬ್ಬನ ಸಾಕ್ಷಿಯ ನಿಮಿತ್ತ ಶಿಕ್ಷೆಯಿಂದ ತಪ್ಪಿಸಿಕೊಂಡನು. ಅವನ ಹೆಂಡತಿ ಪಿಸ್ತೂಲಿನ ಏಟಿಗೆ ಅಂದೇ ಪ್ರಾಣವನ್ನು ಅರ್ಪಿಸಿದ್ದಳು. ಗಂಗಾರಾಮನು ಅಲ್ಲಿಂದ ತಲೆ ತಪ್ಪಿಸಿಕೊಂಡು ಹೋಗಿ, ಪೂನೆಗೆ ಬಂದು, ಒಂದು ಚಿಕ್ಕ ಮನೆಯನ್ನು ಬಾಡಿಗೆಗೆ ಮಾಡಿಕೊಂಡು ಅಲ್ಲಿ ಜೀವಿಸಿದ್ದನು. ಅಲ್ಲಿ ಈ ಭಿಕಾಜಿಯ ಪರಿಚಯವು ಗಂಗಾರಾಮನಿಗೆ ಆಯಿತು. ಭಿಕಾಜಿಯು ತಿರುಕುಳಿಯಾಗಿ ಹಗಲಲ್ಲಿ ಜನರ ಕಿಸೆಯಿಂದ ಕದಿಯುವುದು, ರಾತ್ರೆ ಗಂಗಾರಾಮನೊಂದಿಗೆ ಜುಗಾರಿನ ಅಂಗಡಿಗಳಲ್ಲಿ ಸೇರಿ ಜುಗಾರಾಡುವುದು, ಮುಂತಾದುದರಲ್ಲಿ ಪ್ರವೀಣನಾದನು. ಭಿಕಾಜಿಯು ಗಂಗಾರಾಮನ ಮನೆಯಲ್ಲಿಯೇ ಊಟಮಾಡುತಿದ್ದನು. ಈ ಮೈತ್ರಿಯಿಂದ ಅವರು ತಮ್ಮ ದುಷ್ಟವೃತ್ತಿಯಿಂದ ಹೇಗೂ ಜೀವನ ಸಾಗಿಸುತಿದ್ದರು. ಅಲ್ಲಿಂದಲೆ ಗಫೂರನು ಭಿಕಾಜಿಯನ್ನು ಹಿಡಿದುತಂದು ಜಂಗಬಹದ್ದೂರನ ಮುಂದೆ ನಿಲಿಸಿದ್ದನು.

ಗಂಗಾರಾಮನೂ, ವಿಮದಲಾಲ ಉರ್ಫ ಭಿಕಾಜಿಯೂ ಈಗ ಮರಗಳ ತೋಪಿನ ಕಡೆ ಹೋದರು. ಆಗ ಮೂರುಸಂಜೆಯಾಗುತ್ತ ಬಂದುದರಿಂದ ಯಾರ ಕಣ್ಣಿಗೂ ಬೀಳದೆ ನಿರಾತಂಕವಾಗಿ ಇವರು ಮಾತಾನಾಡಬಹುದಿತ್ತು. ಅವರಿಬ್ಬರೂ ಒಂದು ಕಟ್ಟೆಯ ಹಿಂಬದಿಯಲ್ಲಿ ಕುಳಿತುಕೊಂಡರು. ಗಂಗಾರಾಮನು ಭಿಕಾಜಿಯ ಪೋಷಾಕನ್ನು ಮುಟ್ಟಿನೋಡುತ್ತ,

"ಭಿಕಾಜಿ! ನನ್ನನ್ನು ಮೋಸಗೊಳಿಸಲು ನೋಡಿದೆಯಾ? ಈ ಗಂಗಾರಾಮನನ್ನು ಅಷ್ಟು ಬೇಗನೆ ಮರೆತಂತೆ ನಟಿಸಿದೆ. ಆದರೆ ನನ್ನ ಕಣ್ಣುಗಳು ಇನ್ನೂ ಅಷ್ಟು ಮುದಿಯಾಗಿಲ್ಲ. ಅದಿರಲಿ. ಈ ಶೋಕಿನ ಪೋಷಾಕು ಎಲ್ಲಿಂದ? ಓಹೊ, ಕಿಶೆಯಲ್ಲಿ ಸಿಗರೇಟಿನ ಪೊಟ್ಟಣವಿದೆ. ಕೈಯಲ್ಲಿ ಕಾಸಿಲ್ಲದೆ ಈಗ ಮೂರು ದಿನಗಳಿಂದಲೂ ಬಂಗಿ ಸೇದದೆ

ಹುಚ್ಚನಂತಾಗಿದ್ದೇನೆ.” ಎಂದು ಭಿಕಾಜಿಯ ಕಿಸೆಯಲ್ಲಿಂದ ಪೊಟ್ಟಣ ವನ್ನು ತೆಗೆದು, ಕಡ್ಡಿ ಉರಿಸಿ, ಅದನ್ನು ಸೇದುತ್ತಾ “ಒಳ್ಳೆ ಸಿಗರೇಟು, ಸುವಾಸನೆ ಇದೆ, ಇದೆಲ್ಲ ನಿನಗೆ ಹೇಗೆ ದೊರೆಯಿತು, ಭಿಕಾಜೀ!”

**ಭಿಕಾಜಿ**:—ಗಂಗಾರಾಮು! ಇಗೊ, ನಾನು ಈಗ ಭಿಕಾಜಿಯಲ್ಲ, ವಿಮುದಲಾಲ.

**ಗಂಗಾ**:—ವಿಮೇ ದಲಾಲನೇ! ಹಾ! ಹಾ! ಹಾ! ವಿಮೇ ದಲಾಲ! ಬುದ್ಧಿವಂತಿಕೆ ಎಂದರೆ ಇದೀಗ!

**ಭಿಕಾಜಿ**:—ಎಂಥ ಬುದ್ಧಿವಂತಿಕೆ!

**ಗಂಗಾ**:—ಒಂದು ಕಡೆ ವಿಮೆ ದಲಾಲನಾಗುವುದು; ಇನ್ನೊಂದು ಕಡೆ ಮನೆಗಳಿಗೆ ಬೆಂಕಿಹಾಕಿ ದರೋಡೆ ಮಾಡುವುದು.—ಅಂದರೆ ಎರಡೂ ಕಡೆಯಿಂದ ಹಣ ಸಂಪಾದನೆಯಾಗುತ್ತದಲ್ಲ! ಈ ಯುಕ್ತಿ ಯನ್ನು ಎಲ್ಲಿಂದ ಕಲಿತೆ? ಇದು ನಿನ್ನ ಸ್ವಂತ ಆಲೋಚನೆಯೋ?

**ಭಿಕಾಜಿ**:—ಗಂಗಾರಾಮು! ದುಡುಕಬೇಡ, ನಾನು ವಿಮೇ ದಲಾಲನಲ್ಲ, ನನ್ನ ಹೆಸರು ವಿಮುದಲಾಲ.

**ಗಂಗಾ**:—(ನಸುನಗುತ್ತ) ಹೂಂ! ಹೂಂ! ಅದೇನು ನಿನಗೀಗ ಹೊಸ ಜನ್ಮ ಬಂತೇ?

**ಭಿಕಾಜಿ**:-ಹೊಸ ತಂದೆ ಸಿಕ್ಕಿದ ಮೇಲೆ ಹೊಸ ಜನ್ಮವಲ್ಲದೆ ಮತ್ತೆ?

**ಗಂಗಾ**:—ಹೊಸ ತಂದೆ ಎಂದೆಯಾ? ಆ ನೂತನ ಪ್ರಾಣಿ ಯಾವುದು? ಅದಕ್ಕೆ ಕಾಲುಗಳೆಷ್ಟು?

**ಭಿಕಾಜಿ**:—ಇಗೊ! ಹಾಗೆಲ್ಲ ನನ್ನ ಹೊಸ ತಂದೆಯ ದೂಷಣೆ ಮಾಡಬೇಡ. ಅವನಿಂದಲೇ ಈಗ ನನಗೆ ಹೊಟ್ಟೆತುಂಬಾ ತಿಂಡಿಯೂ, ಈ ಪೋಷಾಕೂ ಸಿಗುತ್ತಿವೆ. ಅವನು ದೊಡ್ಡ ಧನಿಕನು. ಪೋಪಟ ಲಾಲ ಎಂಬವನೊಬ್ಬನಂತೆ! ನನ್ನಂತೆಯೆ ತಿರುಕುಳಿ—ಆತನನ್ನು ಅಪ್ಪ ನೆಂದು ನಾನು ಕರೆಯಬೇಕೆಂದು ಬೋಧಿಸಿ, ನನಗೂ, ಆತನಿಗೂ ಹೇರಳ ಧನವನ್ನು ಒಬ್ಬ ಮಹಾಶಯನು ಕೊಟ್ಟಿರುವನು.

ಗಂಗಾರಾಮನಿಗೆ ಈ ಮಾತನ್ನು ಕೇಳಿದೊಡನೆ ಬಾಯಿಯಲ್ಲಿ ನೀರು ಒಸರಿತು. ಆತನು ಕಣ್ಣನ್ನು ಬೇಗಬೇಗನೆ ಮುಚ್ಚಿತೆರೆಯುತ್ತ ಇನ್ನೊಂದು ಸಿಗರೇಟನ್ನು ಹಚ್ಚಿ "ಪಾಪಿ! ಇಂಥ ಕಾಲದಲ್ಲಿ ನಿನಗೆ ನನ್ನ ಮರವೆಯಾಯಿತೆ? ನಿನಗೊಬ್ಬ ಅಜ್ಜ ಖಟಪಟಲಾಲನು ಇದ್ದಾನೆಂದು ಹೇಳಿ ಇನ್ನಷ್ಟು ಹಣ ಸುಲಿಯ ಬಾರದಿತ್ತೆ?"

**ಭಿಕಾಜಿ:**—ಛಿ! ಹುಚ್ಚನಂತೆ ಆಡಬೇಡ. ಬಾಯಿಗೆ ಬಂದಂತೆ ಆಡಿದರೆ, ನಿನ್ನ ಹಲ್ಲೆಲ್ಲ ಉದುರಿ ಹೋದೀತು, ಸೊಂಟ ಮುರಿದು ಹೋದೀತು, ನೋಡಿಕೊ!

**ಗಂಗಾ:**—ಹಾಗೆ ಮಾಡಿದರೆ ಅಜ್ಜನ ಲಕ್ಷಣಗಳು ನನ್ನಲ್ಲಿ ಸಂಪೂರ್ಣ ಕಾಣಿಸಿಕೊಳ್ಳುತ್ತಿದ್ದುವಲ್ಲ!

**ಭಿಕಾಜಿ:**—"ಇಗೊ ನನ್ನನ್ನು ಬರಿದೆ ಕೆಣಕಬೇಡ. ನನ್ನ ಸಾಕುತಂದೆಯನ್ನು ಕುರಿತು ಕೆಟ್ಟ ಮಾತು ಹೇಳಿದರೆ—ನನ್ನ ಕಿಸೆಯಲ್ಲಿ ಏನಿದೆ ನೋಡಿಕೊ!" ಎಂದು ಒಂದು ಚಿಕ್ಕ ಪಿಸ್ತೂಲನ್ನು ತೋರಿಸಿದನು.

**ಗಂಗಾ:**—ಓಹೋ ಏನೇನು? ಅಷ್ಟು ಹಾರಬೇಡ. ಧೊಪ್ಪನೆ ಕೆಳಕ್ಕೆ ಬೀಳುವೆ. ನಿನ್ನ ಪಿಸ್ತೂಲಿನ ಗುಂಡು ಹಾರುವಷ್ಟರಲ್ಲಿ ಸೊಂಟದಲ್ಲಿರುವ ಈ ಕತ್ತಿ ನಿನ್ನ ಕರುಳನ್ನು ಬಗಿದು ಬಿಟ್ಟೀತು, ನೋಡಿಕೊ.

ಭಿಕಾಜಿಯು ಗಂಗಾರಾಮನನ್ನು ಬೆದರಿಸಿ ದೂರಮಾಡಿಕೊಳ್ಳಲು ಸಾಧ್ಯವಿಲ್ಲೆಂದು ಈಗ ಅರಿತನು. ಇನ್ನು ಆತನಿಗೆ ಉಬ್ಬೇರಿಸಿ ಲಂಚ ರುಷುವತ್ತಿನಿಂದಲಾದರೂ ಸುಮ್ಮನಿರಿಸಬೇಕು. ಇಲ್ಲವಾದರೆ ತನ್ನ ಪೂರ್ವಕಥೆಯನ್ನು ಬಯಲಿಗಿಟ್ಟು, ತನ್ನ ಸುಖಜೀವನಕ್ಕೆ ಅಡ್ಡಿಯಾದಾನು ಎಂದು ನಿಶ್ಚಯಿಸಿದನು. ಮತ್ತೆ ಫಕ್ಕನೆ ನಕ್ಕು, ಗಂಗಾರಾಮನ ಬೆನ್ನು ತಟ್ಟಿ "ಗಂಗಾರಾಮ! ನಾನು ನಿನ್ನೊಡನೆ ತಮಾಷೆಗಾಗಿ ಅಂದ ಮಾತುಳನ್ನು ನಿಜವೆಂದು ನಂಬಿದೆಯಾ!"

ಗಂಗಾರಾಮನು ಭಿಕಾಜಿಯನ್ನೆ ಎವೆಯಿಕ್ಕದೆ ದಿಟ್ಟಿಸುತ್ತ ಆತನ ಇಂಗಿತವನ್ನು ಅರಿತನು. ಇದೇ ಸಮಯದಲ್ಲಿ ಆತನನ್ನು ಬಿಗಿಯಾಗಿ ಹಿಡಿದುಕೊಳ್ಳಬೇಕೆಂದು ಯೋಚಿಸಿ "ಹಾ! ಹಾ! ಹಾ! ಹಾಗೆನ್ನು,

ನಿನ್ನ ಹೊಸ ಸುಖದಲ್ಲಿ ಹಳೆ ಗೆಳೆಯನನ್ನು ಮರೆತೆ ಎಂದು ಒಮ್ಮೆಗೆ ನನಗೆ ಕಂಡಿತು.''

**ಭಿಕಾಜಿ:**—(ಗಂಗಾರಾಮನ ಭುಜವನ್ನು ಸವರಿ) ಗಂಗಾರಾಮ! ನಿನ್ನನ್ನು ನಾನು ಮರೆಯಲಾಪೆನೆ? ಇಗೊ! ನಿನಗೂ ಈಗ ನಡು ಪ್ರಾಯ ದಾಟಿ ಹೋಗುತ್ತ ಬಂತು. ಮುಂದೆ ನೀನು ಕಷ್ಟಕ್ಕೆ ಒಳ ಗಾಗದಂತೆ ನೋಡಿಕೊಳ್ಳಬೇಕಾಗುವುದು. ನಿನಗೆ ನಿಶ್ಚಿಂತೆಯಿಂದ ಜೀವನವಾದುವಂತೆ ತಿಂಗಳಿಗೆ 50 ರೂಪಾಯಿ ನಿನ್ನ ಬಿಡಾರಕ್ಕೆ ಕಳು ಹಿಸಿಕೊಡುವೆನು. ಆದರೆ ಇಷ್ಟೊಂದು ದಯಮಾಡು. ನನ್ನನ್ನು ದಾರಿಯಲ್ಲಿ ಎಲ್ಲಾದರೂ ಕಂಡರೆ ನನ್ನ ಪರಿಚಯವಿದ್ದಂತೆ ಕಾಣಿಸಿ ಕೊಳ್ಳಬೇಡ. ಅದರಿಂದ ನಮ್ಮಿಬ್ಬರ ಸುಖಜೀವನಕ್ಕೂ ಹಾನಿ ಯುಂಟಾಗುವುದು. ಅಷ್ಟೆ ಅಲ್ಲ, ನಮ್ಮ ಪೂರ್ವದ ದುರಾಚಾರಗಳೆಲ್ಲ ಬಯಲಿಗೆ ಬಂದು ನಮ್ಮ ಸ್ವಾತಂತ್ರ್ಯಕ್ಕೂ ಅಪಾಯ ಬಂದೀತು. ನೀನೆ ನೋಡು.

ಗಂಗಾರಾಮನಿಗೆ ಈ ಮಾತು ನಿಜವಾಗಿ ಕಂಡಿತು. ಈ ವಿಮದ ಲಾಲನು ಈ ಬಗೆಯಲ್ಲಿ ಸುಖಹೊಂದುವಾಗ ತಾನೂ ತನ್ನ ವೃದ್ಧಾಪ್ಯದ ಕಾಲಕ್ಕೆ ನಿರಾಯಾಸವಾಗಿ ಸಿಗುವ ಈ ಪೆನ್ಶನನ್ನು ಕಳೆದುಕೊಳ್ಳುವುದು ಯುಕ್ತವಲ್ಲ ಎಂದು ತೋರಿತು. ಆದರೆ ಭಿಕಾಜಿಯೊಡನೆ ಇನ್ನಷ್ಟು ಚಾಕಸಿಮಾಡಿದರೆ ಈ ಮಾಸಾಶನವನ್ನು ತಿಂಗಳಿಗೆ 100 ರೂಪಾಯಿ ಯಷ್ಟಕ್ಕಾದರೂ ಏರಿಸಲು ಸಾಧ್ಯವಿದೆ ಎಂದು ನೆನಸಿ, ದೀರ್ಘಾಲೋಚನೆ ಮಾಡುವಂತೆ ತುಸು ಸುಮ್ಮನಿದ್ದು "ಭಿಕಾಜಿ! ನೀನು ಹೇಳಿದ್ದು ಸರಿ. ಆದರೆ ನೀನೆ ನೋಡು. ನನ್ನ ರತ್ನಮ್ಮನು ಮಡಿದ ಮೇಲೆ—(ಕೃತಕ ಆರ್ತಸ್ವರದಿಂದ) ಒಂದೇ ದಿನವಾದರೂ ಸರಿಯಾದ ಊಟ ನನಗೆ ಸಿಕ್ಕಿಲ್ಲ. ಈಗ ಮೈಯ ಚೇತನವು ಕಡಿಮೆಯಾದಾಗ-ನಿನ್ನ ಸಹಾಯ ದಿಂದಲಾದರೂ ಕಳವು, ಜುಗಾರು ಮುಂತಾದುವುಗಳಿಂದ ದಿನ ಸಾಗಿಸ ಬೇಕೆಂದು ನಿನ್ನನ್ನು ಸಾಕಿದೆನು. ನೀನಂತು ಈಗ ನನ್ನ ಕೈತಪ್ಪಿ ಹೋದೆ. (ಕಣ್ಣೊರಸಿಕೊಂಡು) ನೀನು ದೊಡ್ಡ ಮನುಷ್ಯನ ಮರಿಯನ್ನು ಸೇರಿರುವೆ. ನನಗೆ ತಿಂಗಳಿಗೆ 100 ರೂಪಾಯಿ ಸಿಗುವಂತೆಯಾದರೂ ಮಾಡು. ಇಲ್ಲವಾದರೆ—''

**ಭಿಕಾಜಿ**:—ಇಲ್ಲವಾದರೆ ಏನು!

**ಗಂಗಾ**:—ಹೊಸ ತಂದೆ ಸಿಕ್ಕಿದನೆಂದು ನನ್ನ ಭಿಕಾಜಿಯು ಹಳೆ ಅಜ್ಜನನ್ನು ಮರೆತನೆಂದು ತಿಳಿಯಬೇಕಾಗುವುದು. ಹಾಗೆ ಮಾಡಿದರೆ ಈ ಹಳೆ ಅಜ್ಜನು ಮಾತ್ರ ತನ್ನ ಮುದ್ದು ಮೊಮ್ಮಗನನ್ನು ಎಂದಿಗೂ ಮರೆಯುವನೆಂದು ತಿಳಿಯುವೆಯಾ?

**ಭಿಕಾಜಿ**:—ಅದು ಗೊತ್ತಾಗುವುದು ನನ್ನನ್ನು ದಾರಿಯಲ್ಲಿ ಕಂಡಾಗಲೆಲ್ಲ ನಿನ್ನ ಪರಿಚಯುವನ್ನು ವ್ಯಕ್ತಪಡಿಸುವುದರಿಂದಲೇ?

**ಗಂಗಾ**:—"ಛೆ! ಛೆ! ನಾನು ಅಂಥ ಮೂರ್ಖನಲ್ಲ. ನಿನಗೆ ಆ ಸಾಕು ತಂದೆಯ ಊಟಕ್ಕಿಂತಲೂ ಶಾಶ್ವತವಾದ ಊಟವನ್ನು ಸಿದ್ಧ ಮಾಡಿಸಿ ಕೊಡುವೆನು." ಎಂದು ಭಿಕಾಜಿಯ ಮೋರೆಯನ್ನು ನೋಡದೆ ಸಿಗರೇಟಿನ ಹೊಗೆಯನ್ನೆ ನೋಡುತ್ತ ನಿಧಾನವಾಗಿ ಹೇಳಿದನು.

**ಭಿಕಾಜಿ**:—"ನಿನ್ನ ಮಾತಿನ ಅರ್ಥವಾಗಲಿಲ್ಲ!"

**ಗಂಗಾ**:—"ನಿನ್ನ ಬೆನ್ನ ಹಿಂದೆ ಹತ್ತೆಂಟು ಜವಾನರು ಸಾರ್ವದಾ ಇದ್ದು ಸರಕಾರದ ಖರ್ಚಿನಿಂದ ಸಿಗುವ ಅನ್ನವು ಶಾಶ್ವತವಾಗುವಂತೆ ಮಾಡುವೆನು" ಎಂದು ಇನ್ನೊಮ್ಮೆ ಸಿಗರೇಟಿನ ಒಂದು ದಮ್ಮು ಗುಡು ಗುಡಿಯನ್ನು ಸೇದಿದಂತೆ ತನ್ನ ಮುಷ್ಟಿಯಿಂದ ಬಿಗಿದು ಸೇದಿದನು.

**ಭಿಕಾಜಿ**:—"ಹಾಗೇಂದರೆ ನನ್ನನ್ನು ಬಂದೀಖಾನೆಯ ಕಷ್ಟಕ್ಕೆ ಒಳಪಡಿಸುವೆ ಎನ್ನುವೆಯಾ?" ಎಂದು ಮೆಲ್ಲಗೆ ಕಿಸೆಯ ಪಿಸ್ತೂಲಿನ ಕಡೆಗೆ ಕೈಚಾಚುತಿದ್ದನು. ಗಂಗಾರಾಮನು ಸಿಗರೇಟನ್ನು ಸೇದಿದಂತೆ ತೋರಿದರೂ ಆತನ ಕಣ್ಣು ಭಿಕಾಜಿಯ ಕೈಯ ಕಡೆಗೂ ಆತನ ಮನಸ್ಸಿನೊಳಗೂ ಇಣಿಕಿ ಇಣಿಕಿ ನೋಡುವಂತಿತ್ತು. ಭಿಕಾಜಿಯ ಕೈ ಕಿಸೆಯ ಕಡೆಗೆ ಹೋಗುತ್ತಿರುವುದನ್ನು ಕಂಡು ಗಂಗಾರಾಮನು ತನ್ನ ಎಡಗೈಯಿಂದ ಸೋಟದ ಚೂರಿಯನ್ನು ಒರೆಯಿಂದ ಮೆಲ್ಲಗೆ ಹೊರಸೆಳೆದನು. ಭಿಕಾಜಿಯು ತನ್ನ ಪೌರುಷ ವರ್ತನವು ಈತನೊಡನೆ ಸಲ್ಲದು, ಈತನನ್ನು ಕಾಲಕ್ರಮದಲ್ಲಿ ಯುಕ್ತಿಯ ಗೂಡಿನಲ್ಲೆ (ಪೇಚಿನಲ್ಲಿ) ಸಿಕ್ಕಿಸಬೇಕೆಂದು ಯೋಚಿಸಿ, ಕಿಸೆಯಿಂದ ಸಿಗರೇಟು ಹುಡುಕಿದಂತೆ ನಟಿಸಿ ಒಂದು ಸಿಗರೇಟನ್ನು ಹಚ್ಚಿ—

**ಭಿಕಾಜಿ:**— ನನಗೆ ಬಂದೀವಾಸದ ಸುಖವನ್ನು ಕೊಡುವುದು ನಿನಗೆ ಒಗ್ಗೀತೇ?

**ಗಂಗಾ:**— ಬಂದೀವಾಸದಲ್ಲಿ ಸುಖವೊ ಕಷ್ಟವೊ ಎಂಬುದು ಅವರವರ ಮನಸ್ಸಿನ ಸ್ಥಿತಿಯ ಮೇಲೆ ಹೊಂದಿರುವುದು. ಎಷ್ಟೋ ಜನರು ಬಂದಿಖಾನೆಯ ಹೊರಗೆ ಅನಿಶ್ಚಯವಾದ ತಿಂಡಿಗಿಂತಲೂ ಬಂದೀಖಾನೆಯೊಳಗೆ ನಿಶ್ಚಿತವಾದ ತಿಂಡಿಯೆ ಒಳ್ಳೇದು ಎನ್ನುತ್ತಾರೆ. ಕಾಸು ಖರ್ಚಿಲ್ಲದೆ ವೈದ್ಯಸಹಾಯವಿದೆ. ವಿಮೆ ಉತ್ತರಿಸಿದಷ್ಟೇ ನಮ್ಮ ಜೀವಕ್ಕೆ ಜೈಲಿನಲ್ಲಿ ಭದ್ರತೆ ಇದೆ ಎಂದು ಹಲವರು ಅನ್ನುತ್ತಾರೆ.

**ಭಿಕಾಜಿ:**— ಆ ಮಾತುಗಳು ಅತ್ತ ಇರಲಿ. ಈಗ ನೀನು ಹೇಳುವಂತೆ ಪ್ರತಿ ತಿಂಗಳ 2ನೆ ತಾರೀಕಿಗೆ ನಿನಗೆ ನೂರು ರೂಪಾಯಿ ಗಳಂತೆ ಸಿಕ್ಕಿದರೆ ಸಾಕೇ?

**ಗಂಗಾ:**— ಆದರೆ ಒಂದು ಮಾತು. ದೊಡ್ಡ ಮನುಷ್ಯರ ಚೆಕ್ಕುಪಕ್ಕು, ನೋಟುಗೀಟು ನನಗೆ ಬೇಡ. ಬೊಂಬೆ ರೂಪಾಯಿಯೇ ನನಗೆ ಬೇಕು, ಬಲ್ಲೆಯಾ?

**ಭಿಕಾಜಿ:**— ಇಲ್ಲಿಯೂ ತನ್ನ ಯತ್ನವು ನಡೆಯಲಿಲ್ಲವೆಂದು ತೋರ್ಪಡಿಸದೆ, "ಛೆ! ನೀನೆನ್ನುವಂತೆ ನಾನೇ ನಿನ್ನ ಮನೆಗೆ ಕತ್ತಲಾದ ಅನಂತರ ಆ ಹಣವನ್ನು ತಂದು ಕೊಡುವೆನು. ಆ ವಿಷಯದಲ್ಲಿ ನಿನಗೆ ಚಿಂತೆ ಬೇಡ, ಆದರೆ ದಾರಿಯಲ್ಲಿ ನನ್ನನ್ನು ಕಂಡರೆ ಮಾತ್ರ— ಆ ಮಾತು ಮರೆಯಬೇಡ" ಎಂದು ಹೇಳಿ ಹೋಗಲು ಎದ್ದನು.

**ಗಂಗಾ:**— "ತಡೆ ತಡೆ! ಅಷ್ಟು ಬೇಗನೆ ಹೊರಟೆ. ನಿನ್ನ ಆ ಸಿಗರೇಟಿನ ಪೊಟ್ಟಣವನ್ನು ಈಚೆಗೆ ಕೊಡು. ಎಷ್ಟು ಪರಿಮಳವಿದೆ! ಬಂಗಿಯಲ್ಲಿ ಮತ್ತು ಬರುತ್ತದೆ. ಅದಕ್ಕೆ ಇಷ್ಟು ಸುವಾಸನೆಯೂ ಇಲ್ಲ. ನಿನ್ನ ಪೊಟ್ಟಣವನ್ನು ಈಚೆಗೆ ನನಗೆ ಕೊಡು. ನೀನೂ ಒಂದನ್ನು ಸೇದುತ್ತ ಹೋಗು. ಏನು ಅಂದವಾಗಿ ಕಾಣುತ್ತಿ! ದೊರೆ ಮಟ್ಟು ಅಂದರೆ ಇದೀಗ! ಭಲೆ ಭೇಷ್" ಎನ್ನುತ್ತ ಸಿಗರೇಟೊಂದನ್ನು ಹೊರ ತೆಗೆದು ಬೇಗಬೇಗನೆ ಹೋಗುವ ಭಿಕಾಜಿಯನ್ನೆ ಕೊಂಚ ಹೊತ್ತು ನೋಡುತ್ತ ತನ್ನಲ್ಲಿಯೇ ನಗುತ್ತ ತನ್ನ ಬಿಡಾರದ ಕಡೆಗೆ ಹೊರಟು ಹೋದನು.

# ಹದಿಮೂರನೆಯ ಅಧ್ಯಾಯ

## ನಂದೂಲಾಲನ ಗೂಢಾಲೋಚನೆ

ಸಾಯಂಕಾಲ 5 ಗಂಟೆಯ ಸಮಯ. ನಂದೂಲಾಲ ಸೇಟನು ತನ್ನ ಆಫೀಸಿನಲ್ಲಿ ಕುಳಿತು, ಆ ದಿನದ ನಗದಿ ಜಮಾಖರ್ಚಿನ ಲೆಕ್ಕವನ್ನು ಆಗಲೇ ಮುಗಿಸಿ ಹಣದ ಕೊಠಡಿಗೆ ಬೀಗಮುದ್ರೆ ಮಾಡಿದ್ದನು. ಗುಮಾಸ್ತರು ಆಫೀಸನ್ನು ಬಿಟ್ಟು ಹೊರಗೆ ಹೋಗಲಿಕ್ಕೆ ಸಿದ್ಧವಾಗುತ್ತಿದ್ದರು. ಅಷ್ಟರಲ್ಲಿ ಜಂಗಬಹದ್ದೂರನ ಜೋಡು ಕುದುರೆಯ ಬ್ರೊಹೆಮ ಬಂದು ತಲಪಿತು. ಜಂಗಬಹದ್ದೂರನು ಆಫೀಸಿನೊಳಕ್ಕೆ ಪ್ರವೇಶ ಮಾಡಿದನು. ನಂದೂಲಾಲ ಸೇಟನು ಅವನಿಗೆ 'ರಾಮ ರಾಮ' ಮಾಡಿ ಅವನನ್ನು ಉಪ್ಪರಿಗೆಯ ಮೇಲಣ ಬೈಠಕಖಾನೆಯೊಳಗೆ ಕರೆದುಕೊಂಡು ಹೋದನು.

**ನಂದೂಲಾಲ**:—"ಜಂಗಬಹದೂರರೇ ! ತಮಗೆ ದೀರ್ಘಾಯುಸ್ಸು ಇದೆ."

**ಜಂಗ**:—ಅದೇನು, ಹಾಗೆನ್ನುವಿರಿ?

**ನಂದೂ**:—ಅಕಸ್ಮಾತ್ತಾಗಿ ತಮ್ಮ ಹೆಸರು ಜ್ಞಾಪಕಕ್ಕೆ ಬಂದುಬಿಟ್ಟಿತು. ಆಗಲೇ ನೀವೂ ಒಳಗೆ ಕಾಲಿಟ್ಟಿರಿ.

**ಜಂಗ**:—ನನ್ನ ಸ್ಮರಣೆಯಾಗಲು ಕಾರಣವೇನು?

**ನಂದೂ**:—ನಿನ್ನೆ ಸುಮಾರು ಇದೇ ಸಮಯಕ್ಕೆ ನಿಮ್ಮ ಮಿತ್ರರೊಬ್ಬರು ಇಲ್ಲಿಗೆ ಬಂದು ನಮ್ಮೊಡನೆ ಲೇವಾದೇವಿಯನ್ನು ಪ್ರಾರಂಭಿಸಿದರು.

**ಜಂಗ**:—ನನ್ನ ಮಿತ್ರರೇ? ಅವರು ಯಾರು?

**ನಂದೂ**:—ಕಾಥಿಯಾವಾಡದ ಸಾಹುಕಾರ ಪೋಪಟಲಾಲ ಮತ್ತು ಅವರ ಮಗ ವಿಮದಲಾಲ; ಅವರು ನಿಮ್ಮ ಪರಮಾಪ್ತರಂತೆ!

**ಜಂಗ**:—ಹಾಗೇನೂ ಇಲ್ಲ. ನನ್ನ ಗೆಳೆಯರಾದ ಪರಶುರಾಮದೀಕ್ಷಿತರಿಂದ ನನಗೆ ಅವರ ಪರಿಚಯವಾಯಿತು.

**ನಂದೂ**:—ಅವರು ಪೋಪಟಲಾಲರ ಕುಲ, ವರ್ತನ, ಧೋರಣೆಗಳನ್ನು ಕುರಿತು ನಿಮಗೆ ಬರೆಯಲಿಲ್ಲವೇ?

**ಜಂಗ**:—ಅವರು ಬರೆದಿರುವರು, ಖರೆ, ಆದರೆ—

**ನಂದೂ**:—ಆದರೆ ಏನು? ನಿಮ್ಮ ಆಪ್ತರ ಮಾತಿನ ಮೇಲೆ ನಿಮಗೆ ಭರವಸೆ ಇಲ್ಲವೇ?

**ಜಂಗ**:—ನನ್ನ ಸ್ವಂತ ಮಾತಿನ ಮೇಲೆ ಎಷ್ಟು ಭರವಸೆ ನನಗಿದೆಯೊ ಅಷ್ಟೆ ಭರವಸೆಯು ನನಗೆ ದೀಕ್ಷಿತರ ಮಾತಿನ ಮೇಲೆಯೂ ಇದೆ. ಆದರೆ ಪೋಪಟಲಾಲರ ವಿಷಯವನ್ನು ಅವರು ಸ್ವಂತ ಅನುಭವದಿಂದಲ್ಲ, ಇತರರಿಂದ ಕೇಳಿ ತಿಳಿದ ಸಮಾಚಾರವಾಗಿ ಬರೆದಿರುವರು.

**ನಂದೂ**:—ಆದರೂ ಪೋಪಟಲಾಲರು ಐದು ಲಕ್ಷ ರೂಪಾಯಿಗೆ ಮುಂಬಾಯಿಯ ವೊಟ್ಸನ್ ಕಂಪೆನಿಯವರಿಂದ 'ಲೆಟರ್ ಒಫ್ ಕ್ರೆಡಿಟ'ನ್ನು ತಂದಿರುವರಲ್ಲ!

**ಜಂಗ**:—ಹಾಗಿದ್ದರೆ ಅವರು ಶ್ರೀಮಂತರಾಗಿಯೇ ಇರಬೇಕು. ಆ ಬಗ್ಗೆ ಇನ್ನು ನನ್ನೊಡನೆ ವಿಚಾರವೇ ಬೇಕಾಬ್ಬಲ್ಲ.

**ನಂದೂ**:—ತಮ್ಮೊಡನೆ ನಾನಿನ್ನೊಂದು ವಿಚಾರವನ್ನು ಕುರಿತು ಆಲೋಚಿಸ ಬೇಕೆಂದಿದ್ದೇನೆ. ನಮ್ಮಿಬ್ಬರ ಪರಿಚಯವು ಬಹಳ ಕಾಲದ್ದಲ್ಲವಾದರೂ ನನ್ನ ಸ್ವಂತ ಒಡಹುಟ್ಟಿದವನ ಮೇಲಿನಷ್ಟೆ ವಿಶ್ವಾಸವು ತಮ್ಮ ಮೇಲೆ ನಿಂತು ಹೋಗಿದೆ. ಹಾಗಿದ್ದುದರಿಂದ ತಮ್ಮೊಡನೆ ನನ್ನ ಖಾಸಗಿ ಒಂದೆರಡು ವಿಚಾರಗಳನ್ನು ಕೂಡ ನಾನು ಗುಪ್ತವಾಗಿ ಚರ್ಚಿಸ ಬೇಕೆಂದಿದ್ದೆ. ಇಂದು ತಾವು ಬಂದ ಸಮಯವು ಬಹಳ ಯುಕ್ತವಾಗಿದೆ.

**ಜಂಗ**:—ಅಂಥ ವಿಚಾರಗಳೇನು?

**ನಂದೂ**:—ನನ್ನ ಒಬ್ಬಳೆ ಮಗಳನ್ನು ನಮ್ಮ ಡಿಪ್ಯೂಟಿ ಕಮ್ಮಿಶನರ್ ರಾವಸಾಹೇಬ ದ್ವಾರಕಾನಾಥರ ಮಗನಿಗೆ ಕೊಟ್ಟು ಲಗ್ನ ಮಾಡಿಸಬೇಕೆಂದು ಅವರ ಕಡೆಯಿಂದ ಒಂದು ಸೂಚನೆಯಿದೆ.

**ಜಂಗ**:—ಓಹೊ! ಕುಟುಂಬದೊಳಗಿನ ವಿಚಾರ! ನಮ್ಮಂಥ ಪರಕೀಯರು ಅದರಲ್ಲಿ ಕೈಹಾಕುವುದು ಅನುಚಿತ.

**ನಂದೂ**:—ತಾವೇನೂ ಅಂಥ ಪರಕೀಯರಲ್ಲ; ಅದಲ್ಲದೆ ವಿಚಾರಶೀಲರು, ಲೋಕಾನುಭವವುಳ್ಳವರು.

**ಜಂಗ:**—ಆದರೆ ಈ ವಿಷಯಗಳಲ್ಲಿ ಅಂತಃಪುರದವರ ಚಾಣಾಕ್ಷ ದೃಷ್ಟಿಯೇ ಅಗತ್ಯ.

**ನಂದೂ:**—ಅಯ್ಯೊ! ಹೆಂಗಸರು ಹೆಂಗಸರೇ, ನೋಡಿ; ಗಂಡಸರು ಗಂಡಸರೇ. ಮಗಳಿಗೆ ಚಿನ್ನಾಭರಣ ತುಂಬಾ ಹಾಕುತ್ತಾರೆ, ವರನ ಹಿರಿಯರಿಗೆ ದೊಡ್ಡ ಅಧಿಕಾರವಿದೆ, ಇಲ್ಲವೆ ಹೇರಳ ಆಸ್ತಿಯಿದೆ ಎಂದರಾಯಿತು. ಮುದಿಕೋತಿಗೂ ವಿವಾಹ ಮಾಡಿಕೊಡುವುದಕ್ಕೆ ಹೆಂಗಸರು ಒಪ್ಪುತ್ತಾರೆ. ಹೆಂಗಸರ ಮರುಳುತನಕ್ಕೆ ನಾವು ಬಲಿಬೀಳಬಾರದು. ನಾವು ಇನ್ನಷ್ಟು ದೂರ ದೃಷ್ಟಿಯಿಂದ ವಿಚಾರ ಮಾಡಬೇಕು.

**ಜಂಗ:** – ಅದೇನು ವಿಚಾರವೊ?

**ನಂದೂ:**—ವರನಾಗತಕ್ಕವನ ಕುಲ, ಗೋತ್ರ, ವಿದ್ಯೆ, ವರ್ತನ ಇವನ್ನು ಕೂಡ ನಾವು ಗಂಡಸರು ವಿಚಾರಿಸಬೇಕು.

**ಜಂಗ:**—ರಾವ ಸಾಹೇಬರ ವಿಷಯದಲ್ಲಿ ಅಂಥ ಕುಂದುಕಗಳೇನೂ ಇಲ್ಲವಲ್ಲ! ವರನಂತೂ ಯೋಗ್ಯನಾಗಿಯೇ ಕಾಣುತ್ತಾನೆ.

**ನಂದೂ:**—ರಾವ ಸಾಹೇಬರು ಸರಕಾರಿ ಉದ್ಯೋಗಸ್ಥರು. ಸರಕಾರಿ ಉದ್ಯೋಗದ ಗೌರವವೆಂದರೆ ಗಾಳಿಬಾಯಿಗೆ ಎದುರಿಟ್ಟ ಹಣತೆಯ ದೀಪ. ಎಂದಿಗೆ ನಂದಿ ಹೋದೀತೆಂದು ಹೇಳಲಾರೆವು. ಮೇಲಾಫಿಸರರಿಗೆ ಮನ ಮೆಚ್ಚಿಗೆಯಾಗದಿದ್ದರೆ 'ಕಾಜಿ ಇದ್ದವನನ್ನು ಪಾಜಿ'ಯಾಗಿ ಮಾಡಿಬಿಡುತ್ತಾರೆ. ಮೇಲಾಫಿಸರರ ಮುಖಚಹರೆ, ಹುಬ್ಬಿನ ಬಾಗು, ಕಣ್ಣಿನ ಅರಳುವಿಕೆ, ಮೂಗಿನ ತುದಿಯ ಬಣ್ಣ ಇವುಗಳ ಮೇಲೆ ಕೆಳ ಆಫೀಸರರ ಸರ್ವಸ್ವವು ಹೊಂದಿದೆ. ಅವರ ನೆತ್ತಿಯ ಮೇಲೆ ಅಧಿಕಾರದ ಕತ್ತಿಯು ಬರೆ ನೂಲೆಳೆಯಲ್ಲಿ ತೂಗುತ್ತದೆ. ಎಂದಿಗೆ ನೂಲು ಕಡಿದೀತು, ಕತ್ತಿ ಕುತ್ತಿಗೆಯ ಮೇಲೆ ಬಿದ್ದೀತು ಎಂದು ಹೇಳಲಾರೆವು. ಈ ಭೀತಿಯು ಆಫೀಸರರ ನರನಾಡಿಗಳಲ್ಲಿಯೂ ವ್ಯಾಪಿಸಿದೆ.

**ಜಂಗ:**—ವರ್ತಕರಿಗೆ ಯಾವ ಅಪಾಯಗಳೂ ಇಲ್ಲವೆನ್ನುತ್ತೀರಾ?

**ನಂದೂ:**— ಹಾಗೆ ಹೇಳಲಾರೆ. ಇಂದು ಶ್ರೀಮಂತರಾಗಿದ್ದವರು ನಾಳೆ ದಿವಾಳಿಯಾಗುವುದೂ ಇದೆ. ಆದರೆ ನಾವು ವರ್ತಕರಲ್ಲ. ಬರೀ ಲೇವಾದೇವಿಯನ್ನು ನಡಿಸುವಂಥವರು. ತಕ್ಕ ಜಾಮೀನು ಇಲ್ಲದೆ ಸಾಲ ಕೊಡುವುದೇ ಇಲ್ಲ. ಆ ವಿಚಾರವಂತೂ ಒತ್ತಟ್ಟಿಗೆ ಇರಲಿ. ಇದು ಗೂಢ ವಿಚಾರ. ಈ ದ್ವಾರಕಾನಾಥನು ಒಂದು ಕಾಲದಲ್ಲಿ ನನ್ನ ಕೈಕೆಳಗೆ ಕೆಲಸ ಮಾಡುತಿದ್ದ ಯದುಕುಲನಾಥ ನಂತೆಯೇ ಕಾಣಿಸುತ್ತಾನೆ. ನಾವು ಒಬ್ಬರನ್ನೊಬ್ಬರು ಅಗಲಿ ಸುಮಾರು ಹದಿನೈದು ಇಪ್ಪತ್ತು ವರ್ಷಗಳಾದುವು. ಆದುದರಿಂದ ಖಂಡಿತವಾಗಿ ಹೇಳಬರುವುದಿಲ್ಲ.

**ಜಂಗ:**— ಹಾಗಾದರೆ ಈ ಪೂನೆಯು ನಿಮ್ಮ ಜನ್ಮಸ್ಥಾನವಲ್ಲವೇ?

**ನಂದೂ:**— ಅಲ್ಲ ಅಲ್ಲ, ಹದಿನೈದು ವರ್ಷಗಳ ಹಿಂದೆ ನಾನು ಸಾಂಗಲಿಯ ಜಮೀನುದಾರ ವಿಶ್ವನಾಥಪಂತರ ಪಾರುಪತ್ಯಗಾರನಾಗಿ ತಿಂಗಳಿಗೆ 150 ರೂಪಾಯಿ ತಲಬಿನಲ್ಲಿದ್ದೆನು. ಆಗ್ಗೆ ಯದುಕುಲ ನಾಥನು ನನ್ನ ಕೈಕೆಳಗಿನ ಚಿಲ್ಲರೆ ಗುಮಾಸ್ತನಾಗಿದ್ದನು.

**ಜಂಗ:**— ಬಡತನದಿಂದ ಬರೀ ಕೀಳು ತಲಬಿನಲ್ಲಿ ಜೀವಿಸುವ ಮನುಷ್ಯನು ತನ್ನ ಬುದ್ಧಿ ಕೌಶಲದಿಂದ ಉನ್ನತ ಪದವಿಯನ್ನು ಹೊಂದಿ ದರೆ ಅದರಲ್ಲಿ ತಪ್ಪೇನು?

**ನಂದೂ:**— ಹಾಗಲ್ಲ, ಈ ದ್ವಾರಕಾನಾಥನು ಆ ಯದುಕುಲ ನಾಥನೆ ಹೌದಾಗಿದ್ದರೆ— ಇದು ನಮ್ಮೊಳಗಿನ ಮಾತು— ಆತನು ತನ್ನ ಯಜಮಾನನ ಮನೆಯನ್ನು ಸುಲಿಗೆ ಮಾಡಿ ಮನೆಗೆ ಬೆಂಕಿ ಹಚ್ಚಿ ಯಜಮಾನನನ್ನೆ ಕೊಲೆ ಮಾಡಿದ ಘೋರ ಪಾತಕದ ಲಾಂಛನವನ್ನು ಹೊತ್ತಿರುವನು. ಅಂಥವನೊಡನೆ ರಕ್ತ ಸಂಬಂಧವನ್ನು ಬೆಳೆಯಿಸಲಿಕ್ಕೆ ನನ್ನ ಮನಸ್ಸು ಒಡಂಬಡುವುದಿಲ್ಲ.

**ಜಂಗ:**— ಆ ಯದುಕುಲನಾಥನೂ ಈ ದ್ವಾರಕಾನಾಥನೂ ಒಬ್ಬನೆಯೊ ಎಂದು ಪತ್ತೆ ಹಚ್ಚಲು ಬರುವುದಿಲ್ಲವೇ?

**ನಂದೂ:**— ನಾನು ಸಾಂಗಲಿಯನ್ನು ಬಿಟ್ಟು ಈಗ ಹಲವು ವರ್ಷಗಳಾದುವು ಅಂದೆನಲ್ಲ! ಅಲ್ಲಿ ನನ್ನ ಪೂರ್ವ ಪರಿಚಿತರು ಯಾರಾ

ದರೂ ಇದ್ದಾರೊ ಎಂದು ಕೂಡ ನನಗೆ ಸಮಾಚಾರವಿಲ್ಲ. ಹಾಗಿದ್ದರೆ ಈ ಗೂಢವಿಚಾರವನ್ನು ಕಂಡು ಹಿಡಿಯುವುದಾದರೂ ಹೇಗೆ?

**ಜಂಗ**:—ಅಷ್ಟೆಯೇ? ನಾನೊಂದು ಹಂಚಿಕೆಯನ್ನು ಹೇಳಲೆ?

**ನಂದೂ**:—ಅದೇನು? ಅದೇನು?

**ಜಂಗ**:—ನನ್ನ ಆಪ್ತರಾದ ಪರಶುರಾಮದೀಕ್ಷಿತರು ಅಲ್ಲಿ ಸುಳಿಯದ ಎಡೆಯಿಲ್ಲ. ಅವರಿಗೆ ಆ ಪ್ರಾಂತದ ಸಂದಿ ಮೂಲೆಗಳು ಸಹ ಚೆನ್ನಾಗಿ ತಿಳಿದಿವೆ. ಅವರು ಪ್ರಖ್ಯಾತ ವೈದ್ಯರಾಗಿಯೂ ಜೋಯಿಸರಾಗಿಯೂ ಊರೂರು ಸಂಚರಿಸುತ್ತಾರೆ. ನೀವು ಅವರಿಗೆ ಬರೆದರೆ ಅವರು ನಿಜತ್ವವೇನೆಂದು ಅರಿತು ಬರೆಯುವರು.

**ನಂದೂ**:—"ಇದು ಒಳ್ಳೆಯ ಉಪಾಯ. ದೀಕ್ಷಿತರ ವಿಳಾಸವೇನು? ದಯಪಾಲಿಸೋಣಾಗಲಿ." ಜಂಗಬಹದ್ದೂರನು ತನ್ನ ಕಿಸೆಯಲ್ಲಿರುವ ಚಿಕ್ಕ ಖಾಲಿ ಪುಸ್ತಕದ ಹಾಳೆಯೊಂದನ್ನು ಹರಿದು, ಅದರ ಮೇಲೆ ದೀಕ್ಷಿತರ ವಿಳಾಸವನ್ನು ಬರೆದು, ಆ ಕಾಗದವನ್ನು ಮಡಚಿ ನಂದೂಲಾಲನ ಕೈಗೆಯಿತ್ತನು.

**ನಂದೂ**:—ಈಗ ಇನ್ನೊಂದು ಪ್ರಶ್ನೆ. ಈ ವಿಮಲಲಾಲನು ಅವಿವಾಹಿತನೇ?

**ಜಂಗ**:—ಅವನನ್ನು ಅಳಿಯನಾಗಿ ಮಾಡಲಿರುವಿರಾ?

**ನಂದೂ**:—ಏತಕ್ಕೆ ಆಗಕೂಡದು? ಶ್ರೀಮಂತ ಪುತ್ರ. ತಂದೆಗೊಬ್ಬನೇ ಮಗ, ಸುಲಕ್ಷಣವುಳ್ಳವನು—ನನಗೂ ಇಡೀ ಸಂಸಾರಕ್ಕೆ ಒಂದೇ ಒಂದು ಮಗಳು. ಗಂಡು ಸಂತತಿ ಬೇರೆಯಿಲ್ಲ—ಮುಂದೆ ಅವನನ್ನು ನನ್ನ ಬಂಡಸಾಲೆಯ ವ್ಯವಹಾರದಲ್ಲಿ ಸೇರಿಸಿದರೆ ನನ್ನ ವೃದ್ಧಾಪ್ಯಕಾಲಕ್ಕೆ ಆತನು ನನಗೆ ಊರುಗೋಲಾಗಲಿಕ್ಕಿಲ್ಲವೇ?

**ಜಂಗ**:—ಈ ವಿಷಯದಲ್ಲಿ ಆ ತಂದೆ ಮಗಂದಿರೊಡನೆ ನೀವು ವಿಚಾರಿಸಬೇಕಾಗುವುದು. ಕೆಲವು ಸಂದರ್ಭಗಳಲ್ಲಿ ಪರರ ಆಲೋಚನೆ ಕೇಳುವುದೆಂದರೆ ನಾಳೆ ದುಷ್ಪರಿಣಾಮವೇನಾದರೂ ಉಂಟಾದಾಗ ದೂಷಣೆಗೆ ಅವರನ್ನು ಗುರಿಪಡಿಸಲಿಕ್ಕೆನೆ ಆಗುತ್ತದೆ. ನಾನು ಸಂಸಾರಿಕನಲ್ಲ. ಇಂಥ ನೆಂಟಸ್ತಿಕೆಯ ಮಧ್ಯಸ್ತಿಕೆಯಲ್ಲಿ ನಾನೆಂದಿಗೂ ಕೈಹಾಕಲಾರೆ.

**ನಂದೂ**:—ಸಂದರ್ಭ ಹುಡುಕಿ ನಿಮ್ಮೆದುರಿನಲ್ಲಿ ಈ ಪ್ರಸ್ತಾಪ ವನ್ನು ಎತ್ತಿದರೆ ನೀವು ನಮ್ಮ ಮಾತಿಗೆ ಸೈಗುಟ್ಟುವಿರಾ?

**ಜಂಗ**:—ಆಲೋಚಿಸಿ ಹೇಳುವೆನು.

**ನಂದೂ**:—ಅದಕ್ಕೆ ವಿಶೇಷ ಅವಕಾಶವಿಲ್ಲ. ನಾಳೆ ಸಾಯಂ ಕಾಲವೇ ದ್ವಾರಕಾನಾಥರಲ್ಲಿ 'ಟೀಪಾರ್ಟಿ' ಇದೆ. ಅದಕ್ಕೆ ಆ ಪೋಪಟಲಾಲನೂ ವಿಮಲದಲಾಲನೂ ಆಮಂತ್ರಿಸಲ್ಪಟ್ಟಿರುವರು. ಅಲ್ಲಿ ನಾನು ಅವರಿಗೆ ಭೇಟಿಯಾಗುವ ಸಂದರ್ಭವಿದೆ. ತಾವಂತೂ ಅಲ್ಲಿ ಖಂಡಿತವಾಗಿ ಬರಲಿರುವಿರಲ್ಲವೆ?

**ಜಂಗ**:—ಆ ಕಾಲದಲ್ಲಿ ನೋಡೋಣ. ಈಗ ಈ ಚೆಕ್ಕಿನ ಹಣವನ್ನು ಕೊಡಿಸಲು ಸಾಧ್ಯವುಂಟೇ?

**ನಂದೂ**:—"ಜನ ಸಾಮಾನ್ಯರಿಗೆ ಆಫೀಸಿನ ಕಾಲದ ಅನಂತರ ನಾವು ಹಣ ಕೊಡುವುದಿಲ್ಲ. ಆದರೆ ಆಪ್ತರಾದ ತಮ್ಮಂಥವರ ವಿಷಯ ದಲ್ಲಿ ವಿನಾಯಿತಿ ಇದೆ" ಎಂದು ಕೆಳಗೆ ಕರೆದುಕೊಂಡು ಹೋಗಿ ಬೀಗ ಮುದ್ರೆಯ ಕೋಣೆಯೊಳಗೆ ಪ್ರವೇಶಿಸಿ ನೋಟುಗಳನ್ನು ತಂದು ಎಣಿಕೆ ಮಾಡಿ ಕೊಟ್ಟು ಆಫೀಸಿನ ಹೆಬ್ಬಾಗಿಲಿನ ವರೆಗೆ ಆತನನ್ನು ಮುಟ್ಟಿಸಿ 'ರಾಮ ರಾಮ' ಮಾಡಿ ಹಿಂತಿರುಗಿದನು. ಜಂಗ ಬಹದ್ದೂರನು ಹಿಂತಿರುಗಿ ಎವೆಯಿಕ್ಕದೆ ನಂದೂಲಾಲನನ್ನು ನೋಡುತ್ತ "ಸರಿ ಸರಿ. ಮುಸಿಯು ಇದ್ದಲನ್ನು ಕಪ್ಪೆಂದು ಹೀಯಾಳಿಸಿತಂತೆ. ವಿಶ್ವನಾಥ ಪಂತರ ಸರ್ವ ನಾಶಕ್ಕೆ ಇಬ್ಬರೂ ಪಾಲುಗಾರಿಕೆಯಿಂದ ಕೆಲಸ ಮಾಡಿದ್ದರೂ ಈಗ ದ್ವಾರಕಾನಾಥನಿಗೆ ದೊಡ್ಡ ಪದವಿಯೂ ಬಹು ಮಾನವೂ ದೊರಕಿದುದನ್ನು ನೋಡಿ ಈತನ ಹೊಟ್ಟೆ ಬೇಗುದಿಗೊಂಡಿದೆ. ಈಗ ಈತನಿಗೆ ದ್ವಾರಕಾನಾಥನ ಅಧಿಕಾರಕ್ಕಿಂತಲೂ ವಿಮಲದಲಾಲನ ದುಡ್ಡೇ ಬೆಟ್ಟವಾಗಿ ಕಾಣುವಂತಿದೆ. ಈತನ ಈ ದುರಾಸೆಯ ಪರಿಣಾಮ ವೇನಾದೀತೆಂದು ನೋಡಲಿಕ್ಕೆ ಇದೆ. "ಆಸೆಗೆ ಪಾರವಿಲ್ಲ! ಮನವೇ ಸೈರಿಸು!" ಎಂದು ಹೇಳಿ ತನ್ನ ಬಂಡಿಯಲ್ಲಿ ಕುಳಿತು ಅಸ್ಥಾನಬಾಗಿಗೆ ತೆರಳಿದನು.

---

# ಹದಿನಾಲ್ಕನೆ ಅಧ್ಯಾಯ

## ದ್ವಾರಕಾನಾಥನ ಟೀ ಪಾರ್ಟಿ

ಇಂದು ರಾವ ಸಾಹೇಬ ದ್ವಾರಕಾನಾಥರಲ್ಲಿ 'ಟೀ ಪಾರ್ಟಿ'. ಪೂನೆಯ ಮುಖಂಡ ವರ್ತಕರೂ ಸರಕಾರಿ ನೌಕರರೂ ಆಮಂತ್ರಿಸಲ್ಪಟ್ಟಿದ್ದರು. ಸಾಯಂಕಾಲ 4½ ಗಂಟೆಗೆ ಸರಿಯಾಗಿ ಇವರೆಲ್ಲರೂ ತಂಡತಂಡವಾಗಿ ಬಂದು ನೆರೆದಿದ್ದರು. ಬಂಗಲೆಯ ಸುತ್ತಲಿರುವ ಚೆಲುವಾದ ತೋಟದಲ್ಲಿ ಮೂರು ದೊಡ್ಡ ಡೇರೆಗಳನ್ನು ಹೊಡೆದಿದ್ದರು. ಒಂದರಲ್ಲಿ ಕೆಲವು ಯುರೋಪಿಯನರು, ಅವರೊಡನೆ ಬೆರೆತುಕೊಂಡು ಫಲಹಾರ ಮಾಡುವುದಕ್ಕೆ ಆಕ್ಷೇಪವಿಲ್ಲದ ಜನರು, ಇನ್ನೊಂದರಲ್ಲಿ ಹಿಂದೂ ಕ್ರಮದಲ್ಲಿ ಭಕ್ಷಭೋಜ್ಯಗಳನ್ನು ಪರಿಗ್ರಹಿಸುವವರು, ಮೂರನೆಯದರಲ್ಲಿ ಘೋಷಾಸ್ತ್ರೀಯರು, ಸಾಮಾನ್ಯವಾಗಿ ಪುರುಷರ ಕೂಟವಲ್ಲಿ ಕೂಡಲು ಹಿಂಜರಿಯುವ ಸಾಂಪ್ರದಾಯವಾದಿ ಸ್ತ್ರೀಯರು. ಅವರವರ ಅಭಿಮತಕ್ಕೆ ಅನುಸಾರವಾಗಿ ಫಲಹಾರದ ವಸ್ತುಗಳನ್ನು ಹಂಚುವುದಕ್ಕೆ ತಕ್ಕ ಏರ್ಪಾಡನ್ನು ಮಾಡಿತ್ತು. ಪೋಪಟಲಾಲ, ಪಿಮುದಲಾಲ, ಮೋರೋಪಂತ, ಆತನ ಮಗ ರಾಮದಾಸ, ಮಗಳು ಜಗಮೋಹಿನಿ, 'ರಾಷ್ಟ್ರಮತ' ಪತ್ರಿಕೆಯ ಸಂಪಾದಕ ಗಿರಿಧರಲಾಲ ಇವರೆಲ್ಲರೂ ಈ ಕಥಾನಕದ ಮಟ್ಟಿಗೆ ನಮಗೆ ಬೇಕಾದುದರಿಂದ ಅವರ ಹೆಸರನ್ನು ಹೇಳುವೆವು. ಬಂದವರಲ್ಲಿ 1ನೆ ಡೇರೆಯ ಬಳಿಯಲ್ಲಿ ದ್ವಾರಕಾನಾಥನೂ, 2ನೆ ಡೇರೆಯ ಬಳಿಯಲ್ಲಿ ರಘುನಾಥನೂ 3ನೆ ಡೇರೆಯ ಮುಂಗಡೆಯಲ್ಲಿ ದ್ವಾರಕಾನಾಥನ ಪತ್ನಿ ಮತ್ತು ರಘುನಾಥನ ತಾಯಿಯಾದ ಸುಲೋಚನೆಯೂ ನಿಂತಿದ್ದು ಸ್ವಾಗತಕಾರ್ಯವನ್ನು ನಡೆಸುತಿದ್ದರು. ಆಮಂತ್ರಣದ ಕಾಲವು ಸಾಯಂಕಾಲ 5 ಗಂಟೆ ಎಂದು ನಿಶ್ಚಿತವಾಗಿದ್ದರೂ ಆಮಂತ್ರಿತರು ಅರ್ಧತಾಸು ಮುಂಚಿತವಾಗಿಯೇ ಬಂದಿದ್ದು ಅಲ್ಲಲ್ಲಿ ಚಿಕ್ಕ ಚಿಕ್ಕ ಗುಂಪಾಗಿ ಪ್ರಚಲಿತ ವಿಷಯಗಳನ್ನು ಕುರಿತು ಸಣ್ಣ ಸ್ವರದಿಂದ ಚರ್ಚಿಸುತಿದ್ದರು. ದ್ವಾರಕಾನಾಥನು ಡೆಪ್ಯುಟಿ ಕಮ್ಮಿಶನರಾದುದರಿಂದ ಅವನ ಕೈಕೆಳಗಿನ ಅಮಲ್ದಾರರೂ, ಇತರ ಗುಮಾಸ್ತೆಯರೂ, ಅವರ ಪತ್ನಿಯರೂ ತುಂಬಾ ಸಾಹಸಮಾಡಿ ಸರಿಯಾಗಿ

ವ್ಯವಸ್ಥೆಮಾಡಿದ್ದರು. ದ್ವಾರಕಾನಾಥನಾದರೊ ಮುಕ್ತಹಸ್ತದಿಂದ ಸಾಹಿತ್ಯಗಳನ್ನು ತರಿಸಿದ್ದನು. ಇಷ್ಟೇ ಅಲ್ಲ, ಫಲಾಹಾರವಾದ ಮೇಲೆ ಗಾಯನ, ನರ್ತನಗಳ ಪ್ರದರ್ಶನಕ್ಕಾಗಿ ಪ್ರತ್ಯೇಕ ದೊಡ್ಡ ಡೇರೆಯನ್ನು ನಿರ್ಮಿಸಿ, ಅದರಲ್ಲಿ ಮುಂಗಡೆ ರತ್ನಗಂಬಳಿಯ ಮೇಲೂ, ಹಿಂದುಗಡೆಯಲ್ಲಿ ಬಗೆಬಗೆಯ ಆಸನಗಳ ಮೇಲೂ ಕುಳಿತುಕೊಳ್ಳುವುದಕ್ಕೆ ಹವಣಿಸಿತ್ತು.

ದ್ವಾರಕಾನಾಥನು ಗಿರಿಧರಲಾಲನೊಂದಿಗೆ ಡೇರೆಗಳೊಳಗೆ ಒಮ್ಮೆ ನುಗ್ಗಿ ಅಲ್ಲಿಯ ವ್ಯವಸ್ಥೆಗಳನ್ನೆಲ್ಲ ನೋಡಿಕೊಂಡು ಬಂದನು. ಆಮಂತ್ರಿತರೆಲ್ಲರೂ ಬಂದಂತೆ ಕಂಡಿತು. ಆದರೆ ಯಾರೊ ಒಬ್ಬರು ಒಂದನೆ ಡೇರೆಯೊಳಗಿಂದ ಹೊರಗೆ ಬಂದು, ಷಂಷೇರಜಂಗಬಹದ್ದೂರರೊಬ್ಬರೇ ಬರಲಿಲ್ಲವೆಂದರು. ಗಿರಿಧರಲಾಲನು 'ನೂರ ಹನ್ನೊಂದು' ಎಂದನು. ದ್ವಾರಕಾನಾಥನು ಆಶ್ಚರ್ಯದಿಂದ 'ಅದೇನು ಎಣಿಕೆ ಹಾಕುತ್ತೀರಿ?' ಎಂದನು. "ಜಂಗಬಹದ್ದೂರರ ಹೆಸರು ಇಲ್ಲಿಗೆ ಬಂದ ಮೇಲೆ ನಾನು ಕೇಳಿದ್ದು ನೂರಹನ್ನೊಂದನೆ ಸಲವಾಯಿತು. ಇನ್ನೂ ಇಲ್ಲಿಂದ ಹೊರಡುವ ಒಳಕ್ಕೆ ಎಷ್ಟು ಸಲ ಅದೇ ನಾಮೋಚ್ಚಾರಣೆಯನ್ನು ಕೇಳುವುದಕ್ಕಿದೆಯೋ?" ಎಂದು ಗಿರಿಧರಲಾಲನು ಉತ್ತರ ಕೊಟ್ಟನು. ಆಗ ರಘುನಾಥನು ಕಿಸೆಗಡಿಯಾರದಲ್ಲಿ ನೋಡಿ 'ಜಂಗಬಹದ್ದೂರರು ಕಾಲ ತಪ್ಪಲಾರರು. ಇನ್ನೂ 5 ಗಂಟೆಗೆ 5 ಮಿನಿಟುಗಳು ಇವೆ' ಎಂದನು. ಅಷ್ಟರಲ್ಲಿ ರಾಮದಾಸಪಂತನೂ ಹೊರಗೆ ಬಂದು "ಜಂಗಬಹದ್ದೂರರ ನಾಮೋಚ್ಚಾರಣೆ ಎಲ್ಲರ ಬಾಯಿಯಲ್ಲಿ ಇರದೆ ಏನು? ಅವರಲ್ಲಿ ಉದಾತ್ತವರ್ತನ, ಔದಾರ್ಯ, ನಿರಹಂಕಾರ ಎರಕ ಹೊಯ್ದಂತೆ ಅಂಗಾಂಗಗಳಲ್ಲಿ ಕಾಣುತ್ತವೆ" ಎಂದನು. ಪೋಪಟಲಾಲನೂ ವಿಮಲಲಾಲನೂ ಅಲ್ಲಿಗೆ ಬಂದು ಈ ವರ್ತಮಾನಗಳನ್ನು ಕೇಳುತ್ತನಿಂತರು. ರಘುನಾಥನು "ಅಷ್ಟೆಯೆ? ಅವರಷ್ಟು ಸಾಮಾನ್ಯ ಧೀರರೂ, ಶೂರರೂ, ಅಪೂರ್ವ ದೇಹತ್ರಾಣವುಳ್ಳವರೂ ಯಾರು ಇದ್ದಾರೆ? ಕೆಲವು ದಿನಗಳ ಹಿಂದೆ ನಾನು ಮಹಾಬಲೇಶ್ವರ ಬೆಟ್ಟಗಳಿಂದ ಇಳಿದು ಬರುವಾಗ ಅಕಸ್ಮಾತ್ತಾಗಿ

ಹತ್ತೆಂಟು ಕಳ್ಳರು ನನ್ನ ಸಂಗಡದ ಮೇಲೆ ಬಿದ್ದು ನಮ್ಮ ಇಹಲೋಕದ ಯಾತ್ರೆಯನ್ನು ಮುಗಿಸಬೇಕೆಂದು ಕೈಮಾಡಿದಾಗ ಜಂಗಬಹದ್ದೂರರೊಬ್ಬರೇ ಅವರನ್ನು ಎದುರಿಸಿ ಒಬ್ಬಿಬ್ಬರನ್ನು ಪಿಸ್ತೂಲಿನಿಂದ ಕೊಂದು ಉಳಿದವರು ತಲೆತಪ್ಪಿಸಿಕೊಂಡು ಹೋಗುವಂತೆ ಮಾಡಿದರು. ಇಷ್ಟಿದ್ದರೂ ತಾನೊಬ್ಬರಿಗೆ ಉಪಕಾರಮಾಡಿದೆನೆಂದು ಹೆಮ್ಮೆಕೊಚ್ಚುವ ಮನುಷ್ಯರಲ್ಲ ಅವರು!" ಎಂದನು.

**ರಾಮದಾಸ**:—ಅವರ ಅಪೂರ್ವ ಲಕ್ಷ್ಯಭೇದನ ಕ್ರಮವನ್ನು ಈ ದಿನ ಬೆಳಿಗ್ಗೆ ಅವರ ಬಂಗ್ಲೆಗೆ ಹೋದಾಗ ಕಣ್ಣಾರೆ ನೋಡಿದೆನು. ಅವರ ಮುಸಲ್ಮಾನ ಚಾಕರನೊಬ್ಬನು ಕೋವಿಯನ್ನು ಬಾರುಮಾಡಿ ಚರೆಗಳನ್ನು ಒದಗಿಸಿ ಅವರ ಕೈಗೆ ಕೊಡುತ್ತಿದ್ದನು. ಅವರು ಅರೆಕ್ಷಣದಲ್ಲಿಯೇ ಸುಮಾರು ಇಪ್ಪತ್ತು ಮಾರು ದೂರದಲ್ಲಿರುವ ಬಿಳೇ ರಟ್ಟಿನ ತುಂಡಿನ ಮೇಲೆ, ಇಸ್ಪೀಟು ಎಲೆಯ ಮೇಲಿನ ಚುಕ್ಕಿಗಳಂತೆ ಕುರುಹು ಕಾಣಿಸಿದ್ದರು." ಇದನ್ನು ಕೇಳಿದ ಎಲ್ಲರಿಗೂ ಅತ್ಯಾಶ್ಚರ್ಯವಾಯಿತು. ಅಷ್ಟರಲ್ಲಿ ಜೋಡುಕುದುರೆಯ ಬ್ರೊಹೆಮದಲ್ಲಿ ಜಂಗಬಹದ್ದೂರನ ಸವಾರಿ ಗೇಟಿನೊಳಗೆ ಬಂತು. ಆ ಸಮಯದಲ್ಲಿ ಸರಿಯಾಗಿ ೫ ಗಂಟೆ ಗಡಿಯಾರದಲ್ಲಿ ಹೊಡೆಯಿತೆಂದು ಪತ್ರಸಂಪಾದಕ ಗಿರಿಧರಲಾಲನು ತಲೆದೂಗಿದನು.

ಸಾಮಾನ್ಯವಾಗಿಯೂ ಜಂಗಬಹದ್ದೂರನು ಒಳ್ಳೇ ಮೌಲ್ಯದ ಪೋಷಾಕನ್ನೆ ಧರಿಸುವವನು. ಇಂದಿಗೆ ಮಾತ್ರ ಆತನ ಪೋಷಾಕು ತೀರಾ ಅಪೂರ್ವವಾಗಿತ್ತು. ತಲೆಗೆ ಒಂದು ಅಂಗುಲ ಜರಿಯ ಫೇಟಾ, ಫೇಟಿಯ ಬಣ್ಣವು ಒಂದು ಕಡೆಯಿಂದ ನೀರಳ, ಇನ್ನೊಂದು ದಿಕ್ಕಿನಿಂದ ಹಸುರು, ಎದುರುಕಡೆಯಿಂದ ನಸುಕೆಂಪು ಎಂಬಂತೆ ಕಾಣುತ್ತಿತ್ತು. ಫೇಟಿಯ ಬಿಡಿಕೊನೆಯು ಬೆನ್ನುಕಡೆಯಲ್ಲಿ ಸೊಂಟದವರೆಗೆ ಜೋಲುತ್ತಿತ್ತು. ಫೇಟಿಯ ಮುಂಭಾಗದಲ್ಲಿ ಜರಿಯ ತುರಾಯಿ, ಅದರ ನಡುವೆ ಒಂದು ಸುತ್ತು ವಜ್ರಗಳು, ಅದರ ಹೊರ ಆವರಣದಲ್ಲಿ ಮುತ್ತುಗಳು; ಮೈಗೆ ಬಿಗಿಯಾಗಿ ನಿಂತ ಜರತಾರಿಯ ಹೂಗಳುಳ್ಳ ನಿಲುವಂಗಿ, ಅದರ ಭುಜಗಳಲ್ಲಿ ಜರಿಯ ಭುಜಬಂದ. ಅಂಗಿಯ ಕೈಗಳು ಆ ಅಜಾನು

ಬಾಹುಗಳಿಗೆ ಮಿಕ್ಕ ಉದ್ದವಾಗಿದ್ದು ನೆರಿಗೊಂಡಿದ್ದುವು. ಸೊಂಟಕ್ಕೆ ಜರೀ ಅಂಚಿನ ಗುಲಾಬಿ ಬಣ್ಣದ ಶಾಲನ್ನು ಮಡಿಗಳಾಗಿ ಮಡಚಿ ಸುತ್ತಿದ್ದನು. ಜರಿಯ ಅಂಚು ಇರುವ ಇಜಾರು, ಅದರ ಬುಡದಲ್ಲಿ ಅಚ್ಚ ಬಿಳಿ ಕಾಲುಚೀಲಗಳು, ಪಾದಗಳಿಗೆ ಜರಿ ಹೂವಿನ ವೆಲ್ವೆಟು ಪೊದಿಸಿದ ಚಡಾವುಗಳು; ಅವರು ಬಲಗೈಯಲ್ಲಿ ಕೆತ್ತನೆ ಕೆಲಸದ ಚಿನ್ನದ ಹಿಡಿಯುಳ್ಳ ಗಂಧದ ಬೆತ್ತವನ್ನು ಊರಿಕೊಂಡು ಸಿಂಹಗಮನದಿಂದ ನಡೆಯುತ್ತ ಬರುತ್ತಿದ್ದರು. ಆ ಜಂಗಬಹದ್ದೂರರನ್ನು ಎಲ್ಲರೂ ಚಕಿತರಾಗಿ ನೋಡುತ್ತಿದ್ದರು.

ದ್ವಾರಕಾನಾಥನು ಆತನನ್ನು ಕಂಡೊಡನೆ ತನ್ನ ಪತ್ನಿ ಸುಲೋಚನೆ ಮತ್ತು ಮಗನೊಂದಿಗೆ ಆತನನ್ನು ಎದುರುಗೊಳ್ಳಲು ಗೇಟಿನ ಬಳಿ ಹೋದನು. ದ್ವಾರಕಾನಾಥನು ಆತನನ್ನು ಅಷ್ಟು ಸಮೀಪದಿಂದ ಇದುವರೆಗೆ ನೋಡಿದ್ದಿಲ್ಲ. ತನ್ನ ಮಗನ ಪ್ರಾಣವನ್ನು ಉಳಿಸಿದ ಮಹಾಪುರುಷನನ್ನು ತವಕದಿಂದ ಎದುರುಗೊಳ್ಳಲು ನಿಂತ ದ್ವಾರಕಾನಾಥನು ಆತನ ತೀವ್ರ ಮತ್ತು ವಿಶಾಲವಾದ ಕಣ್ಣುಗಳ ದೃಷ್ಟಿ, ಮತ್ತು ಮುಖದ ಮೇಲಿನ ವಿಚಿತ್ರ ವರ್ಚಸ್ಸುಗಳನ್ನು ಕಂಡೊಡನೆ ಜಂಗಬಹದ್ದೂರನ 'ರಾಮರಾಮ'ಕ್ಕೆ ಪ್ರತ್ಯುತ್ತರ ಕೊಡಲು ಬಾರದೆ ಅವಾಕ್ಕಾದನು. ಸುಲೋಚನೆಗಂತೂ ಪ್ರಜ್ಞೆ ತಪ್ಪಿದಂತಾಗಿ ಗಂಟಲು ಸೆರೆಗಳು ಬೀಗಿದುವು. ದ್ವಾರಕಾನಾಥನನ್ನು ಒಮ್ಮೆ ಆತನು ತೀವ್ರದೃಷ್ಟಿಯಿಂದ ನೋಡಿ ಹುಬ್ಬುಗಂಟಿಕ್ಕಿದನು. ಅನಂತರ ಸುಲೋಚನೆಯನ್ನೆ ಎವೆ ಇಕ್ಕದೆ ತುಸು ಹೊತ್ತು ನೋಡಿದನು. ಕ್ಷಣಮಾತ್ರದಲ್ಲಿಯೆ ಎಲ್ಲರೂ ಆತನ ಹಸ್ತಲಾಘವ ಮಾಡಿ ಕುಶಲಪ್ರಶ್ನೆಗಳನ್ನು ಕೇಳುವ ಉದ್ದೇಶದಿಂದ ಮುಂದೊತ್ತಿಬಂದುದರಿಂದ ರಘುನಾಥಪಂತನು ಆತನನ್ನು ಅಲ್ಲಿಯೇ ಬಿಟ್ಟು ಹಿಂದೆ ತಡೆದ ತನ್ನ ತಂದೆ ತಾಯಿಗಳನ್ನು ಹುಡುಕಿ ಹೋದನು. ತನ್ನ ಹಿಂದೆಯೆ ದ್ವಾರಕಾನಾಥನು ಮಾತ್ರ ಬಂದುದನ್ನು ಕಂಡು "ಅಮ್ಮ ಎಲ್ಲಿ!" ಎಂದು ರಘುನಾಥನು ತಂದೆಯೊಡನೆ ಕೇಳಿದನು. 'ಹಿಂದಿನಿಂದ ಬರುತ್ತಾಳೆ' ಎಂದು ಅವಸರದಿಂದ ಆತನು ಉತ್ತರವಿತ್ತು ಮುಂದರಿಸಿದನು.

ಅಷ್ಟರಲ್ಲಿ ಸುಲೋಚನೆಯ ಸ್ಥಿತಿಯೇ ವಿಪರೀತವಾಗಿತ್ತು. ಜಂಗಬಹದ್ದೂರನ ಸ್ವರವು ಕಿವಿಗೆ ಬಿದ್ದೊಡನೆಯೇ "ಇದೇನು! ಅವನದೇ ಸ್ವರ! ಆಶ್ಚರ್ಯ! ಆಶ್ಚರ್ಯ! ಆ ಸ್ವರವು ಈಗ ಹಲವು ವರ್ಷಗಳು ದಾಟಿದರೂ ನನ್ನ ಕಿವಿಯನ್ನು ಕುಲುಕುವಂತಿದೆ. ಪೇಟದೊಳಗಿನಿಂದ ಕಿವಿಯ ಮೇಲ್ಗಡೆ ಇಣಿಕಿ ನೋಡುವಂತಿರುವ ಒಂದೆರಡು ಕೂದಲುಗಳು ವಯಸ್ಸು ಮೀರಿದುದನ್ನು ಸೂಚಿಸುತಿದ್ದರೂ ಹಿಂದೆ ಎಷ್ಟೋ ಹಿಂದೆ ನೋಡಿದ ಆ ನಡಿಗೆಯ ಬೆಡಗು ಆ ಗಂಭೀರಭಾವ ಇವು ನನ್ನ ಹೃದಯದಲ್ಲಿ ಇನ್ನೂ ಅಳಿಸಿ ಹೋಗಿಲ್ಲ. ಆ ವ್ಯಕ್ತಿಯನ್ನೇ ಈಗ ನನ್ನ ಮುಂದೆ ನಿಲ್ಲಿಸಿದಂತಾಗಿದೆ. ಇದೇ ಆ ಮೂರ್ತಿ!" ಎಂದು ಯೋಚಿಸುತ್ತಾ ಕಣ್ಣುಕತ್ತಲೆ ಬಂದವಳಂತೆ ಗೇಟಿನ ಸಮೀಪದಲ್ಲಿರುವ ಒಂದು 'ಸೀಟಿನ' ಮೇಲೆ ಸುಲೋಚನೆ ಕುಳಿತು ಬಿಟ್ಟಿದ್ದಳು. ಅವಳಿಗೆ ಇದು ಕನಸಿನ ಮಾಯೆಯೋ ಅಥವಾ ತಾನು ಪ್ರಜ್ಞೆ ತಪ್ಪಿದ್ದೇನೋ ಎಂದು ನಿಶ್ಚಯಿಸುವಷ್ಟು ಸಾಧ್ಯವಿರಲಿಲ್ಲ. ಏನನ್ನೊ ಚಿಂತಿಸುತ್ತಾ ಕಣ್ಣು ಮುಚ್ಚಿಕೊಂಡು ಕುಳಿತಿದ್ದಳು.

ಅಷ್ಟರಲ್ಲಿ ರಘುನಾಥನು ಅವಳನ್ನು ಕಂಡು ಅಲ್ಲಿಗೆ ಓಡಿಬಂದು "ಅಮ್ಮಾ! ಏನು ಇಲ್ಲೆ ಕುಳಿತುಬಿಟ್ಟಿರಿ? ಈಗ 2, 3 ದಿನಗಳಿಂದಲೂ ಇದ್ದ ಕೆಲಸದ ಧಾವತಿಯಿಂದ ಆಲಸ್ಯ ಉಂಟಾಯಿತೇ?"

**ಸುಲೋಚನೆ**:— ಅಲ್ಲ; ಫಕ್ಕನೆ ವಾಯುಕಸ ಬಂದಂತಾಯಿತು. ಶ್ವಾಸ ಕಟ್ಟಿಹೋದಂತಾಯಿತು. ಇಲ್ಲಿಯೆ ಕುಳಿತುಬಿಟ್ಟೆ.

**ರಘುನಾಥನು** (ಒಂದೆರಡು ನಿಮಿಷಗಳನಂತರ):— ಅಮ್ಮಾ! ಈಗ ಸ್ವಲ್ಪ ಉಪಶಮನವಾಯಿತೇ? ಆಮಂತ್ರಿತರೆಲ್ಲರೂ ನಿಮ್ಮನ್ನು ಕಾಯುವರು. ಸ್ತ್ರೀಯರಿಗೆ ಫಲಾಹಾರದ ವ್ಯವಸ್ಥೆ ನೀವೇ ನೋಡಿಕೊಳ್ಳಬೇಕಾಗಿದೆ. ಹೋಗೋಣವೇ?

ಸುಲೋಚನೆ ಮೆಲ್ಲಗೆ ಎದ್ದು ಮುಖದ ಬೆವರನ್ನು ಕೈವಸ್ತ್ರದಿಂದ ಒರಸಿಕೊಳ್ಳುತ್ತಾ "ಮಗೂ, ರಘುನಾಥ! ನಿನ್ನ ಪ್ರಾಣದಾತರಾದ ಬಹದ್ದೂರ ಮಹಾಶಯರು ಫಲಾಹಾರ ಮುಗಿಸಿದ ಮೇಲೆ ಅವರನ್ನು ತೋಟದೊಳಗೆ ಕರೆದುಕೊಂಡು ಬಂದುಬಿಡು. ನನ್ನ ನಾಲಗೆಯಿಂದಲೇ

ಅವರಿಗೆ ಧನ್ಯವಾದವನ್ನು ಅರ್ಪಿಸಲು ನನ್ನ ಹೃದಯವು ತವಕಿಸುತ್ತದೆ. ನಾನು ಹೇಳಿದ್ದನ್ನು ಮರೆಯಬೇಡ, ಕಂಡೆಯಾ?" ಎಂದು ಹೇಳಿ ಮೂರನೆ ಕೋಣೆಯ ಕಡೆಗೆ ಲಗುಬಗೆಯಿಂದ ಹೋದಳು.

ಫಲಾಹಾರ, ಚಾ, ಕಾಫಿ, ಸೋಡಾ, ಪಾನಕ, ಇತ್ಯಾದಿಗಳ ಸೇವನೆಯಾದ ಮೇಲೆ ಆಮಂತ್ರಿತರೆಲ್ಲರನ್ನು ನಾಲ್ಕನೆಯ ಕೋಣೆಯ ಒಳಗೆ ಬರಬೇಕೆಂದು ದ್ವಾರಕಾನಾಥನು ಕರೆದುಕೊಂಡು ಹೋದನು. ರಘುನಾಥನು ಜಂಗಬಹದ್ದೂರನ ಕೈಯನ್ನು ಮೆಲ್ಲಗೆ ಮುಟ್ಟಿ ತನ್ನ ತಾಯಿಯ ಮನೋಇಂಗಿತವನ್ನು ತಿಳಿಸಿದನು. ಆಗ ಜಂಗಬಹದ್ದೂರನು ಜನಸಮುದಾಯವನ್ನು ಒತ್ತಟ್ಟಿಗೆ ಉಳಿದು ರಘುನಾಥನೊಂದಿಗೆ ಕೋಣೆಯೊಳಗೆ ಮುಂದುವರಿಸಿ ಹೋದನು. ಅಲ್ಲಿ ಸುಲೋಚನೆ ಇವರಿಬ್ಬರ ಆಗಮನವನ್ನು ಹಾರೈಸಿಕೊಂಡು ನಿಂತಿದ್ದಳು. ತನ್ನ ಎದೆಗುಂಡಿಗೆಯು 'ದಡದಡ' ಎನ್ನುತ್ತಿದ್ದರೂ ಕೈಲಾದ ಮಟ್ಟಿಗೆ ಮನಸ್ಸನ್ನು ದೃಢಮಾಡಿಕೊಂಡು ಜಂಗಬಹದ್ದೂರನು ಸಮೀಪಿಸಿದೊಡನೆಯೇ ತನ್ನ ಕೈಗಳನ್ನು ಜೋಡಿಸಿ ಸುಲೋಚನೆ ನಮಸ್ಕರಿಸಿದಳು. ಜಂಗಬಹದ್ದೂರನು 'ರಾಮರಾಮ' ಮಾಡಿ, ಇಬ್ಬರೂ ತುಸುಹೊತ್ತು ಒಬ್ಬರನ್ನೊಬ್ಬರು ನೋಡುತ್ತಾ ನಿಂತರು. ರಘುನಾಥನು ಆಗ ನಡುವೆ ಬಾಯಿ ಹಾಕಿ—"ಅಮ್ಮಾ! ಜಂಗಬಹದ್ದೂರರು ಫಲಾಹಾರದ ಭಕ್ಷ್ಯಭೋಜ್ಯಗಳಲ್ಲಿ ಒಂದೇ ವಸ್ತುವನ್ನಾದರೂ ಮುಟ್ಟಲಿಲ್ಲ. ಅವರಿಗೆ ಇಂದು ಸ್ವಲ್ಪ ಅನಾರೋಗ್ಯವಿದೆಯಂತೆ. ತನಗೆ ಶಿರೋಭ್ರಮಣವಿತ್ತು ಎಂದು ಹೇಳಿದರು" ಅಂದನು.

ಸುಲೋಚನೆ ಅದನ್ನು ಕೇಳಿದೊಡನೆ ನಿಟ್ಟುಸಿರನ್ನು ಬಿಟ್ಟು "ಮಹಾಶಯರೇ! ತಮಗೆ ಅನಾರೋಗ್ಯವಿದ್ದರೂ ನಮ್ಮ ಆಮಂತ್ರಣವನ್ನು ಸ್ವೀಕರಿಸಿದುದಕ್ಕಾಗಿ ತುಂಬಾ ಧನ್ಯವಾದಗಳು. ನನ್ನ ಒಬ್ಬನೇ ಮಗನಾದ ಈ ರಘುನಾಥನ ಪ್ರಾಣವನ್ನು ಉಳಿಸಿದುದಕ್ಕಾಗಿ ನಾವು ತಮಗೆ ಚಿರಋಣಿಗಳು. ಇಲ್ಲಿಗೆ ಬಂದ ಮೇಲೆ ಒಂದಿಷ್ಟು ಶರಬತ್ತನ್ನಾದರೂ ದಾಹಪರಿಹಾರಾರ್ಥವಾಗಿ ಕುಡಿಯಬೇಡವೆ?" ಎಂದು ವಿನಯದಿಂದ ಕೇಳಿಕೊಂಡಳು. ಅಷ್ಟರಲ್ಲಿ ರಘುನಾಥನು ಶರಬತ್ತನ್ನು ಸ್ವತಃ ಬೆರಸಿ ತರುವುದಕ್ಕಾಗಿ ಕೋಣೆಯೊಳಕ್ಕೆ ಹೋದನು.

**ಜಂಗ**:—ತಮ್ಮ ಮಗನ ಪ್ರಾಣವು ನನ್ನಿಂದಲೇ ಉಳಿಯಿತು ಎಂದು ನನ್ನ ಪ್ರಶಂಸೆಯನ್ನು ಮಾಡಿದಿರಿ. ನನ್ನ ಕೆಲಸವು ಅಷ್ಟೊಂದು ಮಹತ್ವದ್ದಾಗಿ ನನಗೆ ಕಾಣುವುದಿಲ್ಲ.

**ಸುಲೋಚನೆ**:—"ತನ್ನ ಸಾಹಸವನ್ನು ತೃಣೀಕರಿಸಿ ನುಡಿಯುವಂಥಾದ್ದು ತಮ್ಮಂಥ ಪೂಜ್ಯರಿಗೆ ತಕ್ಕದ್ದೇ ಸರಿ. ಆದರೆ ಮಗನ ಪ್ರಾಣದ ಮೌಲ್ಯವು ತಾಯಿಯಾದವಳಿಗೆ ಮಾತ್ರ ಗೊತ್ತಿದೆ. ತನ್ನ ಮರಿಯನ್ನು ಗಿಡುಗನು ಬೆನ್ನಟ್ಟಿ ಬಂದರೆ ಒಂದು ಕೋಳಿಯಾದರೂ ತನ್ನ ಗರಿಕೆದರಿಕೊಂಡು ಹಾರಿಯಾಡುತ್ತಾ ತನ್ನ ಬಡ್ಡಾದ ಕೊಕ್ಕಿನಿಂದ ಕುಕ್ಕಿ ಆ ಗಿಡುಗನನ್ನು ಓಡಿಸಲು ಯತ್ನಿಸುತ್ತದೆ. ಅತೀ ಸಾಧುವಾದ ಪಾರಿವಾಳವು ಕೂಡಾ ಮೊಟ್ಟೆಗಳ ಮೇಲೆ ಕುಳಿತು ಕಾವು ಕೊಟ್ಟು ಮರಿಮಾಡುವಾಗ ತನ್ನ ಗೂಡಿನೊಳಕ್ಕೆ ಯಾರನ್ನೂ ಬರಲೀಸುವುದಿಲ್ಲ.

**ಜಂಗ**:—ಹೌದು. ಸಂಸಾರಬಂಧನದಲ್ಲಿ ಸಿಲುಕುವುದು ನನ್ನ ಹಣೆಯಲ್ಲಿ ಬರೆದಿಲ್ಲ. ಆದುದರಿಂದ ನಿಮ್ಮಷ್ಟು ಅನುಭವವು ನನ್ನಲ್ಲಿಲ್ಲ.

**ಸುಲೋಚನೆ**:—ತಮ್ಮಂಥ ಶ್ರೀಮಂತರಿಗೂ ಸಂಸಾರಬಂಧನದ ಮೇಲೆ ವೈರಾಗ್ಯವುಂಟಾದುದು ಆಶ್ಚರ್ಯ!

**ಜಂಗ**:—ಅದೇನೂ ಆಶ್ಚರ್ಯವಲ್ಲ. ಮನುಷ್ಯನು ಅದೃಷ್ಟದ ಗುಲಾಮನಾಗಿದ್ದಾನೆ. ಎಲ್ಲವನ್ನು ತಾನೆ ಮಾಡಿದೆನೆಂದು ಆತನು ಅಹಂಕಾರ ತಳೆದರೂ ನಿಜವಾದ ಸೂತ್ರಧಾರನು ಬೇರೆಯೇ ಇದ್ದಾನೆ.

**ಸುಲೋಚನೆ**:—ಅದು ಸರಿ! ಆದರೆ ಆ ಬಗೆಯ ಅಹಂಕಾರವಾಗಲೀ ಆತ್ಮಪ್ರೇಮವಾಗಲೀ ಇಲ್ಲದಿದ್ದರೆ ಸಂಸಾರವು ನಿಸ್ಸಾರವಾಗಿತ್ತಲ್ಲವೇ?

**ಜಂಗ**:—ನಿಜ, ಅದಕ್ಕಾಗಿಯೇ ಪರಮಾತ್ಮನು ಮರೆಯಲ್ಲಿ ನಿಂತು ಸೂತ್ರಗಳನ್ನು ಹಿಡಿದಿದ್ದಾನೆ. ಸಂಸಾರದ ರಂಗಸ್ಥಳದಲ್ಲಿ ಬೊಂಬೆಯು ಕುಣಿಯುತ್ತದೆ. ಒಮ್ಮೆ ಅದು ರಾಮನಾಗುತ್ತದೆ— ಇನ್ನೊಮ್ಮೆ ಅರ್ಜುನನಾಗುತ್ತದೆ. ತನ್ನ ಆಟವು ಮುಗಿದ ಮೇಲೆ ಪೆಟ್ಟಿಗೆಯೊಳಗೆ ಹಾಯಾಗಿ ಮಲಗುತ್ತದೆ. ವೀಣೆಯ ತಂತಿಯನ್ನು ಮಿಾಟಿದಾಗ ಇಂಪಾದ ಸ್ವರವು ಹೊರಡುತ್ತದೆ. ಆದರೆ ಬಾರಿಸುವವನು ಬೇರೆ, ತಂತಿಯು ಬೇರೆ.

**ಸುಲೋಚನೆ:**—ಆ ದೈವಘಟನೆಯು ಮಾತಂತಿರಲಿ. ತಾವು ಇದುವರೆಗೂ ಅವಿವಾಹಿತರಾಗಿರುವುದಕ್ಕೆ ಬಲವಾದ ಕಾರಣಗಳು ಏನಾದರೂ ಇವೆಯೋ?

ಈ ಮಾತನ್ನು ಕೇಳುವಾಗ ಸುಲೋಚನೆ ಜಂಗ ಬಹದ್ದೂರನ ಮುಖವನ್ನೇ ಎವೆಯಿಕ್ಕದೆ ನೋಡುತ್ತಿದ್ದಳು. ಅವಳ ಕುತೂಹಲವನ್ನು ತೃಪ್ತಿಸಲೇ ಎಂದು ಅರೆಕ್ಷಣ ಜಂಗ ಬಹದ್ದೂರನು ಯೋಚಿಸಿದನು. ಆ ಮೇಲೆ ಅವಳನ್ನೇ ನೋಡುತ್ತಾ "ಸರಿ! ನಾನು ಅವಿವಾಹಿತನಾಗಿರುವುದಕ್ಕೆ ಅಂಥ ವಿಶೇಷ ಕಾರಣಗಳೇನೂ ಇಲ್ಲ. ಅದೊಂದು ಜೀವನದ ಚಿಕ್ಕ ಪ್ರಶ್ನೆ. ನನ್ನ ತಾರುಣ್ಯದಲ್ಲಿ ನನ್ನ ಪ್ರೇಮವು ಒಂದು ಕಡೆ ನೆಟ್ಟಿತ್ತು. ಅಕಸ್ಮಾತ್ ಅಂದರೆ ನನ್ನ ತಪ್ಪೇನೂ ಇಲ್ಲದೆ ನಮಗಿಬ್ಬರಿಗೂ ಅಗಲಿಕೆಯುಂಟಾಯಿತು. ಹತ್ತಿಪ್ಪತ್ತು ವರುಷಗಳು ದಾಟಿದ ಮೇಲೆ ನಾನು ಆ ಸ್ಥಳಕ್ಕೆ ಬಂದು ವಿಚಾರಿಸುವಾಗ ಅವಳು ಇನ್ನೊಬ್ಬನನ್ನು ವರಿಸಿದ್ದಳು ಎಂದು ಗೊತ್ತಾಯಿತು. ಅದರಲ್ಲಿ ತಪ್ಪು ಅವಳದೆಂದು ನಾನು ಹೇಳಲಾರೆ. ಅಂದಿನಿಂದ ನನ್ನ ಎದೆಯಲ್ಲಿ ಹರಿಯುತ್ತಿದ್ದ ಪ್ರೇಮದ ಒರತೆಯು ಚಿಂತೆಯ ಬೇಗೆಯಿಂದ ಬತ್ತಿ ಹೋಯಿತು. ನನ್ನ ಹೃದಯವೆಂಬುದು ಈಗ ಮರುಭೂಮಿಯಂತಾಗಿದೆ. ಆ ಬೇಗೆಯಿಂದ ಉಂಟಾದ ಪ್ರೇಮ ಮರೀಚಿಕೆಯು ನನ್ನಲ್ಲಿ ಒಂದೊಂದು ಸಲ ಕಂಡು ಬಂದರೂ ಅದರಿಂದ ತೃಷ್ಣಾಬಾಧೆಯು ನಿವಾರಣೆಯಾಗಲಾರದು.

**ಸುಲೋಚನೆ:**—(ಜಂಗಬಹದ್ದೂರನನ್ನೆ ನೋಡುತ್ತ) ಈಗ ತಮ್ಮ ಬಂಗಲೆಯಲ್ಲಿ ಸುಶಿಕ್ಷಿತೆಯಾದ ತರುಣಿಯೊಬ್ಬಳು ಇರುವಳಂತೆ ಅಲ್ಲವೇ? ರಘುನಾಥನು ಆ ವಿಷಯವನ್ನು ನನ್ನೊಡನೆ ಹೇಳಿದನು.

**ಜಂಗ:**—ಅರೇಬಿಯಾದ ಮರುಭೂಮಿಗಳಲ್ಲಿ ದೂರದೂರದಲ್ಲಿ ತಂಪುನೀರಿನ ಬುಗ್ಗೆಗಳು ಹೊರಡುತ್ತಿವೆಯೆಂದು ಕೇಳಿ ಬಲ್ಲಿರಾ? ಈ ಕನ್ಯಾರತ್ನವು ಮರುಭೂಮಿಯಾದ ನನ್ನ ಹೃದಯದಲ್ಲಿ ಹರಿಯುವ ಒಂದು ಬುಗ್ಗೆ. ನಿಷ್ಕಲ್ಮಷಹೃದಯಳಾದ ಬಾಲಿಕೆಯು ನನ್ನ ಉಪಕಾರವನ್ನು ಸ್ಮರಿಸುತ್ತಿದ್ದಾಳೆ. ಅವಳನ್ನು ನಾನು ನನ್ನ ಮಗಳಂತೆ ಕಾಣುತ್ತೇನೆ. ಈ ಲೋಕದ ಡಂಭಾಚಾರದ ಸಂತೆಯಲ್ಲಿ ಬೆರೆತು ಅವಳ ಮನಸ್ಸು ಕಲುಷಿತವಾಗದಂತೆ ಮಾತ್ರ ನಾನು ಎಚ್ಚರಪಟ್ಟಿರುವೆನು.

**ಸುಲೋಚನೆ:**— ಈ ಲೋಕದ ಮೇಲೆ ತಮಗೆ ಅಷ್ಟು ಜಿಗುಪ್ಸೆಯೇ?

**ಜಂಗ:**— ಆಗದೆ ಏನು? ಎಲ್ಲಿ ಸುಳ್ಳು, ಡಂಭ, ಮೋಸ ಇವುಗಳು ತಾಂಡವ ನಾಟ್ಯವನ್ನು ಮಾಡುತ್ತಿವೆಯೊ ಎಲ್ಲಿ ಸೌಜನ್ಯ, ಭೂತದಯೆ, ಅನ್ಯರ ಪರಿತಾಪಗಳಲ್ಲಿ ಅನುತಾಪ ಇವುಗಳ ಪರಿಣಾಮವು ದಾರಿದ್ರ್ಯವೋ ಅಂತಹ ಲೋಕದಲ್ಲಿ ಇದ್ದರೇನು? ಇಲ್ಲದಿದ್ದರೇನು? ಎಂಬ ಪ್ರಶ್ನೆಯು ಒಂದೊಂದು ಸಲ ನನ್ನ ಮನಸ್ಸಿನಲ್ಲಿ ಉಕ್ಕೇರಿ ಬರುತ್ತಿದೆ.

**ಸುಲೋಚನೆ:**— ಲೋಕದ ಚರ್ಯೆ-ಚೇಷ್ಟೆಗಳನ್ನು ಬಹಳ ವಿಶದವಾಗಿ ತಾವು ಚಿತ್ರಿಸಿ ತೋರಿಸುತ್ತೀರಲ್ಲಾ!

**ಜಂಗ:**— ಲೋಕದ ಮಾಯೆಯ ಅವಕುಂಠನವನ್ನು ಭೇದಿಸಲು ನಾನು ಎಷ್ಟೋ ಪ್ರಯತ್ನಿಸುತಿದ್ದೇನೆ. ಆದರೆ ನೋಡುತಿದ್ದ ಹಾಗೆ ಹೊಸ ಹೊಸ ಚಿತ್ರಗಳ ಛಾಯೆಯೇ ಕಂಡುಬರುತ್ತದಲ್ಲದೆ ನಿಜಸ್ಥಿತಿಯ ನೆಲೆ ಸರಿಯಾಗಿ ಇನ್ನೂ ಸಿಕ್ಕಿಲ್ಲ.

**ಸುಲೋಚನೆ:**— ಅತೀ ಮರ್ಮಾಂಕಿತವಾದ ಮಾತು.

**ಜಂಗ:**— ಲೋಕನಾಯಕನು ನಮ್ಮ ದೃಷ್ಟಿಯ ಶಕ್ತಿಗೆ ಮೇರೆಯನ್ನು ಕಟ್ಟಿದ್ದಾನೆ. ಅದನ್ನು ಉಲ್ಲಂಘಿಸಿ ದಿಗ್ದರ್ಶನ ಮಾಡಲಿಕ್ಕೆ ಬೇಕಾದ ಜ್ಞಾನದೃಷ್ಟಿಯನ್ನು ಸಾಧನಬಲದಿಂದಲೇ ಸಂಪಾದಿಸಬೇಕಾಗಿದೆ. ಅಷ್ಟು ಪ್ರಯಾಸವೇಕೆ ಎಂದು ಬಹುಜನ ಸಮುದಾಯವು ಅದರ ಗೊಡವೆಗೆ ಹೋಗುವುದೇ ಇಲ್ಲ.

**ಸುಲೋಚನೆ:**— ಈ ದಿಗ್ದರ್ಶನವು ಇನ್ನೂ ಭಯೋತ್ಪಾದಕವಲ್ಲವೇ?

**ಜಂಗ:**— ಲೋಕದ ಸ್ಥಿತಿಯೆಂದರೆ ನೀರು ನೆಲೆ ನಿಂತಂತೆ. ಅದನ್ನು ಗಾಜಿನ ಪಾತ್ರೆಯಲ್ಲಿ ತುಂಬಿಸಿ ಬರಿಗಣ್ಣಿನಿಂದ ನೋಡಿದರೆ ಅದು ತಿಳಿಯಾಗಿ ಕಾಣುತ್ತದೆ. ಅದನ್ನೇ ಭೂತಗನ್ನಡಿಯಿಂದ ನೋಡಿದರೆ ಅದರಲ್ಲಿ ಲಕ್ಷೋಪಲಕ್ಷ ಕ್ರಿಮಿಗಳು ನಮ್ಮ ದೃಷ್ಟಿಗೆ ಬೀಳುವವು. ಆದರೆ ಅಷ್ಟು ತಾಳ್ಮೆ ಎಲ್ಲರಿಗೂ ಬರುವುದಿಲ್ಲ. ಹಾಗೆಯೇ ಲೋಕದ ಸ್ಥಿತಿಯನ್ನು ಜ್ಞಾನದೃಷ್ಟಿಯ ಭೂತಕನ್ನಡಿಯೊಳಗಿಂದ ನೋಡುತ್ತಿರು

ವವರಿಗೆ ಲೋಕದ ಮೇಲೆ ವೈರಾಗ್ಯವುಂಟಾಗುತ್ತದೆ. ಇರುಳುಗಣ್ಣನಿಗೆ ರಾತ್ರಿಯ ಕತ್ತಲೆಯಲ್ಲಿ ಏರು ತಗ್ಗುಗಳು ಕಾಣಿಸದಂತೆ ಜನಸಾಮಾನ್ಯ ರಿಗೆ ವಿಚಾರಶಕ್ತಿಯ ಬಲವಿಲ್ಲದ್ದರಿಂದ ಅವರು ಪದೇಪದೇ ಎಡವಿ ಬೀಳು ತ್ತಾರೆ. ಅದಿರಲಿ, ನನ್ನ ಈ ಒಣ ಹರಟೆಯಿಂದ ನಿಮಗೆ ಬಲು ತ್ರಾಸ ವಾಗಿರಬಹುದು. ಡೇರೆಯಲ್ಲಿ ಗಾಯನದ ಸದ್ದು ಕೇಳಿಸುತ್ತದೆ. ಸಂಗೀ ತವನ್ನು ಸ್ವಲ್ಪ ಕೇಳಿ ನಾನು ಹೊರಟು ಹೋಗುವೆನು'' ಎಂದು ಹೇಳು ವಷ್ಟರಲ್ಲಿ ರಘುನಾಥನು ಶರಬತ್ತನ್ನು ತಂದನು. ನನಗೆ ಶೀತವಾ ಗಿದೆ ಎಂದು ಅದನ್ನು ಮುಟ್ಟದೆ ಜಂಗಬಹದ್ದೂರನು ಡೇರೆಯ ಕಡೆಗೆ ಹೋಗುತ್ತಾ "ಮನಸ್ಸೇ! ನಿನಗೆ ಎಷ್ಟೋ ಕಷ್ಟಗಳು ಬಂದಿದ್ದುವು. ಆಗ ನೀನು ಅಧೀರನಾಗಲಿಲ್ಲ. ಈಗ ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು? ನೀನು ಇಂದು ಏತಕ್ಕೆ ಚಿತ್ತ ಚಾಂಚಲ್ಯವುಳ್ಳವನಾದೆ? ನಿನ್ನ ಕೈಕಾಲುಗಳು ಏಕೆ ಕಂಪಿಸಿದುವು? ನಿನ್ನ ತುಟಿಗಳು ಏಕೆ ಅಲುಗಿ ದುವು? ನೀನು ಅವಾಕ್ಕಾಗಿ ಏಕೆ ನಿಂತುಬಿಟ್ಟೆ—ಸಂಪತ್ತು, ಸ್ತ್ರೀ, ಪುಸ್ತಕ— ಇವು ಒಮ್ಮೆ ಅನ್ಯರ ಕೈಗೆ ಸೇರಿದವು ಎಂದರೆ ಅವುಗಳ ಮೇಲೆ ನಮಗಿರುವ ಹಕ್ಕು ತಾನಾಗಿಯೇ ಕಳಚಿ ಹೋಗುತ್ತದೆ. ಈಗ ಖಿನ್ನ ಮನಸ್ಕನಾಗಬೇಡ. ನೀನು ಮಾಡತಕ್ಕ ಕೆಲಸವು ಇನ್ನೂ ಉಳಿದಿದೆ. "ಆಸೆಗೆ ಪಾರವಿಲ್ಲ ಮನವೇ ಸ್ಥಿರಿಸು.'' ಎಂದು ಯೋಚಿಸುತ್ತ ಡೇರೆ ಯೊಳಕ್ಕೆ ಕಾಲಿಟ್ಟನು. ಆ ಮೇಲೆ ತನಗೆ ದೇಹಾಲಸ್ಯವಿದೆಯೆಂದು ದ್ವಾರಕಾನಾಥನಿಗೂ ರಘುನಾಥನಿಗೂ ಹೇಳಿ ನೆಟ್ಟಗೆ ಅಸ್ಥಾನಬಾಗಿಗೆ ತೆರಳಿದನು.

## ಹದಿನೈದನೆ ಅಧ್ಯಾಯ

## ವಿಮಲಾಲನ ಒಳಸಂಚು

ಜಂಗಬಹದ್ದೂರನ ಮನಸ್ಸಿನಲ್ಲಿ ಆ ರಾತ್ರಿ ಯಾವ ಆಲೋಚನಾ ತರಂಗಗಳು ಎದ್ದು ಆತನ ನಿದ್ದೆ ಗೆಡಿಸಿದವೋ ಅಂಥ ವಿಚಾರಸರಣಿಯೇ ಸುಲೋಚನೆಯ ಮನಸ್ಸಿನಲ್ಲಿಯೂ ಕಳವಳವನ್ನು ಎಬ್ಬಿಸಿತ್ತು. ಅವನು ಯಾರೆಂದು ಗೊತ್ತುಹಚ್ಚುವ ಉದ್ದೇಶದಿಂದಲೇ ಸುಲೋಚನೆ ಅವ

ನೂಡನೆ ಮಾತುಕತೆಯನ್ನು ಬೆಳೆಸಿದ್ದಳು. ಆದರೆ ತನ್ನ ಹೃದಯದಲ್ಲಿ ಇನ್ನೂ ಅಳಿಸಿ ಹೋಗದಿರುವ ಮೂರ್ತಿಗೂ ಈ ವ್ಯಕ್ತಿಗೂ ಬಹಳ ಮಟ್ಟಿಗೆ ಹೋಲಿಕೆಯಿದ್ದರೂ ನಿಜಸ್ಥಿತಿ ಹೀಗೆಯೇ ಇದೆ ಎಂದು ಗೊತ್ತು ಹಚ್ಚಲಾರದೆ ರಾತ್ರಿಯಲ್ಲಿ ಅದನ್ನೇ ಚಿಂತಿಸುತ್ತ ಕಳೆದಳು. ದ್ವಾರಕಾ ನಾಥನಲ್ಲಿಯೂ ಅಪೂರ್ವವಾದ ಒಂದು ತರಂಗವು ಎದ್ದಿದ್ದರೂ ಆತನು ಅದನ್ನು ಅಲ್ಲಿಯೇ ಅಣಗಿಸಿ ಆ ಕುರಿತು ಯೋಚಿಸಿ ಕಾಲಕಳೆಯ ಲಿಲ್ಲ. ಆತನು ಗೌರವೋನ್ನತಿಯ ಶಿಖರಕ್ಕೇರಿದ್ದನು. ಅಲ್ಲಿಂದ ಅವ ನಿಗೆ ಅತ್ತಿತ್ತ ನೋಡಲು ಅವಕಾಶವೂ ಇದ್ದಿಲ್ಲ. ಹೀಗಾಗಿ ತನ್ನ ಪೂರ್ವ ಕಥೆಯನ್ನು ದಪ್ಪವಾದ ಮುಸುಕಿನೊಳಗಿಟ್ಟು ಯಾರಿಗೂ ಗೊತ್ತಾಗ ವಂತೆ ಭದ್ರಪಡಿಸಿದ್ದನು. ಮುಸುಕನ್ನು ತೆರೆಯುವುದಕ್ಕೆ ಆತನು ಆತುರ ನಾಗಿಯೂ ಇರಲಿಲ್ಲ. ಈ ದಂಪತಿಗಳನ್ನು ಇಲ್ಲಿಯೇ ಬಿಟ್ಟು ನಾವು ನಂದೂಲಾಲನ ಮನೆಗೆ ತೆರಳೋಣ.

ನಂದೂಲಾಲನು ದ್ವಾರಕಾನಾಥನ ಉನ್ನತಿಯನ್ನು ನೋಡಿ, ಒಳ ಗಿಂದೊಳಗೆ ಕುದಿಯುತ್ತಿದ್ದು ಪರಶುರಾಮ ದೀಕ್ಷಿತನ ಉತ್ತರವನ್ನು ಕಾಯುತ್ತಿದ್ದನು. ಒಮ್ಮೆ ದ್ವಾರಕಾನಾಥನ ಗುಟ್ಟು ಬಯಲಿಗೆ ಬಂದರೆ ಆತನನ್ನು ಗೌರವೋನ್ನತಿಯ ಶಿಖರದಿಂದ ಕೆಳಗೆ ದೊಬ್ಬಬೇಕೆಂದು ನಂದೂಲಾಲನು ತವಕಪಡುತ್ತಿದ್ದನು. ಜಂಗಬಹದ್ದೂರರಂಥವರ ಬೆಂಬ ಲವು ತನಗಿದ್ದಲ್ಲಿ ತನ್ನ ಕಾರ್ಯಸಾಧನೆಗೆ ಅಡ್ಡಿಯಾಗಲಾರದೆಂದೂ ಆತನು ತಿಳಿದಿದ್ದನು. ಅಂತೆಯೇ ಜಂಗಬಹದ್ದೂರರ ಮಿತ್ರನೆನಿಸಿ ಕೊಂಡ ಪೋಪಟಲಾಲನೊಡನೆ ವಿಮಲಾಲನ ವಿವಾಹದ ಪ್ರಸ್ತಾಪ ವೆತ್ತಿದ್ದನು. ಪೋಪಟಲಾಲನು ಅನಾಯಾಸವಾಗಿ ಈ ದತ್ತಪುತ್ರನು ತನ್ನ ಕೈಯಿಂದ ಕಳಚಿಹೋದರೆ ಜಂಗಬಹದ್ದೂರನು ತನಗೆ ಒಪ್ಪಿ ಸಿದ ಹಣದ ಸಹಾಯದಿಂದ ನಿಶ್ಚಿಂತನಾಗಿ ತಾನು ಹಿಂದಿನ ಭ್ರಮರ ವೃತ್ತಿಯನ್ನೇ ಕೈಕೊಳ್ಳಬಹುದೆಂದು ಯೋಚಿಸಿದನು. ಆದರೆ ಒಮ್ಮೆಯೇ ಸಮ್ಮತಿಯನ್ನಿತ್ತರೆ ಗಂಡಿನ ಕಡೆಯವರ ಗೌರವ ತಗ್ಗುತ್ತ ದೆಂದು ಯೋಚಿಸಿ, ತನ್ನ ಮಗನು ಈ ವಿವಾಹಕ್ಕೆ ಒಪ್ಪುವನೊ ಇಲ್ಲವೊ ಎಂದು ಆತನೊಡನೆ ವಿಚಾರಿಸಿ ತಿಳಿಸುವುದಾಗಿ ನಂಬಿಕೆ ಕೊಟ್ಟು

ಪೋಪಟಲಾಲನು 'ಟೀ ಪಾರ್ಟಿ' ಮುಗಿದ ಅನಂತರ ತನ್ನ ಮನೆಗೆ ತೆರಳಿದನು. ಆದರೆ ನಂದೂಲಾಲನು ಅಲ್ಲಿಂದ ಅಗಲುವ ಮುಂಚೆಯೇ ತಂದೆ ಮಗಂದಿರನ್ನು ಮರುದಿನ ತನ್ನ ಮನೆಗೆ ಸಾಯಂಕಾಲ ಚಾ ಕುಡಿಯುವುದಕ್ಕಾಗಿ ಆಮಂತ್ರಿಸಿದನು. ಪೋಪಟಲಾಲನು ತನಗೆ ಬೇರೊಂದು ಕಡೆಗೆ ಹೋಗಬೇಕಾಗಿದೆ ಎಂದು ನೆವನ ಹೇಳಿದನು. ವಿನುದಲಾಲನು ನಾಟ್ಯ ಸಂಗೀತಗಳ ಕಡೆಗೆ ಲಕ್ಷ್ಯಕೊಟ್ಟಂತೆ ತೋರಿಸಿ ಕೊಂಡರೂ ತನ್ನ ಸಾಕುತಂದೆಗೂ ನಂದೂಲಾಲನಿಗೂ ನಡೆದ ಸಂಭಾಷಣೆಯನ್ನೆಲ್ಲವನ್ನು ಕೇಳಿದ್ದರಿಂದ ಚಾ ಕುಡಿಯುವುದಕ್ಕೆ ಬರುವೆನೆಂದು ಮಾತುಕೊಟ್ಟನು.

ಮರುದಿನ ಸಾಯಂಕಾಲ 5 ಗಂಟೆಯ ಸಮಯಕ್ಕೆ ವಿನುದ ಲಾಲನು, ತನ್ನ ಯೌವನಕ್ಕೂ, ದ್ರವ್ಯಾನುಕೂಲಕ್ಕೂ ಒಪ್ಪುವ ರೀತಿ ಯಲ್ಲಿ ಅಲಂಕರಿಸಿಕೊಂಡು ನಂದೂಲಾಲನ ಮನೆಗೆ ಹೋದನು. ನಂದೂಲಾಲನು ಎಲ್ಲವನ್ನು ಸಿದ್ಧಮಾಡಿಯೇ ಇದ್ದು ತನ್ನ ಪತ್ನಿಯು ತನ್ನ ಅಭಿಪ್ರಾಯಕ್ಕೆ ಸಮ್ಮತಿಸುವಂತೆ ಅವಳಿಗೆ ಎಚ್ಚರಕೊಟ್ಟಿದ್ದನು.

ವಿನುದಲಾಲನು ಬಂದೊಡನೆ, ನಂದೂಲಾಲನು ಆತನನ್ನು ತನ್ನ ಉಪ್ಪರಿಗೆಯ ಚೈತಕಿನ ಕೋಣೆಗೆ ಕರೆದುಕೊಂಡು ಹೋಗಿ, ಒಂದು ಕುರ್ಚಿಯಲ್ಲಿ ಕುಳ್ಳಿರಿಸಿದನು. ಇನ್ನೊಂದು ಕೋಣೆಯಿಂದ ಬಾಗಿಲು ತೆರೆಯಿತು. ನಂದೂಲಾಲನ ಪತ್ನಿ ಚಂಚಲೆ ತನ್ನ ಮಗಳನ್ನು ಚೆನ್ನಾಗಿ ಅಲಂಕಾರ ಮಾಡಿ ಕರೆದುಕೊಂಡು ಬಂದು ಒಂದು ಸೋಫಾದ ಮೇಲೆ ಕುಳ್ಳಿರಿಸಿದಳು. "ಮಗೂ! ಸತಾರನ್ನು ಬಾರಿಸುತ್ತ ಒಂದೆರಡು ಹಾಡನ್ನು ಹೇಳಮ್ಮಾ!" ಎಂದು ನಂದೂಲಾಲನು ತನ್ನ ಮಗಳಿಗೆ ಹೇಳಿದನು. ಅವಳು ಒಂದೆರಡು ಹಾಡುಗಳನ್ನು ಹಾಡಿದಳು. ವಿನುದಲಾಲನು ಗಾಯನದಲ್ಲಿ ತುಂಬ ಅಭಿರುಚಿಯುಳ್ಳವನಂತೆ ತಲೆದೂಗುತ್ತ, ಕೈಯಿಂದ ತಾಳ ಹಾಕುತ್ತಾ, ನಿರ್ಲಜ್ಜದೃಷ್ಟಿಯಿಂದ ಆ ಬಾಲಿಕೆಯನ್ನು ನೋಡುತ್ತ ಮರುಳು ಹಿಡಿದ ಮಂಗನಂತೆ ವರ್ತಿಸಲಾರಂಭಿಸಿದನು. ಇದನ್ನು ಕಂಡು ನಂದೂಲಾಲನ ಪತ್ನಿಗೆ ಸ್ವಲ್ಪ ಜುಗುಪ್ಸೆಯುಂಟಾದರೂ ವಿನುದಲಾಲನ ಧನದಾಸೆಯಿಂದ ತನ್ನ ಮಗಳಿಗೆ ಆತನು ಅನುರೂಪನಾದ ವರನೆಂದು

ಭಾವಿಸಿದಳು. ವಿಮುದಲಾಲನು ಒಂದು ತಾಸು ಸಮಯ ಅಲ್ಲಿದ್ದು, ನಂದೂಲಾಲನನ್ನು ಬೀಳ್ಕೊಂಡು ಅವನ ಮನೆಯಿಂದ ಹೊರಬಿದ್ದು ತನ್ನ ಭಾವೀಸುಖದ ವಾಯುಗೋಪುರಗಳನ್ನು ಕಟ್ಟಿ ಅವುಗಳಲ್ಲಿ ವಿಹರಿಸುತ್ತ ಹೋಗುತಿದ್ದನು.

ಅಷ್ಟರಲ್ಲಿ ಯಾರೊ ಅವನ ಭುಜವನ್ನು ತಟ್ಟಿ "ಭಿಕಾಜೀ?" ಎಂದು ಕರೆದಂತಾಯಿತು. ವಿಮುದಲಾಲನು ಹಿಂತಿರುಗಿ ನೋಡಿದನು. ಭುಜವನ್ನು ತಟ್ಟಿದ ವ್ಯಕ್ತಿಯು "ಭಿಕಾಜೀ! ಏನೊ ಆಲೋಚನೆ ಯಲ್ಲಿ ಮಗ್ನನಾಗಿರುವೆ. ನಿನ್ನ ಹಿಂದು ಮುಂದೆ ಒಂದೆರಡು ಸಲ ಸುಳಿದೆನು. ಕೈಯಿಂದೆ ಸನ್ನೆ ಮಾಡಿದೆನು. ನಿನಗೆ ಅದು ಗೋಚ ರಿಸಲೇ ಇಲ್ಲ. ಹೀಗೆ ನೀನು ನನ್ನನ್ನು ಮರೆಯ ಬಹುದೇ? ನಿನ್ನ ತಲೆಗೆ ಹತ್ತಿರುವ ಅಂಥ ದೊಡ್ಡ ವಿಚಾರವೇನು?"

**ವಿಮುದ:**—ಗಂಗಾರಾಮ! ಇಲ್ಲಿ ಮಾತನಾಡಬೇಡ. ನಿನಗೆ ಈ ಮೊದಲೇ ಹೇಳಿದೆನಲ್ಲವೇ?

**ಗಂಗಾ:**—(ಕಣ್ಣುರೆಪ್ಪೆಗಳನ್ನು ಪಟಪಟ ಮುಚ್ಚಿ ತೆರೆಯುತ್ತ) "ಹಾಗಿದ್ದರೆ ಇಗೊ! ನನ್ನ ಬಂಗಲೆ ಸಮೀಪದಲ್ಲಿಯೇ ಇದೆ. ಅಲ್ಲಿಗೆ ಬಾ. ಇದುವರೆಗೆ ನನ್ನ ಬಂಗಲೆಯಲ್ಲಿ ನೀನು ಕಾಲಿಟ್ಟಿಲ್ಲ. ಅಲ್ಲಿ ಕುಳಿತು ಒಂದು ಕಪ್ಪು ಚಾ ಕುಡಿಯೋಣ" ಎಂದು ಒಂದು ಅಷ್ಟ ಓಣಿಯೊಳಗಿರುವ ಚಿಕ್ಕ ಮಹಡಿಮನೆಗೆ ಗಂಗಾರಾಮನು ವಿಮುದಲಾಲ ನನ್ನು ಕರೆದುಕೊಂಡು ಹೋದನು.

ಗಂಗಾರಾಮನು ವೃದ್ಧಾಪ್ಯವನ್ನು ಸುಖದಲ್ಲಿ ನಿರಾತಂಕವಾಗಿ ಕಳೆಯುವ ಹಂಚಿಕೆಯನ್ನು ಮಾಡಿದ್ದನು. ಅಡಿಗೆಗೆ ಒಂದು ಆಳನ್ನು ನೇಮಿಸಿ, ಮನೆಗೆ ಬೇಕುಬೇಕಾದ ಸಾಹಿತ್ಯಸಾಮಗ್ರಿಗಳನ್ನು ಒದಗಿಸಿ ಕೊಂಡಿದ್ದನು. ಮಹಡಿಯ ಕೋಣೆಯನ್ನು ಪ್ರವೇಶಿಸಿದಾಗ ಒಂದು ಮೇಜು, ಎರಡು ಆರಾಮ ಕುರ್ಚಿ, ಮೇಜಿನ ಮೇಲೊಂದು ನಿಲು ಗನ್ನಡಿ, ಕೋಣೆಯ ಒಂದು ಬದಿಯ ಗೋಡೆಯಲ್ಲಿ ಅಂಗಿಪೋಷಾಕನ್ನು ತೂಗುವ ಕೊಕ್ಕೆ, ಗುಡಾಕ ಸೇದುವುದಕ್ಕೆ ಒಂದು ಜರ್ಮನ ಬೆಳ್ಳಿಯ 'ಚಿಲಮ್' ಇವನ್ನೆಲ್ಲ ಒದಗಿಸಿಕೊಂಡಿದ್ದನು. ವಿಮುದಲಾಲನು ಅಲ್ಲಿದ್ದ

ಆರಾಮಕುರ್ಚಿಯಲ್ಲಿ ನೆಟ್ಟಗೆ ಕುಳಿತನು. ಅಷ್ಟರಲ್ಲಿ ಗಂಗಾರಾಮನು ತನ್ನ ಆಳಿಗೆ ಹೇಳಿ ಒಂದು ಕಪ್ ಚಾ ಮತ್ತು ಒಂದಿಷ್ಟು ಮಿಠಾಯಿಯನ್ನು ವಿಮದಲಾಲನ ಮುಂದಿರಿಸಿ "ಭಿಕಾಜೀ! ಇದೆಲ್ಲ ನಿನ್ನ ಹಣದ ಮಹಾತ್ಮ್ಯೆ ನೋಡು, ಆದರೆ ಅದಕ್ಕಾಗಿ ಸಂಕೋಚಪಡಬೇಡ. ಆ ಮೇಲೆ ಒಂದು ಗಳಿಗೆ ನಿನ್ನೊಡನೆ ಕುಶಲವಾರ್ತೆಯನ್ನು ವಿಚಾರಿಸಲು ಇದೆ" ಎಂದು ಸೂಚಿಸಿದನು.

**ವಿಮದ:**—ಈಗ ನನಗೇನೂ ತಿಂಡಿ ಬೇಡ. ನಾನು ಈಗ ಕೆಳಗೆ ಇಳಿದು ಬಂದ ಮನೆಯಲ್ಲಿ ನನಗೆ ಉಪಾಹಾರವಿತ್ತು. ಈಗ ಹೇಳುವುದೇನಿದೆ? ಬೇಗನೆ ಹೇಳು.

**ಗಂಗಾ:**—ಓಹೊ ಅಷ್ಟು ಅವಸರವೇ? ನಿನ್ನದೆ ಆಗಿದ್ದ ಈ ಮನೆಗೆ ಒಮ್ಮೆ ನಿನ್ನನ್ನು ಕರೆಸಬೇಕೆಂದಿದ್ದೆನು. ನೀನು ಕಣ್ಣಿಗೆ ಬೀಳಲೆ ಇಲ್ಲ. ಈ ದಿನ ಬೀದಿಯಲ್ಲಿ ಸುಳಿದಾಡುವಾಗ ನೀನು ಒಂದು ದೊಡ್ಡ ಮನೆಯನ್ನು ಪ್ರವೇಶಿಸಿದ್ದನ್ನು ಕಂಡೆನು. ನೀನು ನನ್ನ ಕೈತಪ್ಪಿ ಹೋದೆ ಎಂದು ನಾನು ನಿನ್ನನ್ನು ಕಾದು ಎದುರುಮನೆಯ ಹೊರಜಗಲಿಯ ಮೇಲೆ ಕುಳಿತುಕೊಂಡೆನು. ನೀನು ಕೆಳಗೆ ಇಳಿದು ಬರುವಾಗ ಕೈಸನ್ನೆ ಮಾಡಿದರೂ ಕೈತಟ್ಟಿದರೂ ನೀನು ಕತ್ತೆತ್ತಿ ನನ್ನ ಕಡೆಗೆ ನೋಡಲಿಲ್ಲ. ಏನೊ ಗೂಢವಿಚಾರದಲ್ಲಿ ಬಿದ್ದವನಂತೆ ಕಾಣಿಸಿತು. ಆಗ ಆ ಮನೆಯನ್ನು ಹೇಗೆ ಸುಲಿಗೆ ಮಾಡಬಹುದು ಎಂಬ ಪ್ರಶ್ನೆ ನಿನ್ನಲ್ಲಿ ಬಂದಿದೆ ಎಂದು ನನಗೆ ಹೊಳೆಯಿತು. ಸುಲಿಗೆ ಮಾಡುವುದಾದರೆ ನನ್ನ ಸಹಾಯ ನಿನಗೆ ಬೇಕಾದೀತು ಎಂದು ನಿನ್ನನ್ನೆ ಬೆಂಬತ್ತಿ ಬಂದೆನು. ಇದಲ್ಲದೆ ಇನ್ನೊಂದು ಕಾರಣವೂ ಇತ್ತು. ನನ್ನ ಖರ್ಚಿನ ಅಂದಾಜು ಮಾಡಿದೆನು. ವಿಮದಲಾಲನ ಗೆಳೆಯನಂತೆ ಇದ್ದು ಜೀವಿಸಬೇಕಾದರೆ ತಿಂಗಳಿಗೆ ಇನ್ನೂರು ರೂಪಾಯಿಯಾದರೂ ಬೇಕಾಗುವುದು. ಈಗ ನೀನು ಕೊಡುವ ಹಣವು "ಉಪ್ಪಿಗಿದ್ದರೆ ತುಪ್ಪಕ್ಕಿಲ್ಲ, ತುಪ್ಪಕ್ಕಿದ್ದರೆ ಉಪ್ಪಿಗಿಲ್ಲ" ಎಂಬಂತಿದೆ. ಮುದಿ ಪ್ರಾಯದಲ್ಲಿಯಾದರೂ ಎರಡು ಹೊತ್ತು ಹೊಟ್ಟೆ ತುಂಬಾ ಊಟ ಮಾಡಬೇಡವೇ? ನೀನೇ ಹೇಳು.

ವಿಮದಲಾಲನಿಗೆ ಗಂಗಾರಾಮನು ತನ್ನಿಂದ ಇನ್ನೂ ಹೆಚ್ಚಿಗೆ

ಹಣ ಸುಲಿಯುವ ಹಂಚಿಕೆಯನ್ನು ಮಾಡುವುದರಲ್ಲಿದ್ದಾನೆಂದು ಹೊಳೆಯಿತು. ಆದರೆ ಈತನೊಡನೆ ಸಂಬಂಧವನ್ನು ತೀರಾ ಕಡಿದುಬಿಡಲಿಕ್ಕೂ ಇಲ್ಲದೆ 'ಇತ್ತಕಡೆ ಹೊಳೆ, ಅತ್ತಕಡೆ ದರಿ' ಎಂಬಂತೆ ವಿಮುದಲಾಲನ ಮನಸ್ಸನ್ನು ಕಲಕಿಬಿಟ್ಟಿತು. ಗಂಗಾರಾಮನನ್ನು ಇನ್ನೂ ಸ್ವಲ್ಪ ವೇಳೆ ಮಾತಾಡಿಸುತಿದ್ದರೆ ಅಷ್ಟರೊಳಗೆ ಆ ಪಾಪಿಗೆ ಏನಾದರೊಂದು ಯುಕ್ತಿಯನ್ನು ಹೂಡಿ ಕೈಕಟ್ಟಿ ಬಿಡುವೆನೆಂದು ಯೋಚಿಸಿ, ತನ್ನ ಅಂತರ್ಯವನ್ನು ಹೊರಗೆಡವದೆ ನಸುನಗುತ್ತ

**ವಿಮುದಲಾಲ:**—ಗಂಗಾರಾಮ! ಹಾಗಿದ್ದರೆ ಒಂದು ಉಪಾಯ ಹೇಳುವೆನು. ಇಗೊ, ಈ ಸಿಗರೇಟಿನ ಪೊಟ್ಟಣವೆಂದರೆ ನಿನಗೆ ತುಂಬಾ ಪ್ರೀತಿ, ಇದನ್ನು ಕೊಂಚ ಸೇದು.

**ಗಂಗಾರಾಮ:**—ಅಯ್ಯಯ್ಯೊ! ಅದಕ್ಕಿಂತಲೂ ನನ್ನ ಹುಕ್ಕೆಯ ಸುವಾಸನೆಯೇ ನನಗೆ ಬಲು ಸುಖ ಕೊಡುತ್ತದೆ. ಆ ಮಾತು ಬಿಡು. ನಿನ್ನ ಉಪಾಯವೇನು ಹೇಳು? ಏನು, ಊಟವನ್ನೆ ಬಿಡಬೇಕೆನ್ನುತ್ತಿಯಾ?

**ವಿಮುದ:**—ಹಾಗೇತಕ್ಕೆ ಅಂದೆ? ಇಗೊ ನಾನು ಈ ಸಾಯಂಕಾಲ ಇಳಿದು ಬಂದ ಮನೆ ಯಾರದು ಎಂದು ಗೊತ್ತಿದೆಯೇ?

**ಗಂಗಾ:**—ಯಾರೋ ಒಬ್ಬ ಶ್ರೀಮಂತರದು ಇರಬೇಕು ಎಂದು ನಾನು ಆಗಲೇ ಹೇಳಿದೆನಲ್ಲ! ಆದರೆ ಅಲ್ಲಿ ದರೋಡೆ ಮಾಡುವುದೊಂದು ಸುಲಭ ಕೆಲಸವೆಂದು ಯೋಚಿಸಿದೆಯಾ? ನನಗಂತೂ ದೇಹಶಕ್ತಿ ಕಡಿಮೆಯಾಗುತ್ತ ಬಂದಿದೆ. ಕೈಕಾಲುಗಳು ನಡುಗುತ್ತಿವೆ. ಕಣ್ಣು ರಾತ್ರಿಯಲ್ಲಿ ಅಷ್ಟು ಚೆನ್ನಾಗಿ ಕಾಣಿಸುವುದಿಲ್ಲ.

**ವಿಮುದ:**—ಓಹೋ ಗಂಗಾರಾಮ! ನೀನಷ್ಟು ದುಡುಕಬೇಡ. ಅದಕ್ಕಿಂತಲೂ ಇನ್ನೊಂದು ಉತ್ತಮವಾದ ಹಂಚಿಕೆಯನ್ನು ಹವಣಿಸಿದ್ದೇನೆ. ನಾನು ಇಳಿದು ಬಂದ ಮನೆಯು ನಂದೂಲಾಲನೆಂಬ ಹುಂಡಿ ಸಾಹುಕಾರನದು. ಅವನು ಹೇರಳ ಧನಿಕನು.

ಅವನಿಗೆ ಒಬ್ಬಳೇ ಮಗಳು. ಆತನು ಅವಳನ್ನು ನನಗೆ ವಿವಾಹ ಮಾಡಿಕೊಟ್ಟು ನನ್ನನ್ನು ಮನೆ ಅಳಿಯ—

**ಗಂಗಾ**:—ಅದೇ ನಾನೂ ಅಂದೆನಲ್ಲ! ಅವಳ ಕೈ ನೀನು ಹಿಡಿದೊಡನೆ ಅವನ ಮನೆ ಅಳಿಯುವಂತೆ ಮಾಡುವೆ ಎಂದು—

**ವಿಮುದ**:—ಅದೆಂಥ ಮಾತು? ಸಾಕು. ಬಿಡು. ಅವನು ಮುದುಕನಾಗುತ್ತ ಬಂದಿದ್ದಾನೆ. ಅವನ ಮನೆವಾರ್ತೆಯನ್ನೆಲ್ಲ ನಾನೇ ನೋಡಿಕೊಳ್ಳಬೇಕಂತೆ!

**ಗಂಗಾ**:—ಹಾಗಾದರೆ ನಿನಗೀಗ ಬುಧನ ದಶೆ ಬಂತೆನ್ನಬೇಕು. ಆದರೆ ರಾಹುವಿನ ದೃಷ್ಟಿ ನಿನ್ನ ಮೇಲೆ ವಕ್ರವಾದೀತು ಎಂಬುದನ್ನು ಮಾತ್ರ ಮರೆಯಬೇಡ.

**ವಿಮುದ**:—ತಡೆ! ತಡೆ! ನಿನ್ನ ಹುಕ್ಕೆಯನ್ನು ಒಮ್ಮೆ ಸೇದಿ ನನ್ನ ವೃತ್ತಾಂತವನ್ನು ಸಾವಧಾನದಿಂದ ಕೇಳು.

**ಗಂಗಾ**:—"ಈಗ ಚಿಲುಮಿಯಲ್ಲಿ ಕೆಂಡವಿಡಲು ವಿರಾಮವಿಲ್ಲ. ನಿನ್ನ ಸಿಗರೇಟಿನ ಪೊಟ್ಟಣವನ್ನು ಇತ್ತ ಕೊಡು" ಎಂದು ಒಂದು ಬತ್ತಿಯನ್ನು ಹಚ್ಚಿ ಚಿಲುಮಿಯನ್ನು ಸೇದುವಂತೆ ಕೈಮುಗುಳಿನ ನಡುವೆ ಸಿಗರೇಟನ್ನು ಹಿಡಿದು ದೊಡ್ಡದೊಂದು 'ದಮ್ಮು' ಸೇದಿ ಕೆಮ್ಮುತ್ತ, ತುಟಿಯನ್ನು ಹೊರಮುಡಚಿ ಹೊಗೆಯನ್ನು ಹೊರಬಿಡುತ್ತ ಕುಳಿತನು.

**ವಿಮುದ**:—ಅಗೊ! ಇನ್ನೊಂದು ಸಮಾಚಾರವನ್ನು ಹೇಳುವೆನು. ಮನಗೊಟ್ಟು ಕೇಳು.

ಪೋಪಟಲಾಲನು ನಿಜವಾಗಿಯೂ ನನ್ನ ತಂದೆಯಲ್ಲ.

**ಗಂಗಾ**:—ಅದೇನು? ಅವನಿಗಿಂತ ದೊಡ್ಡ ಅಪ್ಪನೊಬ್ಬ ಸಿಕ್ಕಿದನೆ?

**ವಿಮುದ**:—ಹೇಳುತ್ತೇನೆ, ಸ್ವಲ್ಪ ತಾಳು.

**ಗಂಗಾ**:—ಹುಂ! ಹೇಳು.

**ವಿಮುದ**:—ಇಗೊ ನನ್ನ ತಂದೆ ಷಂಷೇರ ಜಂಗ ಬಹದ್ದೂರರು.

**ಗಂಗಾ:**—ಏನು! ಆ ಜೋಡು ಕುದುರೆ ಸಾರೋಟಿನಲ್ಲಿ ಸವಾರಿಮಾಡುವ ಶ್ರೀಮಂತರು! ನಾನು ಆಗಲೇ ಹೇಳಿವೆನಲ್ಲ! ಯಾರಲ್ಲಿ ಹಣ ಉಂಟೊ ಅವನೇ ನಿನಗೆ ದೊಡ್ಡಪ್ಪ ಎಂತ!

**ವಿಮುದ:**—ತಡೆ! ತಡೆ. ಸಾವಧಾನದಿಂದ ಕೇಳು. ಜಂಗ ಬಹದ್ದೂರರು ನನ್ನನ್ನು ಬಹಿರಂಗವಾಗಿ ಮಗನೆಂದು ಒಪ್ಪಲಾರದೆ ಎಲ್ಲಿಯೊ ತಿರುಕುಳಿಯಾಗಿದ್ದ ಪೋಪಟಲಾಲನನ್ನು ಕರೆಯಿಸಿ, ನನಗೊಬ್ಬ ಅಪ್ಪನನ್ನು ನಿರ್ಮಾಣ ಮಾಡಿಕೊಟ್ಟರು. ಆತನು ಶುದ್ಧ ದುಂದುಗಾರ. ಅವನಿಗೆ ನನ್ನ ಮೇಲೆ ಪ್ರೀತಿಯೂ ಇಲ್ಲ, ವಾತ್ಸಲ್ಯವೂ ಇಲ್ಲ. ಒಂದೇ ಒಂದು ಗಳಿಗೆಯಾದರೂ ಆತನು ಮನೆಯಲ್ಲಿರುವುದಿಲ್ಲ. ಬೆಳಗ್ಗೆ ಕೈಯಲ್ಲಿದ್ದ ಹಣ ಆತನು ಸಾಯಂಕಾಲ ಬರುವಾಗ ಇಲ್ಲ. ರಾತ್ರೆಯನ್ನು ಜುಗಾರಾಟದ ಮನೆಗಳಲ್ಲೊ ವೇಶ್ಯೆಯರ ಮನೆಗಳಲ್ಲೊ ಕಳೆಯುತ್ತಾನೆ. ನನ್ನನ್ನು ಮಗನೆಂದು ಒಪ್ಪಿಕೊಳ್ಳುವುದಕ್ಕಾಗಿ ಜಂಗ ಬಹದ್ದೂರರು ಆತನಿಗೆ 5 ಲಕ್ಷ ರೂಪಾಯಿ ಇತ್ತಿರುವರು.

**ಗಂಗಾ:**—ಏನು ಭ್ರಾಂತಿ! 5 ಲಕ್ಷ ರೂಪಾಯಿ! ಅದರ ಕಾಲಂಶ ಕೊಟ್ಟರೆ ನಿನಗೆ ಅಪ್ಪನಾಗುವುದಕ್ಕೆ ನಾನೆ ದರಖಾಸ್ತು ಕೊಡುತಿದ್ದೆನಲ್ಲ!

**ವಿಮುದ:**—"ಚಿಃ! ಆ ನಿನ್ನ ಒಣಹರಟೆ ಇಲ್ಲಿ ಬೇಡ. ಅಪ್ಪನೆನ್ನಿಸಿಕೊಳ್ಳದೆ ಹಣವಾಡಬೇಕೇ? ಹಾಗಿದ್ದರೆ ಹೇಳು. ಇಷ್ಟನ್ನು ಹೇಳುವಷ್ಟರಲ್ಲಿ ಸಿಗರೇಟಿನ ಪೊಟ್ಟಣದಿಂದ ಸಿಗರೇಟು ತೆಗೆಯುವವನಂತೆ ನಟಿಸಿ ತನ್ನ ಬೆರಳಿಗೆ ಹೊಳೆಯುವ ವಜ್ರದ ಉಂಗುರವನ್ನು ಮೇಜಿನ ಮೇಲೆ ಉರಿಯುವ ದೀಪದ ಬೆಳಕಿಗೆ ಹಿಡಿದನು. ವಜ್ರದ 'ಥಳಕ್ಕನ್ನು ಕಂಡು ಗಂಗಾರಾಮನು ಬೆರಗಾಗಿ "ಉಂಗುರ! 'ಪಸಂದು' ಎಲ್ಲಿ, ಉಂಗುರ! ನೋಡೋಣ! ಕೊಡಯ್ಯ—ಇಲ್ಲಿ. ಅದು ನನ್ನ ಬೆರಳಿಗೆ ಒಪ್ಪುತ್ತಿದೆಯೇ ನೋಡೋಣ!" ಎಂದು ವಿಮುದಲಾಲನಿಂದ ಅದನ್ನು ತೆಗೆದುಕೊಂಡು, ತನ್ನ ಒಂದೊಂದು ಬೆರಳಿಗೂ ಹಾಕಿ ಅದರ ಅಂದಚೆಂದವನ್ನು ನೋಡುತ್ತ,

ಅಂಗೈ ಆಡಿಸುತ್ತ "ಉಂಗುರ! ದಿವ್ಯ ಉಂಗುರ! ಒಂದೆರಡು ಸಾವಿರ ರೂಪಾಯಿಯಾದರೂ ಬೇಕು." ಎಂದು ತನ್ನಷ್ಟಕ್ಕೇ ಅಂದುಕೊಂಡನು. "ಮೀನು ಎರೆಹುಳುವಿಗೆ ಬಾಯಿಹಾಕಿ ಗಾಳಕ್ಕೆ ಸಿಕ್ಕಿತು" ಎಂದು ವಿಮುದಲಾಲನು ಹಿಗ್ಗಿದನು. ಆದರೆ ತನ್ನ ಇಂಗಿತ ವನ್ನು ಹೊರಪಡಿಸದೆ

"ಗಂಗಾರಾಮ! ಇಂಥ ಒಂದು ಉಂಗುರವಲ್ಲ, ನೂರಾರು ಉಂಗುರಗಳು ಅನಾಯಾಸವಾಗಿ ನಿನ್ನ ಕೈ ಸೇರುವ ಹಂಚಿಕೆಯೊಂದು ಇದೆ. ಆದರೆ ನಿನಗೆ ಕೈಕಾಲುಗಳು ನಡುಗುತ್ತವೆ. ಕಣ್ಣುಗಳ ದೃಷ್ಟಿ ಮಂದವಾಗುತ್ತಿದೆ ಎಂದೆಯಲ್ಲ!"

**ಗಂಗಾರಾಮ**:—"ಓಹೊ! ನನಗೆಲ್ಲಿ ನೀನು ಮೋಸ ಮಾಡು ವೆಯೊ ಎಂದು ಹಾಗೆಂದೆ. ಹಾಗೇನೂ ನಾನು ಬಲಹೀನನಲ್ಲ ನೋಡು." ಎಂದು ಕಿಟಿಕಿಯ ಅರ್ಧ ಇಂಚು ದಪ್ಪದ ಸಲಾಕಿಗಳನ್ನು ಎರಡು ಕೈಗಳಿಂದ ಹಿಡಿದು ಎಳೆದು ತುಸು ಬಾಗಿಸಿಬಿಟ್ಟನು.

**ವಿಮುದ**:—ಹಾಗಿದ್ದರೆ ನನ್ನ ಹಂಚಿಕೆ ಏನೆಂದು ಬಿಚ್ಚಿ ಹೇಳಲೇ? ಇಗೊ! ಈ ರಾತ್ರೆ ಜಂಗ ಬಹದ್ದೂರರು ಪೂನಾ ಪಟ್ಟಣದ ಹೊರಗೆ ಇರುವ ತನ್ನ ಉಮದಾಬಾಗ ಬಂಗ್ಲೆಯಲ್ಲಿ ಉಳುಕೊಳ್ಳುವರು. ಅಲ್ಲಿ ನೌಕರರು ಹೆಚ್ಚು ಮಂದಿ ಇಲ್ಲ. ಇದ್ದ ಒಬ್ಬಿಬ್ಬರು ಕೆಳಗಿನ ಕೋಣೆ ಗಳಲ್ಲಿ ಇರುವರು. ಅವರ ಧನ ಮತ್ತು ಜವಾಹೀರುಗಳು ಉಪ್ಪರಿಗೆ ಯ ಕೋಣೆಯಲ್ಲಿವೆ. ನಾನೇ ಅಲ್ಲಿಗೆ ಅವರನ್ನು ಭೇಟಿಮಾಡಲಿಕ್ಕೆ ಒಮ್ಮೆ ಹೋದಾಗ ಕಂಡಿದ್ದೇನೆ. ಅಲ್ಲಿಯೆ ಅದೇ ಕೋಣೆಯಲ್ಲಿ ಅವರು ರಾತ್ರೆಯಲ್ಲಿ ಮಲಗುತ್ತಾರೆ. ಇಗೋ! ಅದರ ನಕ್ಷೆ ಇಲ್ಲಿ ಬರೆದು ಕೊಡುತ್ತೇನೆ" ಎಂದು ಚಿಲಿಮಿಯಲ್ಲಿದ್ದ ಕೆಂಡದಿಂದ ನೆಲದ ಮೇಲೆ ಮನೆಯ ನಕ್ಷೆಯನ್ನು ಬರೆದು "ಇದು ಸಾಲುಮರಗಳ ಸಾಲು. ಇದರ ಕೊನೆಯ ಮರದ ಕೊಂಬೆಯಿಂದ ನೀನು ಜಂಗಬಹದ್ದೂರರು ಮಲ ಗುವ ಕೋಣೆಯೊಳಗೆ ಕಿಟಿಕಿಯಿಂದ ಇಳಿಯಬಹುದು. ಸೇಫು ಇರುವ ಸ್ಥಳಕ್ಕೂ ಅವರು ಮಲಗುವ ಮಂಚಕ್ಕೂ ನಡುವೆ ಒಂದು ಫರ್ದೆ ಇದೆ. ಈ ಸೇಫಿನ ಬಾಗಿಲನ್ನು ನೀನು ಸುಲಭವಾಗಿ ಒಡೆಯಬಹುದು. ಅದ

ರೊಳಗೆ ಜಂಗ ಬಹದ್ದೂರರ ಅಮೂಲ್ಯವಾದ ಜವಾಹೀರುಗಳ ಕರಡಿಗೆ ಇದೆ.

**ಗಂಗಾ**:—ಅದರೊಳಗೆ ನಾನೊಬ್ಬನೆ ಹೋಗಬೇಕೆನ್ನುವೆಯಾ?

**ವಿಮದ**:—"ಅಲ್ಲಿಯ ನೌಕರರಿಗೆ ನನ್ನ ಪರಿಚಯವಿದೆ. ನಾನು ಸಾಲುಮರಗಳ ನೆರಳಿನಲ್ಲಿ ಕತ್ತಲೆಯಲ್ಲಿ ಅವಿತುಕೊಳ್ಳುವೆನು. ನೀನು ಕಿಟಕಿಯನ್ನು ಹತ್ತಿದೊಡನೆ ಗೂಬೆ ಕೂಗಿದಂತೆ ಒಂದು ಸಲ ಕೂಗು. ನಿನ್ನ ಕೆಲಸ ಮುಗಿದೊಡನೆ ಎರಡು ಸಲ ಕೂಗು. ಗೋಡೆಯ ಬುಡದಲ್ಲಿ ನಾನು ಬಂದು ನಿಲ್ಲುವೆನು. ನಿನ್ನ ಜೀವಕ್ಕೆ ಅಪಾಯ ಬರುವಂತಿದ್ದರೆ ನಿನ್ನ ಕೈಯಲ್ಲಿರುವ ಸಲಾಕಿಯಿಂದ ಜಂಗಬಹದ್ದೂರರ ತಲೆಯನ್ನೆ ಒಡೆದು ಹಾಕು. ಹಿಂಜರಿಯಬೇಡ. ಆ ಮೇಲೆ ಒಂದು ದಿನ ಹಿಂದು ಮುಂದಾಗಿ ನಂದೂಲಾಲನ ಮತ್ತು ಜಂಗ ಬಹದ್ದೂರರ ಬದುಕು ನನ್ನ ಪಾಲಾಗುವುದು. ಆ ಮೇಲೆ ನೋಡು, ಥಡಾಕು. ಗಂಗಾರಾಮನು ನನ್ನೊಂದಿಗೆ ಜಂಗ ಬಹದ್ದೂರರ ಜೋಡು ಕುದುರೆ ಸಾರೋಟಿನಲ್ಲಿ ಅತ್ತಿತ್ತ ಸವಾರಿ ಮಾಡುವನಲ್ಲವೇ?" ಎಂದು ಗಂಗಾರಾಮನ ಭುಜವನ್ನು ತಟ್ಟುತ್ತ ಎದ್ದು ನಿಂತನು. ಗಂಗಾರಾಮನಿಗೆ ಈ ಹಂಚಿಕೆಯು ಕೃತ್ರಿಮದ್ದೊ ಎಂದು ಒಮ್ಮೆ ಕಂಡಿತು. ಆದರೆ ದ್ರವ್ಯ ಸಂಪಾದನೆಯ ಲಾಲಸೆ ಒಂದು ಕಡೆ, ಜಂಗ ಬಹದ್ದೂರರಂಥ ಶ್ರೀಮಂತರ ಮನೆ ದರೋಡೆ ಮಾಡಿದವನೆಂದು ಹೆಗ್ಗಳಿಕೆ ಇನ್ನೊಂದು ಕಡೆ, ಹೀಗೆ ಆವರಿಸಿಕೊಂಡು ಆತನ ವಿಚಾರಶಕ್ತಿಗೆ ಮಬ್ಬು ಕಟ್ಟಿದಂತಾಯಿತು.

"ಭಿಕಾಜೀ! ನಿನ್ನ ಆ ಹೆಸರನ್ನು ಮರೆಯಲಾರೆ! ನಮ್ಮ ಕಾರ್ಯ ಸಿದ್ಧಿಯಾದರೆ ನೀನು ಆಮದಲಾಲನೇ ಆಗುವೆ" ಎಂದು ಒಮ್ಮೆ ಸಿಗರೇಟನ್ನು ಹಚ್ಚಿ ಸೇದಿ "ಭಿಕಾಜಿ! ಈ ರಾತ್ರಿಯಲ್ಲಿಯೇ ಸಾಲುಮರಗಳ ಸಮೀಪಕ್ಕೆ ಹನ್ನೊಂದು ಘಂಟೆಯ ಸುಮಾರಕ್ಕೆ ನನ್ನ ಉಳಿಗಳು, ಕಳ್ಳಬೀಗದ ಕೈಗಳು, ಕಬ್ಬಿಣದ ಚಿಕ್ಕ ಹಾರೆಗೋಲು ಮುಂತಾದನ್ನು ಹಿಡಿದುಕೊಂಡು ನಾನು ಬರುವೆನು. ನೀನೂ ಅದೇ ಹೊತ್ತಿಗೆ ಸರಿಯಾಗಿ ಅಲ್ಲಿ ಬಂದು ಕಾದಿರು. ಆ ಮೇಲೆ ದೇವರ ಇಚ್ಛೆ!" ಎಂದು ತನ್ನ ದುಷ್ಟ ಕಾರ್ಯದ ಅವಸರದಲ್ಲಿ ದೇವರ ಹೆಸರೆತ್ತಿದನು. ಆದರೆ ದೇವರು

ಈತನನ್ನು ಅದೇ ಸಮಯದಲ್ಲಿ ಹೆಸರೆತ್ತಿ ಕರೆದದ್ದು ಮಾತ್ರ ಆತನಿಗೆ ಕೇಳಿಸಲಿಲ್ಲ.

---

## ಹದಿನಾರನೆ ಅಧ್ಯಾಯ

### ಒಂದು ಋಣ ತೀರಿತು

ರಾತ್ರೆ ಹನ್ನೊಂದು ಗಂಟೆಯ ಸಮಯ. ಉಮದಾಬಾಗಿನ ಬಳಿಯಲ್ಲಿರುವ ಸಾಲು ಮರಗಳ ಮರೆಯಲ್ಲಿ ಕುಳಿತಿದ್ದು ಇಬ್ಬರು ವ್ಯಕ್ತಿಗಳು ಪಿಸುಗುಟ್ಟುತಿದ್ದರು. ಇವರು ಗಂಗಾರಾಮ ಮತ್ತು ಪಿಮದಲಾಲ. ಆದರೆ ಈಗ ಅವರಿಬ್ಬರ ವೇಷಗಳೇ ಬೇರೆ. ದರೋಡೆ ಕಳ್ಳರ ಪೋಷಾಕು; ಸಣ್ಣ ಚಡ್ಡಿ, ಮೈಗೆ ಒತ್ತಾಗಿ ಕಂಬಳಿಯ ಮುಸುಕು. ಗಂಗಾರಾಮನು ಬೀಗ ಒಡೆಯುವ ವಸ್ತುಗಳೊಂದಿಗೆ ಒಂದು ಕಠಾರಿಯನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದನು. ಕೈಯಲ್ಲಿ ಕಳ್ಳ ಕಂದಿಲ; ಬೆಂಕಿಯ ಪೊಟ್ಟಣ. ವಿಮದಲಾಲನು ಇಂದು ತೀರಾ ಭಿಕಾಜಿಯೇ ಆಗಿದ್ದನು. ಆದರೆ ಒಂದು ಚಿಕ್ಕ ಪಿಸ್ತೂಲನ್ನು ಬಾರುಮಾಡಿ, ಚರ್ಮದ ಒರೆಯಲ್ಲಿಟ್ಟು ಹೆಗಲ ಮೇಲೆ ತೂಗಹಾಕಿಕೊಂಡಿದ್ದನು. ಇಬ್ಬರೂ ತಲೆಕೂದಲನ್ನು ಒತ್ತಾಗಿ ಕತ್ತರಿಸಿಕೊಂಡಿದ್ದರು. ಮುಖಕ್ಕೆ ತೆಳುವಾದ ಬಲೆಬಟ್ಟೆಯ ಅವಕುಂಠನ.

ಒಮ್ಮೆ ಇವರಿಬ್ಬರೂ ಉಮದಾಬಾಗಿನ ವರೆಗೆ ಹೋದರು. ಕಿಟಕಿಯಿಂದ ಒಳಗಿನ ಬೆಳಕು ಕಾಣುತಿತ್ತು. ಚಂದ್ರನು ಅಸ್ತಮಿಸಲು ಇನ್ನೂ ಒಂದು ತಾಸು ಹಿಡಿಯಬಹುದೆಂದು ಕಂಡಿತು. ಅವರು ಹಿಂದಿರುಗಿ ಮರಗಳ ನೆರಳಲ್ಲಿ ಅವಿತುಕೊಂಡರು. ಜನಸಂಚಾರವಿಲ್ಲದ ಪ್ರದೇಶವಾದ್ದರಿಂದ ಅವರಿಗೆ ಸಿಗರೇಟು ಹಚ್ಚಲಿಕ್ಕೆ ಏನೂ ತೊಡಕಿದ್ದಿಲ್ಲ. ಸ್ವಲ್ಪ ಸಮಯದ ಅನಂತರ ತಿಂಗಳು ಕಂತಿತು. ಉಮದಾಬಾಗದ ಮಹಡಿಯಲ್ಲಿ ಬೆಳಕೂ ಕಾಣಲಿಲ್ಲ.

ಇಬ್ಬರೂ ಆ ದೊಡ್ಡ ಬಂಗಲೆಯ ಸಮೀಪವಿರುವ ಸಾಲುಮರಗಳ ಸಮೀಪಕ್ಕೆ ಬಂದರು. ಭಿಕಾಜಿಯು ಮರದ ಅಡ್ಡವಾಗಿ ನಿಂತನು. ಗಂಗಾರಾಮನು ಮರವನ್ನು ಹತ್ತಿ ಮಹಡಿಗೆ ಸಮೀಪಕ್ಕೆ ಇರುವ

ಕೊಂಬೆಯಿಂದ ಕಿಟಿಕಿಯನ್ನು ಸಮೀಪಿಸಿ ಕನ್ನಡಿಯನ್ನು ಮೆಲ್ಲನೆ ಕಳಚಿ ಕೆಳಕ್ಕೆ ಬಿಸುಟು, ತನ್ನ ಕೈಯನ್ನು ಒಳಚಾಚಿ ಕಿಟಿಕಿಯ ಬಾಗಿಲನ್ನು ಸದ್ದಿಲ್ಲದೆ ತೆರೆದನು. ಆ ಮೇಲೆ ನೂಲಿನಿಂದ ಹೊಸೆದ ಹಗ್ಗವನ್ನು ಕೆಳಗೆ ಬಿಟ್ಟು, ಅದರ ತುದಿಗೆ ಕಟ್ಟಿದ ತನ್ನ ಸಾಮುಗ್ರಿಗಳನ್ನು ಮೇಲಕ್ಕೆ ಎತ್ತಿಕೊಂಡನು. ಆ ಮೇಲೆ ಗೂಗೆಯ ಸದ್ದಿನಂತೆ ಒಮ್ಮೆ ಕೂಗಿ ಮೆಲ್ಲಗೆ ಕಟಿಕಿಯೊಳಗಿಂದ ಕೋಣೆಯೊಳಗೆ ಕಾಲಿಟ್ಟನು. ಪರ್ದೆಯ ಹಿಂದುಗಡೆ ಮಂಚದ ಮೇಲೆ ಮಲಗಿದ್ದ ಒಬ್ಬ ವ್ಯಕ್ತಿಯು ಈ ಸದ್ದನ್ನೂ ಗೂಗೆಯ ಕೂಗನ್ನೂ ಕೇಳಿದೊಡನೆ ಮೆಲ್ಲಗೆ ಮಂಚದಿಂದೆದ್ದು ಹಿಂಬದಿಯಲ್ಲಿರುವ ಒಂದು ಬಾಗಿಲನ್ನು ತೆರೆದು, ಅಲ್ಲಿ ಮಲಗಿದ್ದ ಗಫೂರನನ್ನು ಎಬ್ಬಿಸಿದನು. ಗಫೂರನ ಬಾಯಿಯ ಮೇಲೆ ಕೈಯಿಟ್ಟು, ಅವನನ್ನು ಆ ಎರಡನೆ ಕೋಣೆಯ ಕಿಟಿಕಿಯೊಳಗಿಂದ ಹೊರಗೆ ಇಣಿಕಿ ನೋಡುವಂತೆ ಮೆಲ್ಲಗೆ ಹೇಳಿದನು. ಗಫೂರನು ಕೆಳಗೆ ನಿಂತಿರುವ ಒಬ್ಬನ ಕಡೆಗೆ ಬೆರಳನ್ನು ತೋರಿಸಿದನು. ಸೇಫಿನ ಕೋಣೆಯೊಳಗೆ ಒಬ್ಬನು ಇಳಿದಿದ್ದುದು ಆ ವ್ಯಕ್ತಿಗೆ ಮೊದಲೆ ಗೊತ್ತಿತ್ತು. ಆತನು ಕೂಡಲೆ ಗಫೂರನಿಗೆ ಕೋಣೆಯ ಹಿಂಭಾಗದಲ್ಲಿರುವ ಮೆಟ್ಟಲುಗಳನ್ನು ಇಳಿದು, ಚಮನಲಾಲನನ್ನು ಎಬ್ಬಿಸಲು ಹೇಳಿ, ಗಫೂರನೂ ಚಮನಲಾಲನೂ ಸಶಸ್ತ್ರರಾಗಿ ಕಾದಿರುವಂತೆ ಸೂಚನೆ ಕೊಟ್ಟನು. ಅನಂತರ ಲಗುಬಗೆಯಿಂದ ತನಗೆ ಬೇಕಾದ ಪೋಷಾಕನ್ನು ಧರಿಸಿ ಎಡದ ಕೈಯಲ್ಲಿ ಕಳ್ಳ ಕಂದಿಲನ್ನೂ ಬಲಗೈಯಲ್ಲಿ ಬಾರುಮಾಡಿದ 6 ಸಲ ಹೊಡೆಯುವ ರಿವಾಲ್ವರನ್ನೂ ಹಿಡಿದು ಸದ್ದಿಲ್ಲದೆ ಸೇಫಿನ ಕೊಟಡಿಯಲ್ಲಿ ಕಾಲಿಟ್ಟನು. ಆಗ ಗಂಗಾರಾಮನು ಸೇಫಿನ ಬೀಗವನ್ನು ತೆಗೆಯುವುದಕ್ಕೆ ಸಿದ್ಧನಾಗಿ ಒಂದೊಂದು ಕೈಯನ್ನು ಬೀಗದೊಳಗೆ ಇಟ್ಟು ಪರೀಕ್ಷಿಸುತಿದ್ದನು. ಅಷ್ಟರಲ್ಲಿ ಕಂದಿಲಿನ ಬೆಳಕು ಗಂಗಾರಾಮನ ಮುಖದ ಮೇಲೆ ಬಿತ್ತು. ಒಡನೆಯೆ ಪಿಸ್ತೂಲಿನ ನಳಿಗೆಯೊಂದು ಗಂಗಾರಾಮನ ಎದೆಯ ಕಡೆಗೆ ಗುರಿನೋಡುತಿತ್ತು. ಆಗ ಗಂಗಾರಾಮನ ಕೈಯಲ್ಲಿದ್ದ ಕಠಾರಿ ಜಾರಿ ಕೆಳಗೆ ಬಿತ್ತು. ತನ್ನ ಬಲಗಾಲಿನಿಂದ ಅದನ್ನು ಒತ್ತಿ ಹಿಡಿದು, ಆ ವ್ಯಕ್ತಿಯು "ಏನು ಗಂಗಾರಾಮ! ಇಷ್ಟು ರಾತ್ರೆಯಲ್ಲಿ

ಇಲ್ಲಿಗೆ ಏತಕ್ಕೆ ಬಂದೆ?" ಎಂದು ಬೆಳಕನ್ನು ತಮ್ಮಿಬ್ಬರ ಮುಖದ ಮೇಲೆ ಬೀಳುವಂತೆ ಹಿಡಿದನು. ಆಗ ಗಂಗಾರಾಮನು "ಅ—ರೆ—ಪ—ರ ಶು—ರಾಮ—ದೀಕ್ಷಿತರು!" ಎಂದು ಚೀರಿದನು.

**ಪರಶುರಾಮ**:—ಹೌದು ಅವರೇ, ನನ್ನ ಪರಿಚಯವು ನಿನಗೆ ಸಿಕ್ಕಿತು! ನಿನ್ನನ್ನು ಕಾಣದೆ ಕೆಲವು ವರ್ಷಗಳಾದುವಲ್ಲವೆ?

**ಗಂಗಾ**:—ನಿಜವಾಗಿ ದೀ-ಕ್ಷಿತರೇ! ನಿಮ್ಮನ್ನು-ನಾನು-ಇಲ್ಲಿ-

**ಪರಶುರಾಮ**:—ಓಹೊ! ನನ್ನನ್ನು ಇಲ್ಲಿ ಕಾಣಲಿಕ್ಕೆಂದು ಬಂದೆಯಾ? ಆದರೆ ಈ ಅಪರರಾತ್ರಿಯಲ್ಲಿ ಬಂದ ವಿಶೇಷವೇನು? ಈ ಕಿಟಿಕಿಯ ದಾರಿಯಿಂದ ಬರಬೇಕಿತ್ತೆ? ಈ ಬೀಗದ ಕೈಗೊಂಚಲು, ಈ ಉಳಿಗಳು ನನ್ನನ್ನು ಕಾಣುವ ಕಾಲಕ್ಕೆ ಬೇಕಾಗಿದ್ದವೇ? ಕೈಯಲ್ಲಿ ಕಠಾರಿಯೂ ಇತ್ತು. ಅದು ಈಗ ನನ್ನ ಪಾದದ ಅಡಿಯಲ್ಲಿ ಸಿಕ್ಕಿ ಕೊಂಡಿದೆ. ನನ್ನನ್ನು ಕಾಣುವುದಕ್ಕೆ ಇಷ್ಟೆಲ್ಲ ಸಾಹಿತ್ಯಗಳು ಬೇಕಿತ್ತೆ?

**ಗಂಗಾರಾಮ**ನು ನಡುಗುತ್ತ:—"ದೀಕ್ಷಿ—ತರೇ"—ಎಂದು ಕೈ ಜೋಡಿಸಿ ತಲೆಬಾಗಿಸಿ ನಿಂತನು.

**ಪರಶು**:—ಓಹೊ! ಗಂಗಾರಾಮಾ! ಅದನ್ನೆಲ್ಲ ಕಂಡಾಗ ನೀನು ಕೊಲೆ ಕಳವುಗಳ ವೃತ್ತಿಯನ್ನು ಇನ್ನೂ ಬಿಟ್ಟಿಲ್ಲವೆಂದು ಕಾಣುತ್ತದೆ.

**ಗಂಗಾ**:—ಇಲ್ಲ! ಇಲ್ಲ! ನಾನು ಕೊಲೆ ಎಂದೂ ಮಾಡಲಿಲ್ಲ. ಅಂದು ಸರಾಫನನ್ನು ಕೂಡಾ ನಾನು ಕೊಂದದ್ದಿಲ್ಲ! ಆತನನ್ನು ರತ್ನ ಮ್ಮನೇ ಕೊಂದಳು.

**ಪರಶುರಾಮ**:—ಅಂದು ನೀನು ಪೋಲೀಸ್ ನಿರ್ಬಂಧದಿಂದ ಹೇಗೆ ಬಿಡುಗಡೆ ಹೊಂದಿದೆ ಎಂದು ಗೊತ್ತಿದೆಯೋ?

**ಗಂಗಾ**:—ಯಾರೊ ಪುಣ್ಯಾತ್ಮರೊಬ್ಬರು ನನ್ನನ್ನು ಬಿಡಿಸಿದರು.

**ಪರಶುರಾಮ**:—ಅವರು ಸುಮ್ಮನೇ ನಿನ್ನನ್ನು ಬಿಡಿಸಿದರೇ?

**ಗಂಗಾ**:—ನನ್ನನ್ನು ನಿರ್ಬಂಧದಿಂದ—ಅವರು ಬಿಡಿಸುವಾಗ— ನನ್ನ ಒಳ್ಳೆ ನಡತೆಯು ಬಗ್ಗೆ—ಅವರು—ಜಾಮೀನು ಕೊಟ್ಟಿದ್ದರು. ಅವರಿಗೆ—ನಾನೂ—ಮಾತುಕೊಟ್ಟೆನು—

**ಪರಶುರಾಮ**:— ಅದನ್ನು ನೀನು ಸರಿಯಾಗಿ ನಡೆಸಿದೆಯಲ್ಲವೆ?

**ಗಂಗಾ**:— ಹೊಟ್ಟೆ ಪಾಡಿಗಾಗಿ-ನಾನು— ಹೀಗೆ— ಮಾಡಬೇಕಾಯಿತು.

**ಪರಶು**:— ದರೋಡೆ ಮಾಡುವವರೆಲ್ಲರೂ ಹಾಗೆಯೇ ಅನ್ನುತ್ತಾರೆ. ಆದರೆ ಬೇರೆ ಸದ್ವ್ಯಕ್ತಿಗಳನ್ನು ಅನುಸರಿಸಲು ಸಾಧ್ಯವಿದ್ದಿಲ್ಲವೇ?

**ಗಂಗಾ**:— ನಿಜವಾಗಿಯೂ ನನ್ನ— ಅವಸ್ಥೆ—

**ಪರಶು**:— ನಿನಗೆ ನಾನು ಕೊಟ್ಟ ಉಂಗುರ, ಸರಾಫನಿಂದ ನೀವು ಗಂಡಹೆಂಡರಿಬ್ಬರೂ ಸುಲಿದ ಹಣ, ಇವೆಲ್ಲ ಇಷ್ಟರೊಳಗೆ ವೆಚ್ಚವಾದವೇ?

**ಗಂಗಾರಾಮ**:— ಆ ಹಣ— ನನ್ನ— ಕೈ— ಸೇರಲೇ — ಇಲ್ಲ. ಅದು— ತೀರಾ— ಪೋಲೀಸಿನವರ ಪಾಲಾಯಿತು. ಈಗ— ಹೇಗೂ— ಇರಲಿ— ಒಮ್ಮೆ— ನನ್ನನ್ನು— ಸುರಕ್ಷಿತವಾಗಿ— ಬಿಟ್ಟುಬಿಡಿರಿ—

**ಪರಶುರಾಮ**:— ಇನ್ನೂ ಹಲವು ಮನೆಗಳಲ್ಲಿ ಕೊಲೆಕಳವು ಮಾಡಲಿಕ್ಕೇನು?

**ಗಂಗಾ**:— ಇಲ್ಲ— ಖಂಡಿತವಾಗಿಯೂ— ಇಲ್ಲ— ಒಮ್ಮೆಗೆ— ನನ್ನನ್ನು— ಇಲ್ಲಿಂದ— ಜೀವಂತವಾಗಿ— ಬಿಟ್ಟರೆ—

**ಪರಶುರಾಮ**:- ಅದಿರಲಿ, ನಿನ್ನನ್ನು ಪೋಲೀಸ ಪಹರೆಯೊಳಗಿಂದ ಬಿಡಿಸಿದವರು ಯಾರು ಎಂದು ನಿಜವಾಗಿಯೂ ನಿನಗೆ ಗೊತ್ತಿಲ್ಲವೇ?

**ಗಂಗಾ**:— ಗೊತ್ತು ಇದೆ— ಅವರೊಬ್ಬ— ಹಕೀಮರು— ಸರಾಫನ— ಕೊಲೆಯಾಗುವ ಸಮಯದಲ್ಲಿ— ದೂರದಿಂದ— ತಾನು ನೋಡಿದೆನೆಂದು— ಅವರು— ಸಾಕ್ಷಿ ನುಡಿದರು—

**ಪರಶು**:— ಅವರು ನಿನ್ನನ್ನೊಬ್ಬನನ್ನೆ ಬಿಡಿಸಿದರೇ?

**ಗಂಗಾ**:— ಇಲ್ಲ. ಇನ್ನೊಬ್ಬ ಪೋಲಿ ತರುಣನನ್ನೂ ಕೂಡ—

**ಪರಶು**:— ಅವನ ಹೆಸರು?

**ಗಂಗಾ**:— ಭಿಕಾಜಿ—

**ಪರಶು**:— ಈಗ ಅವನೆಲ್ಲಿ?

**ಗಂಗಾ**:— ನನಗೆ— ತಿಳಿಯದು.

**ಪರಶು:**— ಗಂಗಾರಾಮ! ಇನ್ನೂ ನನ್ನೊಡನೆ ಸುಳ್ಳು? ಅವನು ನಿನ್ನ ಒಡನಾಡಿಯಾಗಿಲ್ಲವೇ?

**ಗಂಗಾ:**— ಇಲ್ಲ. ಅವನು—ನನ್ನನ್ನು—ಬಿಟ್ಟು—ಶ್ರೀಮಂತನೊಬ್ಬನ— ಆಶ್ರಯವನ್ನು ಸೇರಿದನು.

**ಪರಶು:**— ಎಲ್ಲಿಯ ಶ್ರೀಮಂತನು?

**ಗಂಗಾ:**— ಈ ಬಂಗಲೆಯ - ಧನಿ—ಷೆಂಷೇರ—ಜಂಗಬಹದ್ದೂರರಂತೆ!—

**ಪರಶು:**— ಷೆಂಷೇರ ಜಂಗಬಹದ್ದೂರರು!

**ಗಂಗಾ:**- ಭಿಕಾಜಿಯು- ಅವರ- ದಾಸೀಪುತ್ರನಂತೆ. ಈ ಗುಟ್ಟನ್ನು ಮರೆಯಿಸುವುದಕ್ಕೆ ಆ ಶ್ರೀಮಂತನು ಆತನಿಗೆ ವಿಮದಲಾಲನೆಂಬ ಹೆಸರಿಟ್ಟು— ಪೋಪಟಲಾಲನೆಂಬ ಅಲ್ಪ ಮನುಷ್ಯನೊಬ್ಬನ ಮಗನೆಂದು ಸುದ್ದಿ ಹೊರಡಿಸಿರುವರಂತೆ.— ಈಗ— ಈ ವಿಮದಲಾಲನು—ಹುಂಡೀ ಸಾಹುಕಾರ ನಂದೂಲಾಲ ಸೇಟಜಿಯ ಒಬ್ಬಳೇ ಮಗಳನ್ನು ವಿವಾಹ ಮಾಡಿಕೊಂಡು ಅವನ ಸಕಲ ಆಸ್ತಿಗೂ ಹಕ್ಕುದಾರನಾಗುವನಂತೆ!

**ಪರಶು:**— ಇದನ್ನೆಲ್ಲ ನಿನಗೆ ಭಿಕಾಜಿಯೆ ತಿಳಿಸಿದನೇ? ಹಾಗಿದ್ದರೆ ಭಿಕಾಜಿಯು ಮತ್ತು ನಿನ್ನ ಸಂಬಂಧವು ಇನ್ನೂ ಕಡಿದು ಹೋಗಿಲ್ಲ, ಅಲ್ಲವೇ?

**ಗಂಗಾ:**— ಅಷ್ಟೇ ಅಲ್ಲ. ಇಂದಿನ ದುಷ್ಕೃತ್ಯಕ್ಕೆ—ಆತನೇ— ನನ್ನನ್ನು— ಪ್ರೇರೇಪಿಸಿದನು.

**ಪರಶು:**— ಅದು ಹೇಗೆ?

**ಗಂಗಾ:**— ಜಂಗಬಹದ್ದೂರರನ್ನು ಕೊಂದರೆ— ಅವರ ಹೇರಳ ಸಂಪತ್ತು— ತನಗೆ ಸಿಗುವುದೆಂದೂ— ಅದರಲ್ಲಿ ನನಗೆ ಪಾಲುಕೊಡುವೆನೆಂದೂ— ಆತನು ನನ್ನನ್ನು ನಂಬಿಸಿದನು.

**ಪರಶು:**— ಅದಕ್ಕೆ ಬದಲಾಗಿ ನೀನು ಜಂಗಬಹದ್ದೂರರಿಗೆ ಈ ಸಮಾಚಾರವನ್ನು ತಿಳಿಸಿದರೆ ಅವರು ನಿನ್ನನ್ನು ಸಾರ್ವದಾ ಸುಖಿಯಾಗುವಂತೆ ಮಾಡುತಿದ್ದರಲ್ಲವೆ? ಈಗ ನಾನು ಈ ವಿಚಾರವನ್ನು ಜಂಗಬಹದ್ದೂರರಿಗೆ ತಿಳಿಸಲೆ?

**ಗಂಗಾ**:—"ನಿಮಗೆ ಅಷ್ಟು ಸಮಯವೆಲ್ಲಿಯದು?" ಎಂದು ಫಕ್ಕನೆ ಬಗ್ಗಿ ತಾನು ನೆಲದಲ್ಲಿಟ್ಟ ಚಿಕ್ಕ ಹಾರೆಗೋಲನ್ನು ಎತ್ತಿ ಪರಶುರಾಮದೀಕ್ಷಿತನ ತಲೆಗೆ ಅದರಿಂದ ಒಂದು ಬಲವಾದ ಏಟು ಕೊಡಬೇಕೆಂದಿದ್ದನು. ಅಷ್ಟರಲ್ಲಿ ದೀಕ್ಷಿತನು ಗಂಗಾರಾಮನ ಬಲಮಣಿಗಂಟನ್ನು ಬಲವಾಗಿ ಹಿಡಿದು ಹಿಸುಕಿಬಿಟ್ಟನು. ಹಾರೆಗೋಲು ಪುಸಕ್ಕನೆ ಕೆಳಕ್ಕೆ ಜಾರಿತು. ಗಂಗಾರಾಮನು ಹತಾಶನಾದನು. "ಮಹಾಸ್ವಾಮೀ! ನಿಮ್ಮ ಮೈಕೈಗಳ ಸಾಮರ್ಥ್ಯದ ಪರಿಚಯವು ಇದು ವರೆಗೆ ನನಗೆ ಇರಲಿಲ್ಲ. ಈಗ ಗೊತ್ತಾಯಿತು."

**ಪರಶು**:—ನಿನ್ನಂಥ ಹಿಂಸ್ರ ಪಶುವನ್ನು ಕೊಲ್ಲುವ ಸಾಮರ್ಥ್ಯವು ನನ್ನಲ್ಲಿದೆ. ಆದರೆ ನಿನ್ನ ರಕ್ತದಲ್ಲಿ ನನ್ನ ಕೈಯನ್ನು ಮಲಿನ ಮಾಡುವ ಇಚ್ಛೆ ಇಲ್ಲದೆ ನನ್ನ ಕೈ ತಡೆಯಬೇಕಾಯಿತು. ಈಗ ನಾನು ಹೇಳಿದಂತೆ ಬರೆದುಕೊಡು. ಇಲ್ಲವಾದರೆ—ಈಗಲೇ ಪೋಲಿಸಿನವರ ಕೈಗೆ ನಿನ್ನನ್ನು ಒಪ್ಪಿಸಬೇಕಾಗುವುದು.

**ಗಂಗಾ**:—ನನಗೆ ಬರಹ ಬರುವುದಿಲ್ಲವಲ್ಲ!

**ಪರಶು**:—ಏನು ಗಂಗಾರಾಮ? ಅಂದು ನಂದೂಲಾಲನಲ್ಲಿ ಪತ್ರಕ್ಕೆ ಸಹಿಕೊಡುವಾಗ ನಿನಗೆ ಬರಹವಿತ್ತು ಎಂದು ನನ್ನೊಡನೆ ಹೇಳಿದ್ದು ಮರೆತೆಯಾ? 'ಸುಳ್ಳು ಕಳ್ಳಗೆ ನಂಟು ಕಳ್ಳ ಸುಳ್ಳಿಗೆ ನಂಟು' ಎಂಬಂತಾಯಿತು. ಜೋಕೆ! ಎಂದು ಹೇಳಿ ಕೈಯಲ್ಲಿರುವ ಪಿಸ್ತೂಲನ್ನು ಎತ್ತಿದನು.

**ಗಂಗಾ**:—ಇಲ್ಲ ಇಲ್ಲ—ಇನ್ನು ಸುಳ್ಳು ಹೇಳಲಾರೆ. ನೀವು ಹೇಳಿದಂತೆ ಬರೆದು ಕೊಡುವೆನು.

**ಪರಶು**:—ಇಗೊ ಲೇಖನಿ, ಶಾಯಿ, ಆ ಮೇಜಿನ ಮೇಲೆ ಇವೆ. ಮೈಯನ್ನು ಕದಲಿಸಿದೆಯಾದರೆ ಈ ಪಿಸ್ತೂಲಿನ ನೆನಪಿರಲಿ, 'ಢಂ' ಎನ್ನುವುದು.

ಗಂಗಾರಾಮನು ಕುರ್ಚಿಯಲ್ಲಿ ಕುಳಿತು ಲೇಖನಿಯನ್ನು ಹಿಡಿದು ಒಂದು ಕಾಗದದ ಮೇಲೆ ಬರೆಯಲು ತೊಡಗಿದನು. ದೀಕ್ಷಿತನು ಒಕ್ಕಣೆ ಹೇಳಿದನು. ಅದು ಈ ಪರಿಯಾಗಿತ್ತು. "ನಂದೂಲಾಲ ಸೇಟರೇ! ಶ್ರೀಮಂತ ಪುತ್ರನಂತೆ ಕಾಣಿಸಿಕೊಂಡು ನಿಮ್ಮ ಮನೆಯಲ್ಲಿ

ಹೋಗುತ್ತ ಬರುತಿದ್ದವನು—ನಿಮ್ಮನ್ನು ಮೋಸಮಾಡಿ ನಿಮ್ಮ ಮಗಳನ್ನು ವಿವಾಹಮಾಡಿಕೊಳ್ಳುವುದಕ್ಕೆ ಇದ್ದವನು—ನಿಜವಾಗಿಯೂ ವಿಮುದಲಾಲನಲ್ಲ. ಜೈಲಿನಿಂದ ನನ್ನೊಂದಿಗೆ ತಪ್ಪಿಸಿಕೊಂಡು ಹೋದ ಭಿಕಾಜಿ ಎಂಬ ಕೆ. ಡಿ. ಅವನು ಯಾರು, ಅವನ ತಾಯಿತಂದೆ ಯಾರು ಎಂಬದು ಯಾರಿಗೂ ಗೊತ್ತಿಲ್ಲ."

ಪರಶುರಾಮ ದೀಕ್ಷಿತನು ಅದನ್ನು ಓದಿನೋಡಿ "ಚೆನ್ನಾಯಿತು. ಈಗ ಇದಕ್ಕೆ ಸಹಿಕೊಡು."

**ಗಂಗಾ:**—ಅದೇನು, ನನ್ನ ಸರ್ವ ನಾಶಕ್ಕೆ ಸಿದ್ಧಮಾಡುವಿರಾ? ಆ ಭಿಕಾಜಿಯು ಇದನ್ನು ತಿಳಿದರೆ ನನ್ನನ್ನು ಉಳಿಸುವನೆ?

**ಪರಶು:**—ಅಷ್ಟು ಸಮಯ ಕಾಯಬೇಕೇ? ಈಗಲೇ ನಿನ್ನನ್ನು ಪೋಲಿಸಿನವರ ಕೈಗೆ ಒಪ್ಪಿಸಿಬಿಟ್ಟರೆ ತೀರಿತಲ್ಲ! ಅಥವಾ ಈ ಪಿಸ್ತೂಲಿನಿಂದ ಸುಟ್ಟುಬಿಡಬಹುದಲ್ಲ!

**ಗಂಗಾ:**—'ಅಯ್ಯೋ ಬೇಡ. ಸಹಿಕೊಡುತ್ತೇನೆ' ಎಂದು ಸಹಿಕೊಟ್ಟನು. ಅನಂತರ ಪರಶುರಾಮ ದೀಕ್ಷಿತನು ಪಿಸ್ತೂಲನ್ನು ಇನ್ನೂ ತಗ್ಗಿಸದೆ "ಇಗೊ, ಇನ್ನು ಬಂದ ದಾರಿಯಿಂದಲೆ ಸ್ವಸ್ಥವಾಗಿ ಹೋಗು" ಎಂದು ಲೈಟನ್ನು ತೋರಿಸಿದನು.

**ಗಂಗಾ:**—ನಾನು ಕೆಳಕ್ಕೆ ಇಳಿಯುವಾಗಲೇ ನನ್ನನ್ನು ನೀವು ಕೊಂದು ಹಾಕಲಿಕ್ಕಿಲ್ಲವಲ್ಲ!

**ಪರಶು:**—ಅದಕ್ಕೆ ಇಷ್ಟೆಲ್ಲ ಪ್ರಯಾಸವೆ?

**ಗಂಗಾ:**—(ಇನ್ನೊಮ್ಮೆ ತಿರುಗಿ) ನಿಶ್ಚಿಂತನಾಗಿ ಹೋಗಲೇ?

**ಪರಶು:**—ಹೋಗು! ಏನೂ ಸಂದೇಹ ಬೇಡ. ನನಗೆ ಬೇಸರ ವಿಷ್ಟೆ. ಎರಡು ಸಲ ನಿನ್ನನ್ನು ಒಬ್ಬ ಸಭ್ಯ ಮನುಷ್ಯನಾಗುವಂತೆ ಮಾಡಿದ ನನ್ನ ಪ್ರಯತ್ನಗಳು ನೀರಿನಲ್ಲಿ ಹೋಮವಿಟ್ಟಂತಾಯಿತಲ್ಲ!

**ಗಂಗಾ:**— ಇನ್ನೊಮ್ಮೆ ನನ್ನನ್ನು ಪರೀಕ್ಷಿಸಲಾಗದೇ?

**ಪರಶು:**—ನಿಜವೇ? ಹಾಗಿದ್ದರೆ ನೀನು ಸುರಕ್ಷಿತವಾಗಿ ನಿನ್ನ ಮನೆಗೆ ಮುಟ್ಟಿದೊಡನೆ, ರೈಲು ಹತ್ತಿ ಮುಂಬಯಿಗೆ ಹೋಗು. ಇನ್ನೆರಡು ದಿನಗಳಲ್ಲಿ ಅಲ್ಲಿ 'ವಿಕ್ಟೋರಿಯಾ ಟರ್ಮಿನಸ್' ಸ್ಟೇಶನ ಬಳಿ

ಯಲ್ಲಿ ನನ್ನನ್ನು ಕಾದಿರು. ಆಗ ನಿನ್ನ ಮುಂದಿನ ಜೀವನದ ವ್ಯವಸ್ಥೆ ಯನ್ನು ಮಾಡುವೆನು. ಇಗೊ ನಿನಗೆ ಖರ್ಚಿಗೆ" ಎಂದು ಒಂದು ನೋಟನ್ನು ತನ್ನ ಜೇಬಿನಿಂದ ತೆಗೆದುಕೊಟ್ಟನು. ಗಂಗಾರಾಮನು ಅದನ್ನು ಇಸುಕೊಂಡು ಆತನಿಗೆ ನಮಸ್ಕರಿಸಿ ಕಿಟಕಿಯೊಳಗಿಂದ ಪಾರಾಗಿ ಮರದ ಕೊಂಬೆಯನ್ನು ಹಿಡಿದು ಮರದ ಕೆಳಗೆ ಇಳಿದನು. ಆತನು ಬರಲಿಕ್ಕೆ ತಡವಾದ್ದರಿಂದ ಭಿಕಾಜಿಯು ಆ ಮರದ ಇನ್ನೊಂದು ಕೊಂಬೆಯನ್ನು ಹತ್ತಿ ಇಣಿಕಿ ನೋಡುತ್ತಲಿದ್ದನು. ಗಂಗಾರಾಮನು ದೀಕ್ಷಿತನಿಗೆ ನಮಸ್ಕರಿಸಿ ಕೆಳಗಿಳಿದುದು ಮಾತ್ರ ಆತನಿಗೆ ಕಂಡಿತು. ಗಂಗಾರಾಮನು ತನ್ನ ಗುಟ್ಟನ್ನೆಲ್ಲ ಬಯಲುಮಾಡಿದನೆಂದು ಭಿಕಾಜಿಗೆ ಸಂದೇಹವಾಯಿತು. ಅದಲ್ಲದೆ ತನ್ನ ಕುತ್ತಿಗೆಗೆ ಈ ದಿಷ್ಟಿಯನ್ನು ಸಾರ್ವದಾ ಕಟ್ಟಿಕೊಳ್ಳುವುದಕ್ಕೆ ಆತನಿಗೆ ಮನಸ್ಸಿದ್ದಿಲ್ಲ. ಅದುದರಿಂದ ಗಂಗಾರಾಮನು ಕೆಳಗಿಳಿದ ಕೂಡಲೇ ಭಿಕಾಜಿಯು ಅವನ ಎದೆಗೆ ಗುರಿಇಟ್ಟು ಪಿಸ್ತೂಲನ್ನು ಸುಟ್ಟು ಓಡತೊಡಗಿದನು. ಬಂಗಲೆಯ ಬಾಗಿಲಲ್ಲಿ ಹೊಂಚಿಕೊಂಡಿದ್ದ ಚಮನಲಾಲನು ಬಾಗಿಲನ್ನು ತೆರೆದು ಆತನನ್ನು ಬೆನ್ನಟ್ಟಿಹೋದನು.

ಪರಶುರಾಮ ದೀಕ್ಷಿತನೂ ಗಫೂರನೂ ಉಪ್ಪರಿಗೆಯಿಂದ ಅಷ್ಟರೊಳಗೆ ಕೆಳಗೆ ಇಳಿದು ಕಳ್ಳ ಕಂದಿಲಿನ ಬೆಳಕಿನಲ್ಲಿ ಗಂಗಾ ರಾಮನಿದ್ದಲ್ಲಿಗೆ ಬಂದರು. ಗಂಗಾರಾಮನು ಈ ಬೆಳಕಿನಲ್ಲಿ ತನ್ನ ಮೈಮೇಲಿನ ರಕ್ತಪ್ರವಾಹವನ್ನು ಕಂಡು "ಅಯ್ಯೊ! ಎಂಥ ಪ್ರವಾಹ! ನನ್ನ ಜೀವನವು ಕೊನೆಗೊಂಡಿತೊ ಏನೊ?"

ದೀಕ್ಷಿತನ ಅಪ್ಪಣೆಯ ಮೇರೆಗೆ ಗಫೂರನು ಗಂಗಾರಾಮನನ್ನು ಎತ್ತಿ ಒಳಕೋಣೆಗೆ ತಂದನು. ಮತ್ತು ಪೋಲೀಸ ಠಾಣ್ಯಕ್ಕೆ ಈ ವರ್ತಮಾನ ತಿಳಿಸಲು ಓಡಿದನು. ಪರಶುರಾಮ ದೀಕ್ಷಿತನು ಗಂಗಾ ರಾಮನನ್ನು ನೋಡಿ, "ಓಹೊ! ಕರ್ಮದ ಫಲವನ್ನು ನೋಡಿದೆಯಾ? ನಿಶ್ಚಯವಾಗಿಯೂ ಸಿಗುತ್ತದಲ್ಲ! ಕಾಲವಿಳಂಬವಾದಷ್ಟಕ್ಕೆ ಮುಕ್ತ ಹಸ್ತದಿಂದ ಸಿಗುತ್ತದಲ್ಲ!" ಎಂದನು.

**ಗಂಗಾ:**—ಅಯ್ಯೋ! ಕಣ್ಣುಕತ್ತಲೆ ಬಂತು! ಒಬ್ಬ ಡಾಕ್ಟರರನ್ನು ಕರೆಸಿರಿ!

**ಪರಶು:**—ಏತಕ್ಕೆ?

**ಗಂಗಾ:**—ಪೆಟ್ಟು—ಮರ್ಮಸ್ಥಾನಕ್ಕೆ—ಬಿದ್ದಂತಿದೆ. ಶ್ವಾಸವು ಉಕ್ಕೇರಿ—ಬರುವಂತಿದೆ. ನನ್ನನ್ನು ಕೊಲೆಮಾಡಿದವರು—ಯಾರೆಂದು ಪೋಲೀಸಿನವರಿಗೆ—ತಿಳಿಸಬೇಡವೇ?

**ಪರಶು:**—"ಸರಿ! ನಿನಗೆ ತ್ರಾಣಬರುವಂತೆ ಮಾಡುವೆನು." ಎಂದು ಒಳಗೆ ಹೋಗಿ ಒಂದು ಸೀಸೆಯಿಂದ ಸ್ವಲ್ಪ ಔಷಧವನ್ನು ತಂದು ಗಂಗಾರಾಮುನ ಬಾಯಲ್ಲಿ ಸುರಿದನು.

ಗಂಗಾಮನು ಅದನ್ನು ಕುಡಿದು ಸ್ವಲ್ಪ ಚೇತರಿಸಿ "ಬೇಗನೆ ಕರೆಸಿರಿ!"

**ಪರಶು:**—ಯಾರನ್ನು?

**ಗಂಗಾ:**—ಅಧಿಕಾರಿಗಳನ್ನು. ಇನ್ನೂ—ನನಗೆ—ಹೆಚ್ಚು—ಸಮಯ—ಇಲ್ಲ.

**ಪರಶು:**—ನೀನು ಹೇಳತಕ್ಕದ್ದೆಲ್ಲ ಹೇಳು. ನಾನೇ ಬರೆದು ಕೊಳ್ಳುವೆನು.

**ಗಂಗಾ:**—ಬರೆಯಿರಿ—"ಗಂಗಾರಾಮುನಾದ—ನನಗೆ—ಕೊಲೆ ಕಳವುಗಳಲ್ಲಿ—ಜತೆಗಾರನಾಗಿದ್ದ—ಭಿಕಾಜಿ—ಊರ್ಫ—ವಿಮದ—ಲಾಲನು—ಈ ರಾತ್ರೆ—ಉಮದಾ—ಬಾಗಿನ—ಬಂಗಲೆಯ—ಕಿಟಿಕಿಯೊಳಗಿಂದ—ನಾನು—ಕೆಳಕ್ಕೆ—ಇಳಿಯುವಾಗ—ಕೊಂದನು" ನನ್ನ ಸಹಿ—ಉಳಿದ—ಸಮಾಚಾರವೆಲ್ಲ—ನೀವೇ—ತಿಳಿಸುವಿರಲ್ಲ!

**ಪರಶು:**—ಹೌದು! ನಿನ್ನೊಂದಿಗೆ ಆತನು ಬಂದು ಸಾಲುಮರ ಗಳಲ್ಲಿ ಅಡಗಿಕೊಂಡಿದ್ದನೆಂದೂ ನೀನು ಕೆಳಗೆ ಇಳಿಯುವಾಗ ಪಿಸ್ತೂಲಿ ನಿಂದ ನಿನ್ನನ್ನು ಸುಟ್ಟನೆಂದೂ ಹೇಳಬೇಕಲ್ಲವೇ?

**ಗಂಗಾ:**—ಅವನನ್ನು—ನೀವು ನೋಡಿದಿರಾ!

**ಪರಶು:**— ಹೌದು; ಅಷ್ಟೆ ಅಲ್ಲ. ನಮ್ಮಿಬ್ಬರ ಮಾತು ಕಥೆಯು ಉಪ್ಪರಿಗೆಯ ಕೋಣೆಯೊಳಗೆ ನಡೆಯುವಾಗ ಆತನು ಮರದ ಕೊಂಬೆಯ ಮೇಲೆ ಕುಳಿತು ನಮ್ಮನ್ನೇ ನೊಡುತಿದ್ದನೆಂದೂ—

**ಗಂಗಾ:**— ಹಾಗಾದರೆ— ನನಗೇತಕ್ಕೆ— ಹೇಳಲಿಲ್ಲ?

**ಜಂಗ:**— ನಿನ್ನ ಒಪ್ಪಿಗೆಯಿಂದಲೇ ಆತನು ಅಲ್ಲಿ ಕುಳಿತನೆಂದು ನನಗೆ ಬೋಧೆಯಾಯಿತು. ಅಲ್ಲಿಂದ ಮುಂದೆ ಬಂದರೆ ಮಾತ್ರ ಆತನನ್ನು ಕೋವಿಯಿಂದ ಸುಡುವುದಕ್ಕೆ ಗಫೂರನು ಸಿದ್ಧನಾಗಿಯೇ ಒಳಕೋಣೆಯೊಳಗೆ ಕಾದಿದ್ದನು. ಇದೆಲ್ಲ ದೈವತಂತ್ರ!

**ಗಂಗಾ:**— ದೈವ— ವಿದೆಯೆ? ಹಾಗೆಂದು ನಂಬುತ್ತೀರಾ?— ಅದು— ನಿಜವಾಗಿದ್ದರೆ— ಎಷ್ಟೊ— ಜನರು— ನಿಶ್ಚಿಂತರಾಗಿ— ತಮ್ಮ ಹಾಸಿಗೆಯಲ್ಲಿ— ಹೊರಳಾಡು— ವಂಥವರು— ಗಲ್ಲಿನ— ಉರುಳಿಗೆ — ತೂಗುತಿದ್ದರಲ್ಲವೆ?

**ಪರಶು:**— ಹೌದು. ದಯಾಮಯನಾದ ದೇವರು ನಮ್ಮ ಮಹತ್ತಾದ ದೋಷಗಳನ್ನೂ ಬಹಳ ಸಲ ಮನ್ನಿಸಿ ಸನ್ಮಾರ್ಗದಲ್ಲಿ ವರ್ತಿಸುವಂತೆ ನಮಗೆ ಇಂಬುಕೊಡುತ್ತಾನೆ. ಆದರೆ ಉದ್ಧಟರಾದ ಜನರು ಅದನ್ನು ಲೆಕ್ಕಿಸುವುದೇ ಇಲ್ಲ. ನಿನ್ನ ಮೊದಲಿನ ಧನಿಯು ಕಷ್ಟಕಾಲದಲ್ಲಿ ಆತನನ್ನು ನೋಡಿಕೊಂಡ ನಿಮಿತ್ತ ದೇವರು ನನ್ನಿಂದ ನಿನಗೆ ಅಮೂಲ್ಯವಾದ ಉಂಗುರಗಳನ್ನು ಕೊಡಿಸಿದನು. ಆಗ ದುರಾಶೆಯಿಂದ ಸರಾಫರನ್ನು ಕೊಲೆಮಾಡಿದ ನಿನ್ನ ಹೆಂಡತಿಯು ಬಲಿ ಬಿದ್ದುದನ್ನು ನೋಡಿ ನೀನು ಜಾಗರೂಕನಾಗಿರ ಬಹುದಿತ್ತು. ಅದಕ್ಕೆ ಬದಲಾಗಿ ಈ ಮನೆಯನ್ನು ಸುಲಿದು, ನನ್ನನ್ನು ನೀನು ಗುರುತಿಸಿದ ಮೇಲೂ ನನ್ನ ಕೊಲೆಗೆ ಮನಸ್ಸುಮಾಡಿದೆ. ಹಾಗಿದ್ದರೂ ನಿನ್ನನ್ನು ಸರಿದಾರಿಗೆ ತರಬೇಕೆಂದು ನೀನು ಮುಂಬೈಗೆ ಹೋಗುವಂತೆ ಅನುಕೂಲಿಸಿದೆನು. ಆದರೆ ನಿನ್ನ ಜನ್ಮದ ಋಣ ಇಲ್ಲಿಗೆ ತೀರಿದರೆ ಯಾರೇನು ಮಾಡಿಯಾರು?

**ಗಂಗಾ:**— ಹಾಗಿದ್ದರೆ— ಕೊಲೆಗಡಿಕ— ನಾದ ಭಿಕಾಜಿಯು— ನನ್ನನ್ನು— ಕೊಂದೂ— ತಪ್ಪಿಸಿಕೊಂಡನಲ್ಲ!—

**ಪರಶು**:— ಹೋಗುವದಾದರೂ ಎಲ್ಲಿಗೆ? ಭಗವಂತನ ವ್ಯಾಪಕ ದೃಷ್ಟಿಯಿಂದ ತಪ್ಪಿಸಿಕೊಳ್ಳಲಾಪನೆ? ಅವನು ಮಾಡತಕ್ಕ ಕೆಲಸ ಬೊಗಸೆಗಳು ತೀರಿದೊಡನೆ ಯಾವ ಘೋರ ಶಿಕ್ಷೆಯನ್ನು ಅನುಭವಿಸು ವನೊ ಯಾರು ಹೇಳಬಲ್ಲರು?

ಗಂಗಾರಾಮನಿಗೆ ಪ್ರಾಣೋತ್ಕ್ರಮಣ ಕಾಲದಲ್ಲಿ ನವೀನದೃಷ್ಟಿ ಬಂದಂತೆ ಆತನು ದೀಕ್ಷಿತನನ್ನು ಎವೆ ಇಕ್ಕದೆ ಕೊಂಚ ಹೊತ್ತು ನೋಡುತ್ತ "ನನಗೆ—ಕೊನೆಯ—ವರೆಗೆ—ಸುಖಜೀವನಕ್ಕೆ—ದಾರಿ ಯನ್ನು ಮಾಡಿಕೊಡಲು—ನೀವು—ಯಾರು? ನಿಜವಾಗಿಯೂ ಪರಶು ರಾಮ ದೀಕ್ಷಿತರೇ? ನಿಮಗೆ—ನನ್ನ—ಮೇಲೆ—ವಾತ್ಸಲ್ಯವಿರಲು ಕಾರಣ ವೇನು? ನೀವು—ದೇವಾಂಶವೇ?—ಯಾರು?"

ಪರಶುರಾಮದೀಕ್ಷಿತನು ಅದನ್ನು ಕೇಳಿ ತನ್ನ ತಲೆಯ ಪಗಡಿ ಯನ್ನು ತೆಗೆದು ಅಂಗಿಯನ್ನು ಕಳಚಿ ಬಿಟ್ಟನು. ಅವನ ಮುಂಗುರುಳು ಕೂದಲು ಹೊರಗೆ ಕಿವಿಯವರೆಗೆ ಜೋಲುತಿತ್ತು. ಹಣೆಯ ನಾಮ ವನ್ನು ಅಳಸಿದಾಗ ಗಂಗಾರಾಮ "ಓಹೊ!—ನೀವು—ಪರಶು— ರಾಮ—ದೀಕ್ಷಿ—ತರಲ್ಲ—

ಹಕೀಮ—ಮಲಿಕ—ಜಾಫ—ರರು—ಸಲಾಂ!"

ಅಷ್ಟರಲ್ಲಿ ತನ್ನ ಗಡ್ಡವನ್ನೂ ತಿರುವಿದ ಮೀಸೆಯನ್ನೂ ದೀಕ್ಷಿತನು ಕಳಚಿ ಬಿಟ್ಟನು.

ಗಂಗಾರಾಮನು ಆತನನ್ನು ಬಿರಬಿರನೆ ನೋಡುತ್ತ ಮೈಬೆವರು ತಿಪ್ಪು "ನಿಮ್ಮನ್ನು—ಎಲ್ಲಿಯೋ—ನೋಡಿದ—ಂತಿದೆ—ಈಗ—ನೆನ ಪಿಗೆ—ಬರುವುದಿಲ್ಲ. ಅಯ್ಯೊ! ನೀರು—ದಾಹ—"

**ಪರಶು**:—"ಇಗೊ ನಾನು ದೀಕ್ಷಿತನೂ ಅಲ್ಲ; ಹಕೀಮ ಜಾಫರನೂ ಅಲ್ಲ, ನಾನು—" ಎಂದು ಏನನ್ನೊ ಗಂಗಾರಾಮನ ಕಿವಿ ಯಲ್ಲಿ ಉಸುರಿದನು.

ಗಂಗಾರಾಮನು ಬೆಚ್ಚಿದಂತಾಗಿ "ಹರೇ ರಾಮ್! ಸರ್ವವ್ಯಾಪಿ ಯಾದ—ದೇವರು—ಇದ್ದಾನೆ. ಇದು—ಖಂಡಿತ—ದೇವರೇ!— ನನ್ನ—ಪಾಪಗಳನ್ನು—" ಎಂದು ಅರಚಿದನು. ಮುಂದೆ ಗಂಗಾರಾಮ

ನಿಗೆ ಮಾತು ಬರಲಿಲ್ಲ. ಅವನ ಕೈಕಾಲುಗಳು ತಣ್ಣಗಾಗಿದ್ದುವು. ಪ್ರಾಣವು ಹಾರಿ ಹೋಗಿತ್ತು. ಇಂದಿಗೆ ಒಂದು ಋಣತೀರಿತೆಂದು ಪರಶುರಾಮದೀಕ್ಷಿತನು—ಅಲ್ಲ—ಜಂಗಬಹದ್ದೂರನು ನಿಟ್ಟುಸಿರಿಟ್ಟನು.

ಅಷ್ಟರಲ್ಲಿ ಗಫೂರನು ಓಡಿ ಬಂದು ಪೋಲೀಸ ಸೂಪರಿಂಟೆಂಡೆಂಟ ಸಾಹೇಬರು ಸ್ವತಃ ತನಖಿಗೆ ಬರುವರು ಎಂದು ತಿಳಿಸಿದನು. ಅವನ ಹಿಂದೆಯೇ ಸೂಪರಿಂಟೆಂಡೆಂಟ ಸಾಹೇಬರು ಕುದುರೆಯ ಮೇಲೆ ನಾಗಾಲೋಟದಿಂದ ಬಂದಿದ್ದರು. ವಾಡಿಕೆಯ ಮೇರೆಗೆ ವಿಚಾರ ನಡೆದು ಗಂಗಾರಾಮನ ಶವವನ್ನು ಪೋಲೀಸ ಸ್ಟೇಶನಿಗೆ ವೈದರು.

---

## ಹದಿನೇಳನೆ ಅಧ್ಯಾಯ

### ವಿಚಿತ್ರ ಬಾತಮಿ

ಪ್ರಾತಃಕಾಲ ಏಳು ತಾಸಿನ ಸಮಯ. ರಾವ ಸಾಹೇಬ ದ್ವಾರಕಾನಾಥಪಂತನ ಮನೆಯ ಉಪ್ಪರಿಗೆ ಕೋಣೆಯಲ್ಲಿ ರಘುನಾಥ ಪಂತನು 'ರಾಷ್ಟ್ರಮತ'ವೆಂಬ ದೈನಿಕ ಪತ್ರಿಕೆಯನ್ನು ತೆರೆದು, ಅದರ ಮೇಲೆ ಒಮ್ಮೆ ದಿಗ್ದರ್ಶನ ಮಾಡುತ್ತ ದೊಡ್ಡ ಅಕ್ಷರಗಳಿಂದ ಮುದ್ರಿತ ವಾದ ಶಿರನಾಮೆಗಳನ್ನು ಓದುತ್ತಿದ್ದನು. ಅದರಲ್ಲಿ ಒಂದು ಶಿರನಾಮೆಯು ಆತನ ದೃಷ್ಟಿಯನ್ನು ಆಕರ್ಷಿಸಿತು. ಅದರಲ್ಲಿ ಹೀಗೆ ಇತ್ತು. "ಗುಟ್ಟು ಬಯಲಾಗಿದೆ. ದೊಡ್ಡ ತಕ್ಸೀರಿನ ತೀರ ನೂತನ ಕಥೆ! ಕೊಲೆಯ ಕಲೆಯು ಎಷ್ಟು ತೊಳೆದರೂ ಹೋಗದು." ಅದರ ಅಡಿಯಲ್ಲಿ "ಸಾಂಗಲಿಯ ಜಮಿನುದಾರ ವಿಶ್ವನಾಥಪಂತನ ಮನೆಯನ್ನು ದರೋಡೆಮಾಡಿಸಿ ಈಗ 20 ವರ್ಷಗಳ ಹಿಂದೆ ಅವನನ್ನು ಕೊಲೆ ಮಾಡಿಸಿದವನೊಬ್ಬನು; ತಕ್ಸೀರಿಗೆ ದ್ವೀಪಾಂತರವಾಸವನ್ನು ಅನು ಭವಿಸಿದವನು ಇನ್ನೊಬ್ಬನು. ನಿಜವಾದ ಅಪರಾಧಿಯು ಈಗ ದೊಡ್ಡ ಅಧಿಕಾರಕ್ಕೆ ಸೇರಿ ಬಿರುದುಗಳಿಗೆ ಕೈಚಾಚುತಲಿದ್ದಾನೆ. ಆದರೆ ಗುಟ್ಟು ರಟ್ಟಾಗುವುದಕ್ಕೆ ಕಾಲವಿಳಂಬವಿಲ್ಲ." ಇದನ್ನು ಓದಿದೊಡನೆ ರಘುನಾಥ ಪಂತನಿಗೆ ಇದೇನೊ ಅಸೂಯಾಪರವಾದ ಕೃತಕ ಲೇಖನವೆಂದು ಬೋಧೆಯಾಯಿತು. ಕೂಡಲೇ ಆತನು ಇನ್ನೊಂದು ಕೋಣೆಯಲ್ಲಿ

ಏನನ್ನೊ ಓದುತಿದ್ದ ತನ್ನ ತಾಯಿಯನ್ನು ಕೂಗಿ "ಅಮ್ಮಾ! ಇದೊಂದು ವಿಚಿತ್ರವರ್ತಮಾನ ಓದಿದಿರಾ?" ಎಂದು ಆ ಲೇಖನ ಮೇಲೆ ಬೆರಳಿಟ್ಟು ತೋರಿಸಿದನು. ಅದನ್ನು ಓದಿದೊಡನೆ ಫಕ್ಕನೆ ಸುಲೋಚನಾ ಬಾಯಿಯ ಮುಖವು ವಿವರ್ಣವಾಗಿ ನೀಲ ಛಾಯೆಯನ್ನು ತಳೆಯಿತು. ಎರಡು ದಿನಗಳ ಹಿಂದೆ ಜರಗಿದ ಟೀಪಾರ್ಟಿಯ ಸಮಾರಂಭದ ದಣುವು ಇನ್ನು ಹೋಗದೆ ತನ್ನ ತಾಯಿಯು ನಿತ್ರಾಣಿಯಾಗಿದ್ದಾಳೆಂದು ರಘುನಾಥಪಂತನು ತನ್ನ ಮೇಜಿನ ಮೇಲಿದ್ದ 'ಸ್ಮೆಲ್ಲಿಂಗ್ ಸೊಲ್ಟ್ಸ' ಸೀಸೆಯನ್ನು ತೆರೆದು ತಾಯಿಯ ಮೂಗಿಗೆ ಹಿಡಿದನು. ಅವಳು ಸ್ವಲ್ಪ ಚೇತರಿಕೊಂಡಳು. "ಅಮ್ಮಾ! ನಿಮಗೆ ಮೊನ್ನಿನ ದಣುವು ಇನ್ನೂ ಹೋಗಿಲ್ಲವೆಂತ ತೋರುತ್ತದೆ. ನೀವು ಸ್ವಲ್ಪ ವಿಶ್ರಾಂತಿ ಹೊಂದ ಬಾರದೇ! ಈ ಪುಸ್ತಕಪಠನದ ಹವ್ಯಾಸವೇಕೆ?" ಎಂದು ಪುಸ್ತಕ ವನ್ನು ಅವಳ ಕೈಯಿಂದ ಇಸುಕೊಂಡನು. ತುಲಸೀದಾಸ ರಾಮಾಯಣ ವೆಂದು ರಘುನಾಥನು ಕಂಡು, ತನ್ನ ತಾಯಿಯ ಮನಸ್ಸಿನಲ್ಲಿ ಏನೊ ವ್ಯಾಕುಲವಿದೆಯೆಂದು ಅವನಿಗೆ ಸಂದೇಹವುಂಟಾಯಿತು. ಟೀಪಾರ್ಟಿಯ ದಿನದಿಂದ ಅವಳ ಮನಸ್ಸು ಸುಸ್ಥವಾಗಿದ್ದಿಲ್ಲ. ಅವಳು ಅಂದಿನಿಂದ ಮೋರೆಯನ್ನು ನೋಡಿ ಮಾತನಾಡುತಿದ್ದಿಲ್ಲ. ರಾತ್ರಿಯಲ್ಲಿ ಸರಿಯಾಗಿ ನಿದ್ದೆ ಬರಲಿಲ್ಲವೆಂಬಂತೆ ಅವಳ ಕಣ್ಣುಗಳು ತುಸು ಊದಿಕೊಂಡಿದ್ದುವು. ಅವಳ ಮನಸ್ಸನ್ನು ಪೊಸ ವಿಚಾರದಲ್ಲಿ ತಿರುಗಿಸುವಂತೆ ರಘುನಾಥನು "ಅಮ್ಮಾ! ನೀವು ಬಾಲ್ಯದಲ್ಲಿ ಸಾಂಗಲಿಯಲ್ಲಿ ವಾಸವಾಗಿದ್ದಿರಂತೆ, ಅಲ್ಲವೇ?" ಎಂದು ಕೇಳಿದನು. ಆಗ ಅವಳು ತಲೆ ಎತ್ತದೆ 'ಹೌದು' ಎಂದು ಏನೊ ಹುಡುಕುವಂತೆ ಅತ್ತಿತ್ತ ನೋಡುತಿದ್ದಳು. ರಘುನಾಥನು ಇನ್ನೊಮ್ಮೆ "ಹಾಗಿದ್ದರೆ ಈ ಜಮೀನುದಾರ ವಿಶ್ವನಾಥಪಂತನ ಮನೆಯ ದರೋಡೆ ಮತ್ತು ಆತನ ಕೊಲೆಯ ಸಮಾಚಾರವನ್ನು ಕೇಳಿದ್ದಿರೇ?" ಎಂದು ಕೇಳಿದನು.

ಸುಲೋಚನೆಯು "ಹೌದು; ರಘು! ವಿಶ್ವನಾಥಪಂತರ ಮನೆಗೆ ದರೋಡೆ ಕಳ್ಳರು ನುಗ್ಗಿ, ಮನೆಗೆ ಬೆಂಕಿಹಚ್ಚಿ, ಇದ್ದುಬದ್ದುದನ್ನೆಲ್ಲಾ ದೋಚಿಕೊಂಡು ಹೋದರಂತೆ. ವಿಶ್ವನಾಥಪಂತರು ಇವರೊಡನೆ

ಕಾದಿ ಮಡಿದರಂತೆ. ಅವರ ಹೆಂಡತಿ ಮತ್ತು ಒಂದು ಚಿಕ್ಕ ಹೆಣ್ಣು ಮಗು ಎಲ್ಲಿಗೋ ಮಾಯವಾದರಂತೆ. ಆ ಮೇಲೆ ಅವರ ಪತ್ತೆಹತ್ತಲಿಲ್ಲ ಎಂದು ಮಾತ್ರ ನಾನು ಕೇಳಿದೆನು" ಎಂದು ಸಣ್ಣ ಸ್ವರದಿಂದ ಹೇಳಿ, ರಾಮಾಯಣದ ಪುಸ್ತಕವನ್ನು ಎತ್ತಿಕೊಂಡು ಉಪ್ಪರಿಗೆಯಿಂದ ಕೆಳಕ್ಕೆ ಇಳಿದು ಹೋದಳು. ಹೋಗುವಾಗ "ಪ್ರಮಾದವಾಯಿತೇ? ನನ್ನ ಪ್ರಿಯನು ಅಪರಾಧಿಯಲ್ಲವೆಂದು ನಾನು ಖಚಿತವಾಗಿಯೂ ನಂಬಿದ್ದೆನು. ಅವನ ಮೇಲೆ ತಂದ ಆರೋಪದಿಂದ ಆತನಿಗೆ ವಿಮೋಚನೆಯಾಗಬೇಕೆಂದು ಸತ್ಯಪಾಲಕನಾದ ದೇವರೊಡನೆ ಎಷ್ಟೊ ಬೇಡಿದೆನು. ಎಷ್ಟೊ ಹರಕೆಗಳನ್ನು ಹೊತ್ತೆನು. ಆದರೆ ಶ್ರೀ ಭಗವಂತನು ಏಕೋ ನಿರ್ದಯನಾದನು. ಕೊಲೆಯ ತಕ್ಸೀರು ನನ್ನ ಪ್ರಿಯನ ಮೇಲೆ ಸ್ಥಾಪನೆಯಾಯಿತು. ಆತನು ದ್ವೀಪಾಂತರ ಕೈದಿಯಾದನು. ಆತನು ಬರುವನೆಂದು ಐದು ವರ್ಷಗಳ ವರೆಗೆ ಕಾದಿದ್ದೆನು. ಕೊನೆಗೆ ನಿರಾಶಳಾಗಿ ನಿರುಪಾಯಳಾಗಿ ಈ ವಿವಾಹಕ್ಕೆ ಕೈಯೊಡ್ಡಿದೆನು. ಈಗಲಾದರೂ ಆ ಹತಭಾಗ್ಯನ ಲಾಂಛನವನ್ನು ಅಳಸಿಬಿಡುವ ಸುಸಂದರ್ಭವು ಬರುವಂತಿದೆಯೇ? ಜಂಗಬಹದ್ದೂರರೊಡನೆ ಮೊನ್ನೆ ಸಿಕ್ಕಿದ ದರ್ಶನ ಲಾಭಕ್ಕೂ ಈ ಬಾತಮಿಗೂ ಪರಸ್ಪರ ಸಾನಿಧ್ಯವು ಇರಲು ಕಾರಣವೇನು? ಈಗ ಸತ್ತು ಹೋದ ಆ ವಾರ್ತೆಯು ಪುನಃ ಮೊಳೆತು ನಾಯಿ ಸೊಣಗಿನ ಬಳ್ಳಿಯಂತೆ ಹಬ್ಬಿ ಯಾರ ಮೈಗೆ ಅಂಟಿಕೊಂಡೀತು, ಈ ಪ್ರಾಯದಲ್ಲಿ ಇನ್ನೂ ಎಂತಹ ದುಃಖಕರ ವಾರ್ತೆಗಳನ್ನು ಕೇಳುವ ಪ್ರಾಪ್ತಿಯು ಈ ಕಿವಿಗಳಿಗೆ ಬಂದೀತು?" ಎಂದು ಕೊರಗುತ್ತ ಮೆಟ್ಟಿಲನ್ನು ಇಳಿದಳು; ಕಣ್ಣಿನಲ್ಲಿ ಒಸರಿದ ಒಂದೆರಡು ಹನಿಗಳನ್ನು ತನ್ನ ಸೆರಗಿನಿಂದ ಒರಸಿಕೊಂಡು ಅಡಿಗೆಮನೆಗೆ ಹೋದಳು.

ರಘುನಾಥಪಂತನು ಇಂಥದೇ ಒಂದು ಕಥೆಯನ್ನು ಜಂಗಬಹದ್ದೂರರ ಬಂಗಲೆಯಲ್ಲಿ ಅಯೋಷೆಯ ಬಾಯಿಂದ ಕೇಳಿದ್ದನು. ಆ ಕಥೆಯಲ್ಲಿ ಅವಳು ಹೆಸರುಗಳನ್ನು ಮಾತ್ರ ಮರೆಪಡಿಸಿದ್ದಳು. ಅದು ಸ್ಮರಣೆಗೆ ಬಂದು ರಘುನಾಥನ ಮನಸ್ಸು ವಿಹ್ವಲವಾಯಿತು. ಈ ಬಾತಮಿಯಲ್ಲಿ ಯಾವದೋ ಒಬ್ಬ ದೊಡ್ಡ ಅಧಿಕಾರಿಯ ಮೇಲೆ

ಆರೋಪವನ್ನು ಹೊರಿಸುವ ಒಳಸಂಚು ನಡೆಯುತ್ತಿದೆ ಎಂದು ಆತನು ತಿಳಿವನು. ತನ್ನ ತಂದೆಗೆ ಬಿರುದು ಸಿಕ್ಕಿದುದನ್ನು ಸಹಿಸಲಾರದೆ ಮತ್ಸರದಿಂದ ಯಾರಾದರೂ ಈ ಬಾತಮಿಯನ್ನು ಹೊರಡಿಸಿದರೇ ಎಂದು ಸಂಶಯವು ಆತನ ಮನಸ್ಸಿಗೆ ಥಕ್ಕನೆ ಹೊಳೆಯಿತು. ಪತ್ರಿಕೆಯ ಸಂಪಾದಕನಾದ ಗಿರಿಧರಲಾಲನು ತನ್ನ ಮಿತ್ರನಾಗಿರುವುದರಿಂದ ಅವನೊಡನೆ ವಿಚಾರಿಸಿ, ಈ ಬಾತಮಿಯ ನೆಲೆ ಹುಡುಕಬೇಕೆಂದು ರಘುನಾಥನು ತನ್ನ ಪೋಷಾಕನ್ನು ತೊಟ್ಟುಕೊಂಡು ಬೀದಿಗೆ ಇಳಿದನು.

'ರಾಷ್ಟ್ರಮತ' ಪತ್ರಿಕೆಯ ಕಾರ್ಯಾಲಯವು ದ್ವಾರಕಾನಾಥನ ಮನೆಯಿಂದ ಎರಡು ಫರ್ಲಾಂಗ್ ದೂರದೊಳಗೆನೇ ಇತ್ತು. ರಘುನಾಥನು ಆಫೀಸಿನ ಕೋಣೆಯನ್ನು ಪ್ರವೇಶಿಸಿದಾಗ 8 ಗಂಟೆ ಹೊಡೆದಿತ್ತು. ಗಿರಿಧರಲಾಲನು ಕುರ್ಚಿಯಲ್ಲಿ ಕುಳಿತುಕೊಂಡು ತಲೆಬಾಗಿಸಿ ಏನನ್ನೊ ಬರೆಯುತಿದ್ದನು. ರಘುನಾಥನನ್ನು ನೋಡಿದೊಡನೆ ನಸುನಗುತ್ತಾ "ರಘುನಾಥಪಂತ! ಏನು ಬಂದಿರಿ? ಇತ್ತಕಡೆ ಕುರ್ಚಿಯಲ್ಲಿ ಕುಳಿತುಕೊಳ್ಳಿರಿ. ಮೊನ್ನೆ ಟೀಪಾರ್ಟಿಯ ಸಮಾಚಾರವನ್ನು ಪ್ರಕಟಿಸಿದುದು ನಿಮಗೆ ಸಮಾಧಾನವಾಯಿತೇ?" ಎಂದನು.

**ರಘುನಾಥ:**—ಅದೆಲ್ಲ ಸರಿಯೆ. ಈಗ ನಾನು ಇನ್ನೊಂದು ಸಮಾಚಾರವನ್ನು ನಿಮ್ಮೊಡನೆ ಕೇಳಲು ಬಂದಿರುವೆನು. ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾದ ಆ ವಿಚಿತ್ರ ವರ್ತಮಾನವೇನದು?

**ಗಿರಿಧರ:**—ಅದಾವ ಸಮಾಚಾರ?

**ರಘು:**—ವಿಶ್ವನಾಥಪಂತರ ಮನೆಯ ದರೋಡೆಯ ಬಾತಮಿ.

**ಗಿರಿಧರ:**—ಯಾವ ವಿಶ್ವನಾಥಪಂತರು?

**ರಘು:**—ಎಲ! ನಿಮ್ಮ ಪತ್ರಿಕೆಯಲ್ಲಿ ಪ್ರಕಟವಾಗಿರುವ ಬಾತಮಿಗಳ ಸಮಾಚಾರವು ನಿಮಗೆನೇ ಗೊತ್ತಿಲ್ಲವೇ—

**ಗಿರಿಧರ:**—ಹಾಗಲ್ಲ ಬಾತಮಿಗಳ ಇಲಾಖೆಯೇ ಬೇರೆ. ಅವನ್ನು ನಮ್ಮ ಹಸ್ತಕನೊಬ್ಬನು ನೋಡಿಕೊಳ್ಳುತ್ತಾನೆ. ಅಗ್ರಲೇಖಗಳನ್ನೂ ವಿಶೇಷ ಬಾತಮಿಗಳ ಟೀಕೆಯನ್ನೂ ಬರೆಯುವ ಕೆಲಸವು ನನ್ನದು.

**ರಘು:**— ಅಷ್ಟರ ವರೆಗೆ ನಮ್ಮ ತಂದೆಯವರ ಮೇಲೆ ಜನತೆಗೆ ವಿನಾಕಾರಣವಾಗಿ ಒಂದು ಬಗೆಯ ಸಂಶಯವು ಹುಟ್ಟಿದರೆ?

**ಗಿರಿಧರ:**— ವಾರ್ತೆ ಸುಳ್ಳಾದ ಪಕ್ಷಕ್ಕೆ ಈ ಅಪವಾದದ ಕೊಳೆ ತಾನಾಗಿಯೆ ತೊಳೆದು ಹೋಗುವುದಲ್ಲವೆ?

**ರಘು:**— ಅಂಥ ಬಾತಮಿಯೇ ಬಾರದಿದ್ದರೆ—

**ಗಿರಿಧರ:**— ಆಗ ಸ್ವತಏವ ಈ ವಿಷಯವು ಜನರ ಸ್ಮರಣೆಯಿಂದ ಹಾರಿಹೋಗುವುದು. ಅದನ್ನು ಈಗ ನಾವಾಗಿ ಕೆದಕುವುದೆಂದರೆ ಮಲಗಿದ ಸಿಂಹವನ್ನು ಸರಳವೊನೆಯಿಂದ ಚುಚ್ಚಿ ಎಬ್ಬಿಸಿದಂತಾಗುವುದು. ಆಗ ಅದರ ಶ್ವಾಸೋಚ್ಛ್ವಾಸಗಳ ಗೊರಿಕೆಯ ಚಿಕ್ಕ ಶಬ್ದದ ಬದಲಾಗಿ ಅದರ ಗರ್ಜನೆಯು ಊರೆಲ್ಲಾ ಹಬ್ಬುವುದು.

**ರಘು:**— ಇದು ಒಳ್ಳೆಯ ತತ್ವಜ್ಞಾನ— ಪತಿಯ ಪ್ರಾಣವು ಗಂಟಲಲ್ಲಿ ಬಂದಾಗ ಸತಿಗೆ ವೈರಾಗ್ಯದ ಉಪದೇಶವನ್ನು ಹೇಳಿದಂತೆ. ನೀವು ನಿಜವಾಗಿಯೂ ನನ್ನ ಗೆಳೆಯರು ಅಹುದಾಗಿದ್ದರೆ ಮರುಸಂಚಿಕೆಯಲ್ಲಿಯೇ ಈ ಬಾತಮಿಯನ್ನು ಖಂಡಿಸಿ ಬರೆಯಬೇಕು. ಇಲ್ಲವಾದರೆ—

**ಗಿರಿಧರ:**— ಇಲ್ಲವಾದರೇನು?

**ರಘು:**— ನಮ್ಮ ಕುಟುಂಬಕ್ಕೆ ಅದರಿಂದ ಆಗಬಹುದಾದ ಮಾನನಷ್ಟದ ಭಾರವನ್ನು ಕೋರ್ಟುಗಳ ಮೂಲಕ ನಿಮ್ಮ ಮೇಲೆ ಹೊರಿಸಬೇಕಾಗುವುದು. ಆಗ ನನ್ನನ್ನು ದೂರಬೇಡಿ.

**ಗಿರಿಧರ:**— ರಘುನಾಥ! ನಿಮ್ಮ ಮೇಲೆ ನನಗೆ ನಿಜವಾದ ಅಭಿಮಾನವಿಲ್ಲದಿದ್ದರೆ, ನನ್ನ ಆಫೀಸಿಗೆ ಬಂದು ನನಗೆ ಈ ಒಣಬೆದರಿಕೆಯನ್ನು ತೋರಿಸುವುದಕ್ಕಾಗಿ ನಿಮಗೆ ಅರ್ಧಚಂದ್ರಪ್ರಯೋಗವನ್ನು ಮಾಡಿಸುತಿದ್ದೆನು. ಈಗ ಇಷ್ಟೇ ನಾನು ನಿಮ್ಮೊಡನೆ ಬೇಡುವೆನು. ಇಂದಿನಿಂದ ಒಂದು ವಾರದ ಸಮಯವನ್ನು ಕೊಡಿರಿ. ಅನಂತರ ನಿಮಗೆ ಇಷ್ಟವಿದ್ದಂತೆ ಮಾಡಿರಿ.

**ರಘು:**— ಅದೇನು ಹಾಗೆ ಹೇಳುತ್ತೀರಿ? ಈ ವಿಷಯದಲ್ಲಿ ಸ್ವತಃ ರಹಸ್ಯವಾಗಿ ವಿಚಾರ ನಡೆಸುತ್ತೀರಾ?

"ಹಾಗಿದ್ದರೆ ಓದಿನೋಡಿ" ಎಂದು ರಘುನಾಥನು ತನ್ನ ಕೈಯಲ್ಲಿರುವ ಪತ್ರಿಕೆಯಲ್ಲಿ ಗುರುತು ಹಾಕಿದ ಬಾತಮಿಯನ್ನು ತೋರಿಸಿದನು.

**ಗಿರಿಧರ:**—(ಅದನ್ನು ಓದಿ) ಆಶ್ಚರ್ಯ! ಈ ಬಾತಮಿಯನ್ನು ನಾನೂ ಕೂಡಾ ಓದಿಲ್ಲ.

**ರಘು:**—ಹಾಗಿದ್ದರೆ ಈ ವಿಷಯದಲ್ಲಿ ಇನ್ನೇನಾದರೂ ಹೊಸ ವರ್ತಮಾನವು ಇದೆಯೇ ಎಂದು ಒಳಗೆ ತಿಳಿದು ಹೇಳುವಿರಾ?

**ಗಿರಿಧರ:**—"ಹಸ್ತಕನೊಡನೆ ವಿಚಾರಿಸುವೆನು" ಎಂದು ಕೋಣೆಯ ಒಳಬಾಗಿಲನ್ನು ತಳ್ಳಿ ಒಳಗೆ ಪ್ರವೇಶಮಾಡಿದನು. ಅಲ್ಲಿ 5 ನಿಮಿಷ ತಡೆದು ಹೊರಗೆ ಬಂದು "ಬಾತಮಿಯ ಮೂಲಪ್ರತಿಯಲ್ಲಿ ಹೆಸರುಗಳು ಕೂಡಾ ಇವೆ. ಆದರೆ ನಮ್ಮ ಹಸ್ತಕನು ಅವನ್ನು ಪ್ರಕಟಿಸಿಲ್ಲ."

**ರಘು:**—ಆ ಹೆಸರುಗಳು ಯಾರವು? ಬರೆದ ಲೇಖಕನು ಯಾರು?

**ಗಿರಿಧರ:**—ಅವನ್ನು ಬಿಚ್ಚಿ ಹೇಳುವುದು ಪತ್ರಿಕಾಕರ್ತರ ಧರ್ಮವಲ್ಲ.

**ರಘು:**—ಆಗಲಿ. ಅವನ್ನು ಯಾರಾದರೂ ಊಹಿಸಬಹುದು. 'ದೊಡ್ಡ ಅಧಿಕಾರದಲ್ಲಿದ್ದು ಬಿರುದುಗಳಿಗೆ ಕೈಚಾಚುತ್ತಿರುವನು' ಎಂಬ ಮಾತುಗಳು ಇರುವುದರಿಂದ ಯಾರೊ ಮತ್ಸರದಿಂದ ನಮ್ಮ ತಂದೆಯನ್ನು ಉದ್ದೇಶಿಸಿ ಬರೆದಿರಬೇಕು. ಅದು ನಿರಾಧಾರವಾದುದೆಂದು ಮುಂದಿನ ಸಂಚಿಕೆಯಲ್ಲಿಯೇ ಪ್ರಕಟಿಸಬಹುದೇ?

**ಗಿರಿಧರ:**—ಹೇಗೆ? ಒಮ್ಮೆ ಒಂದು ಬಾತಮಿಯನ್ನು ಪ್ರಕಟಿಸಿದ ಮೇಲೆ, ಸರಿಯಾದ ರುಜುವಾತು ಸಿಗದೆ ಆ ಬಾತಮಿಯು ನಿರಾಧಾರವಾದುದೆಂದು ಬರೆಯುವುದೂ ನಮ್ಮ ಧರ್ಮವಲ್ಲ.

**ರಘು:**—ಅಂಥ ರುಜುವಾತು ಸಿಗುವ ಬಗೆ ಹೇಗೆ?

**ಗಿರಿಧರ:**—ಆ ಬಾತಮಿಯಲ್ಲಿಯೇ 'ಈ ಗುಟ್ಟು ಬೇಗನೆ ಬಯಲಾಗುವುದು' ಎಂದು ಇದೆಯಲ್ಲ! ಅದನ್ನು ಕಾಯೋಣ.

"ಅದೊಂದನ್ನು ಈಗ ಹೇಳಲಾರೆ. ನನ್ನ ಹೇಳಿಕೆಯಂತೆ ನನಗೆ ಸಮಯವನ್ನು ಮಾತ್ರ ಕೊಡೋಣಾಗಲಿ" ಎಂದು ಗಿರಿಧರಲಾಲನು ಹೇಳಿ ರಘುನಾಥನನ್ನು ಕಳುಹಿಸಿಕೊಟ್ಟು, ಆಫೀಸಿನಿಂದ ತಾನೂ ಹೊರಟುಹೋದನು.

---

## ಹದಿನೆಂಟನೆ ಅಧ್ಯಾಯ

### ಬಾತಮಿಯ ಸತ್ಯತೆ

ಗಿರಿಧರಲಾಲನು ಹೇಳಿದ ದಿನಗಳು ಕಳೆದುವು. ಅಷ್ಟರ ವರೆಗೆ ರಘುನಾಥಪಂತನಿಗೆ ಮುಳ್ಳಿನ ಮಂಚದ ಮೇಲೆ ಬಿದ್ದುಕೊಂಡಂತೆ ಮನಸ್ಸಿನ ಸ್ಥಿತಿಯಾಗಿತ್ತು. ತನ್ನ ತಾಯಿಯ ಮನಸ್ಸಿನಲ್ಲಿಯೂ ತನ್ನಲ್ಲಿ ಬಂದ ಸಂಶಯವು ಮೂಡಿರಬೇಕೆಂದು ಆತನು ನೆನಸಿದನು. ಹೀಗಾಗಿ ಹಗಲು ರಾತ್ರೆ ಅದೇ ಚಿಂತನೆಯಿಂದ ಅವನು ಕಾಲ ಕಳೆದನು. ಎಂಟನೇ ದಿನ ಬೆಳಗ್ಗೆ ಎದ್ದು ಚಾ ಕುಡಿದೊಡನೆ ಆತನು ಮನೆಯಿಂದ ಹೊರಬಿದ್ದು ಗಿರಿಧರಲಾಲನ ಪತ್ರಿಕೆಯ ಆಫೀಸನ್ನು ಉದ್ದೇಶಿಸಿ ಹೋದನು. ಅಲ್ಲಿ ಇನ್ನು ಬಾಗಿಲು ತೆರೆಯುವ ಹೊತ್ತಾಗಿರಲಿಲ್ಲ. ಹೀಗಾದ್ದರಿಂದ ೮ ಗಂಟೆ ಹೊಡೆಯುವ ವರೆಗೆ ಆಫೀಸಿನ ಮುಂದುಗಡೆ ಜಗಲಿಯಲ್ಲಿ 'ಗಸ್ತು' ಮಾಡುವ ಕೆಲಸವನ್ನು ಅವನು ಕೈಕೊಂಡನು. ೮ ಗಂಟೆಗೆ ಬಾಗಿಲು ತೆರೆಯಿತು. ಗಿರಿಧರಲಾಲನು ಪರ ಊರಿಗೆ ಹೋದವನು ಮರಳಿ ಬಂದ ಸಮಾಚಾರವಿಲ್ಲೆಂದು ಹಸ್ತಕನು ಹೇಳಿದನು. "ಮಾನ ನಷ್ಟದ ವ್ಯಾಜ್ಯ"ವು ತನ್ನ ಮೇಲೆ ಬಂದೀತೆಂಬ ಭಯದಿಂದ, ಗಿರಿಧರ ಲಾಲನು, ತನ್ನನ್ನು ವಂಚಿಸಿ ದೇಶಾಂತರವಾಸಿಯಾದನೇನೋ ಎಂಬ ಸಂಶಯವು ರಘುನಾಥನನ್ನು ಆವರಿಸಿತು. ರಘುನಾಥನು ತನ್ನ ಗೆಳೆಯನ ಕುಹಕಕ್ಕೆ ಬುದ್ಧಿ ಕಲಿಸಬೇಕೆಂದು ನಿಶ್ಚಯಮಾಡಿಕೊಂಡು ಕಿಡಿಕಿಡಿಯಾಗಿ ಪತ್ರಿಕೆಯ ಆಫೀಸಿನಿಂದ ಕೆಳಗೆ ಇಳಿದು ನಾಲ್ಕು ಮಾರು ಮುಂದೊತ್ತುವಷ್ಟರಲ್ಲಿ ಗಿರಿಧರಲಾಲನು ಅವನಿಗೆ ಎದುರಾಗಿ ಬಂದನು.

**ಗಿರಿಧರ:**—ರಘುನಾಥ! ಪರಊರಿಗೆ ಹೋದವನು ನಿನ್ನೆ ರಾತ್ರೆಯೇ ಬಂದುದರಿಂದ ನಿಮ್ಮನ್ನು ಕಾಣಲು ಅವಕಾಶ ದೊರೆಯ

ರಲ್ಲ. ಈಗ ಆಫೀಸಿಗೆ ಹೋಗಿ ನಿಮ್ಮಲ್ಲಿಗೆನೇ ಬರಬೇಕೆಂದು ಇದ್ದೆನು.

**ರಘುನಾಥ:**— ಏನು ವಿಶೇಷ ಕಾರ್ಯವಿತ್ತೋ?

**ಗಿರಿಧರ:**— ನಮ್ಮ ಪರಮಾಪ್ತನಿಗೆ ತಿಳಿದು ತಿಳಿಯದೆ ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ್ತವನ್ನು ಮಾಡಲು ಹೋಗಿದ್ದೆನು.

**ರಘುನಾಥ:**— ಎಲ್ಲಿಗೆ? ನಾಸಿಕಕ್ಕೋ ಗೋಕರ್ಣಕ್ಕೋ?

**ಗಿರಿಧರ:**— "ಅವೆರಡು ಸ್ಥಳಗಳಿಗೂ ಅಲ್ಲ. ಸಾಂಗಲಿಗೆ ಹೋಗಿದ್ದೆನು" ಎನ್ನುವಾಗಲೇ ಗಿರಿಧರಲಾಲನ ತುಟಿಗಳಲ್ಲಿ ಕಂಪನವೂ ಕಣ್ಣುಮೋರೆಗಳಲ್ಲಿ ದುಃಖದ ಚಿಹ್ನೆಗಳೂ ತೋರಿಸಿಕೊಂಡವು. ತನ್ನ ತಪ್ಪನ್ನು ಗಿರಿಧರಲಾಲನು ಒಪ್ಪಿ ಅದಕ್ಕೆ ಸರಿಯಾದ ಸಮಾಧಾನವನ್ನು ಹೇಳಲಿಕ್ಕಿರುವನೆಂದು ರಘುನಾಥನು ಹಿಗ್ಗಿದನು. ಮತ್ತು "ಸಾಂಗಲಿಗೆ? ಅದೇತಕ್ಕೆ ಹೋದಿರಿ?" ಎಂದು ತವಕದಿಂದ ಪ್ರಶ್ನಿಸಿದನು.

**ಗಿರಿಧರ:**— ಆ ಬಾತಮಿಯ ನಿಜತ್ವವನ್ನು ಪತ್ತೆಮಾಡಲು ಹೋಗಿದ್ದೆನು.

**ರಘುನಾಥ:**— ಗಿರಿಧರನನ್ನು (ತಬ್ಬಿಕೊಂಡು) "ನನ್ನದೂ ತಪ್ಪಾಯಿತು. ನಿಮ್ಮ ಮೇಲೆ ನಿಷ್ಕಾರಣವಾಗಿ ರೇಗಿದೆನು. ಹೇಗೂ ನಮ್ಮಪ್ಪನ ಮೇಲೆ ಆರೋಪವೇನೂ ಇಲ್ಲವಷ್ಟೆ!"

**ಗಿರಿಧರ:**— "ರಘುನಾಥ್! ನಿಜವಾದ ಸಮಾಚಾರವನ್ನು ಹೇಳಲೆ? ನನ್ನ ನಾಲಿಗೆಯೇ ಬೀಗಿಹೋದಂತಾಗಿದೆ." ಇದನ್ನು ಕೇಳಿದೊಡನೆ ರಘುನಾಥನ ಬಿಳುಪಾದ ಮುಖವು ಕಪ್ಪಾಗಿ ಹೋಯಿತು. ತವಕದಿಂದ ಆತನು "ಅದೇನು? ಆ ಆರೋಪವು ನಿಜವೆ" ಎಂದು ಕೇಳಿದನು.

**ರಘುನಾಥ:**— ಮಿತ್ರಾ! ಅಧೀರನಾಗಬೇಡಿ. ಮೊದಲು ಈ ಕಾಗದವನ್ನು ಓದಿಕೊಳ್ಳಿ. ಇದನ್ನು ಆ ಪ್ರಾಂತದ ಸಭ್ಯ ಗೃಹಸ್ಥರೊಬ್ಬರು ನನಗೆ ಬರೆದು ಕೊಟ್ಟು ತನ್ನ ಸಹಿಯನ್ನು ಕೊಟ್ಟಿರುವರು. ಅದನ್ನು ಸರಕಾರದವರ ಮುಂದೆ ವಿಚಾರಕ್ಕೆ ಇಡುವುದಿಲ್ಲವೆಂದು ಆಣೆ ಪ್ರಮಾಣಗಳನ್ನು ಮಾಡಿದ ಮೇಲೆಯೇ ಅವರು ನನಗೆ ಬರೆದುಕೊಟ್ಟರು" ಎಂದು ಆ ಪತ್ರವನ್ನು ಗಿರಿಧರಲಾಲನು ರಘುನಾಥನ ಕೈಗೆ ಒಪ್ಪಿಸಿದನು.

ಅದನ್ನು ಓದಿದಾಗ ರಘುನಾಥನಿಗೆ ಸಿಡಿಲು ಬಡಿದಂತಾಯಿತು. "ಹಾಯ್! ಹಾಯ್! ನಮ್ಮ ತಂದೆಯ ಮೇಲೆ ಈ ಕಲಂಕವು ಹಳ್ಳಡಿ ಕೊಂಡರೆ ಅವರು ಲೋಕಕ್ಕೆ ಮೋರೆಯನ್ನು ತೋರಿಸುವುದಾದರೂ ಹೇಗೆ? ನಮ್ಮ ತಾಯಿಯು ಎಂಟು ಹತ್ತು ದಿನಗಳಿಂದ ವಿಶೇಷವಾಗಿ ಕೊರಗುತಿದ್ದಾಳೆ. ಒಂದೇ ಒಂದು ಅಗುಳಾದರೂ, ಅವಳು ಬಾಯಿಗೆ ಎತ್ತಿದಂತೆ ಕಾಣುವುದಿಲ್ಲ. ಅವಳಿಗಾದರೂ ಈ ಸಂದೇಹವು ಹೇಗೆ ಉಂಟಾಯಿತು? 'ಟೀ ಪಾರ್ಟಿ'ಯ ದಿನದಿಂದ ಅವಳ ಮನಸ್ಸು ಸುಸ್ಥವಾಗಿಲ್ಲ. ಈಗ ಈ ಸಮಾಚಾರವನ್ನು ಕೇಳಿದರೆ ಅವಳ ಪ್ರಾಣವು ಅರೆಕ್ಷಣವೂ ನಿಲ್ಲಲಾರದು."

**ಗಿರಿಧರ:**— ನೀವು ಇದನ್ನೆಲ್ಲಾ ಹೊರಗೆಡಹುವುದು ಅಗತ್ಯವಿಲ್ಲ. ಕಂಗೆಡುವುದೂ ಪುರುಷಾರ್ಥವಲ್ಲ. ಈ ಕಥೆಯು ಸುಮಾರು ಇಪ್ಪತ್ತು ವರ್ಷ ಹಿಂದಿನದು. ಆ ಕಾಲದಲ್ಲಿ ಇದ್ದವರು ಈಗ ಸಾಂಗಲಿಯಲ್ಲಿಯೂ ಬಹಳ ಮಂದಿ ಇಲ್ಲ. ಕಾಲಿಗೆ ಅಂಟಿದ್ದನ್ನು ನೆಲಕ್ಕೆನೇ ಒರಸಿಬಿಡ ಬೇಕು. ಅದನ್ನು ಕೈಯಿಂದ ಎತ್ತಿ ಮೂಗಿಗೆ ಹಚ್ಚಿಕೊಳ್ಳಬಾರದು. ಇನ್ನೊಂದು ವಿಚಾರ.

**ರಘು:**— ಅದೇನು?

**ಗಿರಿಧರ:**— ನಂದೂಲಾಲನು ನಿಮ್ಮನ್ನು ಅಳಿಯನನ್ನಾಗಿ ಮಾಡಿ ಕೊಳ್ಳುವ ಪ್ರಸ್ತಾಪವೇನಾಯಿತು?

**ರಘು:**— ಆ ಪ್ರಸ್ತಾಪವು ಆಗಲೇ ಬಿದ್ದು ಹೋಗಿದೆ.

**ಗಿರಿಧರ:**— ಸರಿ ಸರಿ! ಅಷ್ಟೇ!

**ರಘು:**— ಅದಕ್ಕೂ ಇದಕ್ಕೂ ಏನು ಬಾದರಾಯಣ ಸಂಬಂಧ?

**ಗಿರಿಧರ:**— "ಅಂಥದ್ದು ಏನೂ ಇಲ್ಲ. ಈಗ ನಿಮ್ಮ ಮನಸ್ಸು ತುಂಬಾ ವ್ಯಾಕುಲದಿಂದ ಪೀಡಿತವಾಗಿದೆ. ನಾವಿಬ್ಬರೂ ಜಂಗಬಹದ್ದೂರರ ಅಸ್ಮಾನಬಾಗಿಗೆ ಹೋಗೋಣ. ಅವರ ಬಂಗಲೆ ಮನೋರೋಗ ದಿಂದ ಪೀಡಿತರಾದವರಿಗೆ ಉತ್ತಮ ಚಿಕಿತ್ಸಾಲಯ" ಎಂದು ಹೇಳಿ ಆತನ ಹೆಗಲ ಮೇಲೆ ತನ್ನ ಕೈಯನ್ನು ಇಟ್ಟುಕೊಂಡು, ಗಿರಿಧರಲಾಲನು ಅಸ್ಮಾನ ಬಾಗಿಗೆ ಆತನನ್ನು ಕರೆದುಕೊಂಡು ಹೋದನು.

## ಹತ್ತೊಂಬತ್ತನೆ ಅಧ್ಯಾಯ

### ರಘುನಾಥಪಂತನ ಪಯಣದ ಏರ್ಪಾಡು

ಗಿರಿಧರಲಾಲನೂ ರಘುನಾಥಪಂತನೂ ಒಂದು 'ವಿಕ್ಟೋರಿಯ' ವನ್ನು ಕರೆದು ಅದರಲ್ಲಿ ಕುಳಿತು ಅಸ್ಮಾನಬಾಗಿಗೆ ಹೋದರು. ಅಲ್ಲಿ ಬೈಠಕಖಾನೆಯೊಳಗೆ ಕಾಲಿಡುವಾಗಲೇ ಷಂಷೇರಜಂಗನು ಅವರಿಗೆ ಎದುರಾಗಿ ಬಂದನು. "ಭಲೆ ಭೇಷ್! ತಕ್ಕ ಕಾಲದಲ್ಲಿ ಬಂದುಬಿಟ್ಟಿರಿ!" ಎಂದು ಅವರಿಬ್ಬರಿಗೂ ಹಸ್ತಲಾಘವವನ್ನು ಮಾಡಿ ತಕ್ಕ ಆಸನಗಳಲ್ಲಿ ಕುಳ್ಳಿರಿಸಿ, ತಾನೂ ಒಂದು ಸೋಫಾದ ಮೇಲೆ ಕುಳಿತುಕೊಂಡನು.

**ಗಿರಿಧರ:**—ತಕ್ಕ ಕಾಲವೆಂದು ಯಾತಕ್ಕೆ ಹೇಳಿದಿರಿ?

**ಜಂಗ:**—ಸ್ವಾಭಾವಿಕವಾಗಿ ಶಾಂತವಾದ ನನ್ನ ಮನಸ್ಸಿನಲ್ಲಿ ಇಂದೇನೊ ಒಂದೆರಡು ವಿಷಮ ತರಂಗಗಳು ಎದ್ದಿವೆ. ಅವನ್ನು ಹೋಗಲಾಡಿಸುವುದಕ್ಕೆ ನಿಮ್ಮಂಥ ಗೆಳೆಯರ ಆಗಮನವು ತಕ್ಕ ಸಮಯವೆಂದೆನು.

**ಗಿರಿಧರ:**—ಅಂಥ ತರಂಗಗಳೆಂದರೇನು? ಆಳವಾಗಿಯೂ ಗಭೀರವಾಗಿಯೂ ಹರಿಯುವ ಪ್ರವಾಹದಲ್ಲಿ ತರಂಗಗಳನ್ನು ಎಬ್ಬಿಸಬೇಕಾದರೆ ಸಾಮಾನ್ಯ ಸುಂಟರಗಾಳಿಯು ಶಕ್ತವಾಗುವುದಿಲ್ಲ. ನಿಮ್ಮ ಮನಸ್ಸೆಂದರೆ ಅಂತಹ ಪ್ರವಾಹ!

**ಜಂಗ:**—ನೀವೇ ಹೇಳಿ! ನನ್ನ ಉಮದಾಬಾಗಿನಲ್ಲಿ ನಿನ್ನೆ ರಾತ್ರೆ ಕಳ್ಳರು ದರೋಡೆ ಮಾಡಲು ಪ್ರವೇಶಿಸಿ ಕೊನೆಗೆ ಅವರಲ್ಲೊಬ್ಬನು ಇನ್ನೊಬ್ಬನನ್ನು ಪಿಸ್ತೂಲಿನಿಂದ ಕೊಂದುಬಿಟ್ಟನಂತೆ!

**ಗಿರಿಧರ:**—ಅದು ನಿಜವೇ? ನಾನು ದಾರಿಯಲ್ಲಿ ಅದೇನೊ ಸಮಾಚಾರ ಕೊಂಚ ಕೇಳಿದೆ.

**ರಘು:**—ನೀವು ಆಗ ಆ ಬಂಗಲೆಯಲ್ಲಿದ್ದಿಲ್ಲವೇ?

**ಜಂಗ:**—ಇಲ್ಲ. ನನ್ನ ಪರಮಾಪ್ತರಾದ ಪರಶುರಾಮ ದೀಕ್ಷಿತರು ನನ್ನ ಹಳೇ ಗ್ರಂಥಗಳನ್ನು ಕೆಲವನ್ನು ನೋಡುವ ಉದ್ದೇಶದಿಂದ ಅಲ್ಲಿ ಇಳಿದಿದ್ದರು. ನಾನು ನಮ್ಮ ಆಯೇಷೆಯೊಡನೆ ಒಂದು ನಾಟಕ

ಕ್ಕಾಗಿ ಹೋಗಿದ್ದೆ. ಅನಂತರ ಉಮದಾಬಾಗಿಗೆ ಹೋಗದೆ ಇಲ್ಲಿಯೇ ಉಳಿದೆನು.

**ರಘು**:—ಕಳ್ಳರಿಂದ ತಮ್ಮ ಪ್ರಾಣಕ್ಕೇನೂ ಅಪಾಯಬಾರದಿದ್ದುದೂ ಶುಭವಾರ್ತೆ.

**ಗಿರಿಧರ**:—ಪೋಲಿಸಿನವರಿಗೆ ಈ ಸಮಾಚಾರ ತಿಳಿದಿದೆಯೇ?

**ಜಂಗ**:—ಓಹೊ! ಪೋಲೀಸ ಸುಪರಿಂಟೆಂಡೆಂಟ ಮುರಾರಿ ರಾಯರ ಸ್ವಾರಿಯು ಸ್ವತಃ ಅಲ್ಲಿಗೆ ಹೋಗಿ ಬಂದು ಮಹಾಜರನ್ನು ನಡಿಸಿ, ಶವವನ್ನು ಆಸ್ಪತ್ರೆಗೆ ಸಾಗಿಸಿಕೊಂಡು ಹೋಗಿರುವರು. ಇನ್ನೊಬ್ಬ ಕಳ್ಳನು ಪರಾರಿಯಂತೆ. ಇದನ್ನೆಲ್ಲ ಪರಶುರಾಮ ದೀಕ್ಷಿತರು ನನಗೆ ತಿಳಿಸಿ ಮುಂಬಯಿಗೆ ಹೊರಟು ಹೋದರು.

**ಗಿರಿಧರ**:—ಅಂತೂ ಇನ್ನೊಬ್ಬನು ಸಾಧನೆಮಾಡಿ ಅಲ್ಲಿಗೆ ಕೆಲವು ಸಮಯದಲ್ಲಿಯೇ ಬರಬಹುದಾದುದರಿಂದ ನೀವು ಆ ಬಂಗಲೆಯಲ್ಲಿ ಇನ್ನೂ ಇರುವುದು ಉಚಿತವಲ್ಲ.

**ಜಂಗ**:—ಈಗ ಆ ಅಪಾಯಕ್ಕಿಂತಲೂ ಇನ್ನೊಂದು ನನ್ನನ್ನು ಬಲವಾಗಿ ಪೀಡಿಸುತ್ತಿದೆ. ಈ ಸಮಾಚಾರವು ಹಬ್ಬಿದರೆ ನನ್ನ ಆರೋಗ್ಯ ಮತ್ತು ಉಮದಾಬಾಗದ ದರೋಡೆಯನ್ನು ಕುರಿತು ವಿಚಾರಿಸಿ ನನಗೆ ಬರುವ ತಂತಿ ವರ್ತಮಾನಗಳು, ನನ್ನೊಡನೆ ಆ ಕುರಿತು ಇಲ್ಲಿಗೆ ಸ್ವತಃ ಬಂದು ಮಾತನಾಡಿಸುವವರ ಪ್ರಶ್ನೆಗಳು, ಇವುಗಳ ಬಾಧೆಯನ್ನು ನಾನು ಈಗ ತಪ್ಪಿಸಿಕೊಳ್ಳಬೇಕಾಗಿದೆ. ಆದ್ದರಿಂದ ನಾನು ಮಹಾಬಲೇಶ್ವರದಲ್ಲಿರುವ ನನ್ನ ಬಂಗಲೆಯಲ್ಲಿ ಕೆಲವು ದಿನವಿರಬೇಕೆಂದು ನಿಶ್ಚಯಿಸಿ ಈಗಲೇ ಹೊರಡಲಿರುವೆನು.

**ಗಿರಿಧರ**:—ಹಾಗಿದ್ದರೆ ಈ ರಘುನಾಥನನ್ನು ನಿಮ್ಮೊಡನೆ ಕರೆದುಕೊಂಡು ಹೋಗಿ. ಇಂಥ ಯುವಕರು ನಿಮ್ಮೊಡನೆ ಇದ್ದರೆ ಹೊತ್ತು ಹೋಗುವುದಕ್ಕೆ ಕಷ್ಟವಾಗಲಾರದು.

**ಜಂಗ**:—ಚೆನ್ನಾಗಿ ಹೇಳಿದಿರಿ. ರಘುನಾಥಪಂತ! ನನ್ನೊಡನೆ ಬರಲು ಇಷ್ಟವಿದ್ದರೆ ಈಗಲೆ ಹೊರಡಬೇಕು. ನೀವು ಮಹಾಬಲೇಶ್ವರಕ್ಕೆ ನನ್ನೊಡನೆ ಹೊರಟಿರೆಂದು ಗಿರಿಧರಲಾಲನು ನಿಮ್ಮಲ್ಲಿ ತಿಳಿಸಲಿ.

ಬಂಡಿಯು ಬಾಗಿಲಲ್ಲಿ ಕಾಯುತ್ತಿದೆ. ಇನ್ನು ಅರ್ಧ ತಾಸಿನಲ್ಲಿ ಹೊರಡುವ ರೈಲು ಬಂಡಿಯಲ್ಲಿ ನಾನು ಪ್ರಯಾಣ ಬೆಳಿಸಬೇಕಾಗುವುದು.

ಗಿರಿಧರಲಾಲನು ಇಬ್ಬರಿಗೂ ಪ್ರತ್ಯಪ್ರತ್ಯೇಕವಾಗಿ ಕಣ್ಣೊತ್ತಿದುದರಿಂದ ರಘುನಾಥಪಂತನು ಜಂಗ ಬಹದ್ದೂರನೊಡನೆ ಮಹಾಬಲೇಶ್ವರಕ್ಕೆ ಹೊರಟನು.

---

## ಇಪ್ಪತ್ತನೆ ಅಧ್ಯಾಯ

## **ಝುನೀನಾಬೀಯ ದೃಢಪತ್ರಿಕೆ**

ಬೆಳಗ್ಗೆ 10 ತಾಸಿನ ಸಮಯ. ಪೂನಾ ಡಿವಿಜನಿನ ಕಮ್ಮಿಶನರ್ ಫೆಯರಪ್ಲೆ ಸಾಹೇಬರು ತಮ್ಮ ಬಂಗ್ಲೆಯ ಆಫೀಸು ಕೋಣೆಯಲ್ಲಿ 'ಚೋಟಾಹಾಜರಿ'ಯನ್ನು ಮುಗಿಸಿ ಕುಳಿತಿದ್ದರು. ಸಮೀಪದಲ್ಲೆ ದಫೆದಾರನು ಅಂದಿನ ಟಪ್ಪಾಲನ್ನು ಒಡೆದು ಆಫೀಸಿನ ಮುದ್ರೆಯೊತ್ತಿ ಕಮ್ಮಿಶನರ ಮೇಜಿನ ಮೇಲೆ ಇಡುತಿದ್ದನು. ಅದರಲ್ಲಿ ಒಂದು ಕಾಗದವನ್ನು ಓದಿ 'ಸಿಪಾಯಿ'! ಎಂದು ಸಾಹೇಬರು ಗಟ್ಟಿಯಾಗಿ ಕೂಗಿದರು. ಒಬ್ಬ ಪೇದೆ ಹೊರಜಗಲಿಯಿಂದ ಓಡಿ ಬಂದು ಸಲಾಂ ಮಾಡಿ ನಿಂತನು. 'ರಾವಸಾಹೇಬಕೂ ಬುಲಾವ್' ಎಂದು ಸಾಹೇಬರು ಅಪ್ಪಣೆಯನ್ನಿತ್ತರು. 'ಜೀ! ಹುಕುಂ!' ಎಂದು ಆ ಸಿಪಾಯಿಯು ಡೆಪ್ಯುಟಿ ಕಮ್ಮಿಶನರ ದ್ವಾರಕಾನಾಥನ ಬಂಗಲೆಗೆ ಓಡಿದನು.

ಕಮ್ಮಿಶನರು ಆ ಕಾಗದವನ್ನು ಇನ್ನೊಮ್ಮೆ ಓದಿದರು. ಅದೊಂದು ಮನವಿಯಾಗಿತ್ತು. ಅದರ ಒಕ್ಕಣೆ ಈ ಪರಿಯಾಗಿತ್ತು:—

"ಮೆಹರ್ಬಾನ ಪೂನಾ ಡಿವಿಜನ್ ಕಮ್ಮಿಶನರ ಸಾಹೇಬರವರ ಜನಾಬಿಗೆ— ಈಗ 20 ವರ್ಷಗಳ ಹಿಂದೆ ಸಾಂಗಲಿಯ ಜಮೀನುದಾರನನ್ನು ಕೊಂದು ಅವನ ಮನೆಯಲ್ಲಿ ದರೋಡೆ ನಡಿಸಿದ ವಿಷಯದಲ್ಲಿ ಏನೋ ವಿಶೇಷ ಸಂಗತಿಗಳನ್ನು ಬಯಲಿಗೆ ತರುವಂತೆ ಎರಡು ಬಾತಮಿಗಳು ಎರಡು ಪತ್ರಿಕೆಗಳಲ್ಲಿ ಬಂದಿರುವುದನ್ನು ನಾನು ಓದಿದೆನು. ಅವುಗಳಲ್ಲಿ 'ರಾಷ್ಟ್ರಮತ'ದಲ್ಲಿ ಸಂಬಂಧಪಟ್ಟವರ ಹೆಸರುಗಳನ್ನು ಹೇಳಲಿಲ್ಲ. ಆದರೆ 'ಲೋಕೋದ್ಧಾರ' ಎಂಬ ಪತ್ರಿಕೆಯಲ್ಲಿ 'ಈ ವಿಷಯ

ದಲ್ಲಿ ಈಗ ಪೂನೆಯ ಡೆಪ್ಯುಟಿ ಕಮ್ಮಿಶನರಾಗಿರುವ ದ್ವಾರಕಾನಾಥರೊಡನೆ ವಿಚಾರಿಸಿದರೆ ಗೊತ್ತಾಗಬಹುದು' ಎಂದು ಇದೆ. ಇದಕ್ಕೆ ಅಗತ್ಯವಿರುವ ರುಜುವಾತುಗಳನ್ನು ತಮ್ಮ ಮುಂದೆ ಹಾಜರುಪಡಿಸಲಿಕ್ಕೆ ನಾನು ಸಿದ್ಧವಿದ್ದೇನೆ. ಈ ಕುರಿತು ತಮ್ಮ ಸಮಯವನ್ನು ಹಾರೈಸುತ್ತ ಇದ್ದೇನೆ!" ಕೊನೆಯಲ್ಲಿ ಉರ್ದು ಬರಹದಲ್ಲಿ ಸಹಿ ಇತ್ತು.

ಅರ್ಧ ತಾಸಿನೊಳಗೆ ಡೆಪ್ಯುಟಿ ಕಮ್ಮಿಶನರ ದ್ವಾರಕಾನಾಥಪಂತನು ಕಮ್ಮಿಶನರ ಸಾಹೇಬರ ಬಂಗಲೆಗೆ ಬಂದನು. ಆಗ ಕಮ್ಮಿಶನರ ಸಾಹೇಬರು ಆ ಪತ್ರಿಕೆಗಳ ಉತಾರುಗಳನ್ನೂ ಈ ಮನವಿಯನ್ನೂ ದ್ವಾರಕನಾಥನ ಕೈಯಲ್ಲಿ ಕೊಟ್ಟು "ಇದರ ಅಭಿಪ್ರಾಯವೇನು?" ಎಂದು ಕೇಳಿದರು. ದ್ವಾರಕಾನಾಥನು ಅವನ್ನು ಓದಿ ನೋಡಿ ಮೆಲ್ಲಗೆ ತಲೆ ಎತ್ತಿ--"ಇದು ಜನಮೇಜಯನ ಕಾಲದ ಕಥೆ. ಈ ಮೊಕದ್ದಮೆಯನ್ನು ಸುಪರಿಂಟೆಂಡೆಂಟ ಮುರಾರಿರಾಯರೇ ಪತ್ತೆ ಹಚ್ಚಿ ಅಪರಾಧಿಯನ್ನು ಶಿಕ್ಷೆಗೆ ಗುರಿಪಡಿಸಿದರೆಂದು ಕೇಳಿದ್ದೇನೆ.

**ಕಮ್ಮಿ:**—ಆದರೆ ಈ ವಿಷಯದಲ್ಲಿ ನಿಮ್ಮೊಡನೆ ವಿಚಾರಿಸಿದರೆ ಸರ್ವವೂ ಗೊತ್ತಾಗುವುದು ಎಂತಲೂ ಇದೆ. ಅದರ ಅರ್ಥವೇನು?

**ದ್ವಾರಕಾನಾಥ:**—ಅದು ಸ್ಪಷ್ಟವಾಗಿದೆ. ನನಗೆ ಒಂದು ಬಿರುದು ಸಿಕ್ಕಿದುದು ಹಲವರಿಗೆ ಅಸಹನೀಯವಾಗಿದೆ. ಆದುದರಿಂದ ನನ್ನ ಮೇಲೆ ಏನಾದರೂ ಲಾಂಛನವನ್ನು ಹಚ್ಚಬೇಕೆಂದು ಈ ಪುರಾಣ ಕಥೆಯ ಕಂಥೆಯನ್ನು ಈಗ ಬಿಚ್ಚಿದ್ದಾರೆ. ಆ ಕಾಲದಲ್ಲಿ ದ್ವಾರಕಾನಾಥನು ಸಾಂಗಲಿಯಲ್ಲಿ ಸರಕಾರಿ ಉದ್ಯೋಗದಲ್ಲಿದ್ದನೆಂದು ಅದರಲ್ಲಿ ಬರೆದಿಲ್ಲ.

ಅಷ್ಟರಲ್ಲಿ ದಫೆದಾರನು ಒಳಗೆ ಬಂದು "ಹೊರಗೆ ಫರ್ದಾಸ್ತ್ರೀಯೊಬ್ಬಳು ಸಮಯ ಕಾಯುತ್ತಿರುವರು" ಎಂದು ಹೇಳಿದನು. ಅವಳನ್ನು ಒಳಗೆ ಬರಹೇಳುವಷ್ಟರಲ್ಲಿ ದ್ವಾರಕಾನಾಥನು ಅಲ್ಲಿಂದ ಎದ್ದನು. ಆಗ ಕಮ್ಮಿಶನರ್ ಸಾಹೇಬರು "ಹೋಗಬೇಡಿರಿ. ನನ್ನ ಮಾತುಗಳು ಮುಗಿಯಲಿಲ್ಲ. ಸ್ತ್ರೀ, ಅದರಲ್ಲಿಯೂ ಘೋಷಾಸ್ತ್ರೀ ಬಂದಿರುವುದರಿಂದ ಅವಳ ಅಹವಾಲೆಗಳಿಗೆ ಪ್ರಥಮಸ್ಥಾನ ಕೊಡಬೇಕಾಯಿತು. ಒಂದೆರಡು

ಮಾತುಗಳಲ್ಲಿ ಅವಳು ಹೇಳುವುದೇನೆಂದು ವಿಚಾರಿಸಿ, ಆ ಮೇಲೆ ನಿಮ್ಮೊಡನೆ ಮಾತನಾಡಲಿರುವೆನು'' ಎಂದು ಆತನನ್ನು ಅಲ್ಲಿಯೇ ಕುಳ್ಳಿರಿಸಿದರು. ಆ ಸ್ತ್ರೀಯನ್ನು ಒಳಕ್ಕೆ ಕರೆಯಿಸಿ ಅವಳು ಕೂತುಕೊಳ್ಳುವುದಕ್ಕೆ ಒಂದು ಕುರ್ಚಿಯನ್ನು ತಂದಿರಿಸಲು ದಫೆದಾರನಿಗೆ ಅಪ್ಪಣೆ ಮಾಡಿದರು.

ಒಳಗೆ ಬಂದವಳು ತನ್ನ ಅವಕುಂಠನವನ್ನು ಎತ್ತದೆ ಸಲಾಂ ಮಾಡಿ ತನ್ನ ಮನವಿಯ ಕಾಗದವನ್ನು ಕಮ್ಮಿಶನರ ಸಾಹೇಬರ ಕೈಗೆ ಇತ್ತಳು. ಕಮ್ಮಿಶನರ್ ಸಾಹೇಬರೂ ಉರ್ದು ಭಾಷೆಯಲ್ಲಿ ಬರೆದ ಈ ಮನವಿಯನ್ನು ಓದಿ, ತನ್ನ ಬಳಿಯಲ್ಲಿದ್ದ ಇನ್ನೊಂದು ಅರ್ಜಿಯ ಸಹಿಯನ್ನು ನೋಡಿ ''ಟಪ್ಪಾಲು ದ್ವಾರಾ ಕಳುಹಿಸಿದ ಈ ಮನವಿಯೂ ನಿಮ್ಮದೆ?'' ಎಂದು ಕೇಳಿದರು. ಸ್ತ್ರೀಯು 'ಹೌದು' ಎಂದು ಗದ್ಗದ ಸ್ವರದಿಂದ ಹೇಳಿದಳು.

ಆಗ ಕಮ್ಮಿಶನರ ಸಾಹೇಬರು ''ಈ ಎರಡನೇ ಅರ್ಜಿಯಲ್ಲಿ ನೀವು ಹೆಚ್ಚಿಗೆ ವಿಷಯಗಳನ್ನು ಸೂಚಿಸಿರುವಿರಿ. ಇದಕ್ಕೆಲ್ಲ ನಿಮಗೆ ರುಜುವಾತುಗಳುಂಟೇ? ಇಲ್ಲವಾದರೆ ಸುಳ್ಳು ಆರೋಪಗಳನ್ನು ತಂದ ತಪ್ಪಿಗೆ ನೀವು ಗುರಿಯಾಗುವಿರಿ, ಬಲ್ಲಿರಾ!'' ಎಂದು ನಿಧಾನವಾಗಿ ಕೇಳಿದರು.

ಆಗ ಸ್ತ್ರೀಯು: ಹೌದು ಸಾಹೇಬರೆ! ಅದನ್ನು ಚೆನ್ನಾಗಿ ಬಲ್ಲೆ. ಅದನ್ನು ಕುರಿತು ಮೊದಲು ವರ್ತಮಾನಪತ್ರಿಕೆಗಳಲ್ಲಿ ಅನಾಮಿಕವಾಗಿ ಬಂದ ಎರಡು ಬಾತಮಿಗಳನ್ನು ನಾನು ಓದಿದೆನು. ''ಆಗ ನನಗೆ ತಿಳಿದ ವಿಷಯಗಳನ್ನು ಸರಕಾರಕ್ಕೆ ನಿವೇದಿಸುವುದು ಹೇಗೆ?'' ಎಂದು ವಿಚಾರದಲ್ಲಿ ಬಿದ್ದು, ಒಂದು ಮನವಿಯನ್ನು ಟಪ್ಪಾಲುದ್ವಾರಾ ತಮ್ಮ ಬಳಿಗೆ ರವಾನಿಸಿದೆನು. ಆದರೆ ನನ್ನ ವಿಳಾಸ ಬರೆಯಲು ಮರೆತು ಹೋಗಿದ್ದುದರಿಂದ, ಆ ಮನವಿಯ ವಿಚಾರವಾಗದು ಎಂಬ ಸಂದೇಹದಿಂದ ನಾನೇ ಸ್ವತಃ ಇಲ್ಲಿಗೆ ಬರಬೇಕೆಂದು ನಿನ್ನೆ ರಾತ್ರೆ ಯೋಚಿಸಿದೆನು. ಆದರೆ ನನ್ನ ರಕ್ಷಕರು ಫಕ್ಕನೆ ದೂರವಿರುವ ಪರಊರಿಗೆ ಹೊರಟ ನಿಮಿತ್ತ ಅವರೊಡನೆ ಈ ಕುರಿತು ಆಲೋಚಿಸಲಿಕ್ಕೆ ನನಗೆ ಎಡೆ ಸಿಗ

ಲಿಲ್ಲ. ಹೀಗಾಗಿ ನಾನೇ ಇಲ್ಲಿಗೆ ವಿಕ್ಟೋರಿಯದಲ್ಲಿ ಬಂದೆನು. ಒಳಗೆ ಡೆಪ್ಯುಟಿ ಕಮ್ಮಿಶನರ ಸವಾರಿ ಇರುವುದಾಗಿ ತಿಳಿದುದರಿಂದ 'ರೊಟ್ಟಿ ಮುರಿದು ತುಪ್ಪದಲ್ಲಿ ಬಿದ್ದಂತಾಯಿತು' ಎಂದು ಕೂಡಲೇ ನನ್ನ ಆಗ ಮನವನ್ನು ಒಳಕ್ಕೆ ತಿಳಿಸಿದೆನು.

ಡೆಪ್ಯುಟಿ ಕಮ್ಮಿಶನರಿಗೆ ಈ ಮಾತನ್ನು ಕೇಳಿದೊಡನೆ ಒಮ್ಮೆ ಜುಮ್ಮೆಂದಿತು. ಆದರೆ ಕೂಡಲೆ ಧೈರ್ಯ ತಳೆದು ಅಪರಿಚಿತಳಾದ ಇವಳು ತನ್ನನ್ನೆ ಉದ್ದೇಶಿಸಿ ದೂರು ತರಲು ಕುಹಕಿಗಳ ಪ್ರೇರೇಪಣೆಯಿಂದಲೇ ಬಂದಿರಬಹುದೆಂದು ಕಮ್ಮಿಶನರ ಸಾಹೇಬರೊಡನೆ ಇಂಗ್ಲಿಷ್ ಭಾಷೆಯಲ್ಲಿ ನುಡಿದರು. ಆಗಂತುಕಳಿಗೆ ಇಂಗ್ಲಿಷ್ ಭಾಷೆಯ ಪರಿಚಯವಿಲ್ಲೆಂದು ಅವರು ನೆನಸಿದರು. ಆದರೆ ಆ ಸ್ತ್ರೀಯು ಈ ಮಾತುಗಳನ್ನು ಕೇಳಿ,—

"ನನ್ನ ಪೂರ್ವ ವೃತ್ತಾಂತವನ್ನು ಆದ್ಯಂತವಾಗಿ ಕೇಳಿ ನನ್ನ ರುಜುವಾತುಗಳನ್ನು ಪರೀಕ್ಷಿಸಿದ ಅನಂತರವೇ ತಮಗೆ ನನ್ನ ಮಾತುಗಳ ಸತ್ಯಾಸತ್ಯ ನಿರ್ಣಯಮಾಡಲು ಬರುವುದು" ಎಂದು ಹೇಳಿ ತನ್ನ ಒಳಕಿಸೆಯಲ್ಲಿರುವ ಕಾಗದಗಳಿಂದ ಒಂದು ಕಾಗದವನ್ನು ಹೊರತೆಗೆದು ಕಮ್ಮಿಶನರ ಸಾಹೇಬರ ಕೈಗೆ ಇತ್ತಳು.

ಕಮ್ಮಿಶನರ ಸಾಹೇಬರು ಅದನ್ನು ಗಟ್ಟಿಯಾಗಿ ಓದತೊಡಗಿದರು:—

"ನಾನು ಸಾಂಗಲಿಯ ಜಮೀನುದಾರ ವಿಶ್ವನಾಥ ಪಂತರ ಮಗಳ ದಾದಿಯಾದ ಝುನೀನಾಬಿ. ಜಮೀನುದಾರರ ಒಬ್ಬಳೇ ಮಗಳಾದ ಅನಸೂಯಾಬಾಯಿ—ಉರ್ಫ—ಆಯೇಷೆಯು ನನ್ನ ಆರೈಕೆಯಲ್ಲಿದ್ದಳು. ಒಂದು ದಿನ ನಾನೊಬ್ಬಳೇ ವಿಶ್ವನಾಥಪಂತರ ಮನೆಯ ಸುತ್ತಲಿರುವ ದೊಡ್ಡ ಶೃಂಗಾರವನದಲ್ಲಿ ಸುಳಿದಾಡುತಿದ್ದೆನು. ಆಗ ಮುಸ್ಸಂಜೆಯು ಸಮಯ. ವನದ ಸುತ್ತಲಿರುವ ಕಲ್ಲಿನ ಆವರಣದ ಹೊರಭಾಗದಲ್ಲಿ ದೊಡ್ಡ ಮರಗಳ ಗುಂಪು ಇತ್ತು. ಅದರ ಬುಡದಲ್ಲಿ ಯಾರೊ ಕುಳಿತು ಮಾತನಾಡುವ ಸ್ವರ ಕೇಳಿಸಿತು. ಅಷ್ಟು ಹೊತ್ತಿಗೆ ಅಲ್ಲಿ ಕುಳಿತಿರುವವರು ಯಾರು, ನೋಡೋಣವೆಂದು ನಾನು ಸದ್ದು

ಮಾಡದೆ ಗೋಡೆಯ ಒಳಭಾಗದಲ್ಲಿ ಒಂದು ಮರದ ಅಡ್ಡವಾಗಿ ಯಾರಿಗೂ ಕಾಣಿಸಿಕೊಳ್ಳದಂತೆ ನಿಂತೆನು. ನಮ್ಮ ಧನಿಗಳ ಮನೆಯನ್ನು ಸುಲಿಗೆ ಮಾಡಬೇಕೆಂದೂ ಬೆಂಕಿ ಹಚ್ಚಬೇಕೆಂದೂ ಆತಂಕಿಸಿದವರನ್ನು ಕೊಂದೇ ಬರಬೇಕೆಂದೂ ಮುಂತಾಗಿ ಮಾತುಕಥೆ ನಡೆಯುತ್ತಿತ್ತು. ಅವರಲ್ಲಿ ಒಬ್ಬನ ಸ್ವರವನ್ನು ಮಾತ್ರ ನಾನು ಗುರುತಿಸಿದೆನು. ಆತನು ಜಮೀನುದಾರ ಕಚೇರಿಯ ಗುಮಾಸ್ತನು—ಆತನ ಹೆಸರು ಯದುಕುಲನಾಥ.''

ಇಷ್ಟನ್ನು ಕೇಳುತ್ತಲೆ ದ್ವಾರಕಾನಾಥನು ಆಯಾಸದಿಂದ ತಲೆ ತಗ್ಗಿಸಿದಂತೆ ನಟಿಸಿ, ಕನ್ನಡಕದ ಅಂಚಿನಿಂದ ಕಮ್ಮಿಶನರ ಸಾಹೇಬರನ್ನು ಇಣಿಕಿನೋಡುತ್ತ, ಒಮ್ಮೆ ಕಿಸೆ ಚೌಕದಿಂದ ಮೋರೆಯನ್ನು ಒರಸಿದನು. ಸ್ತ್ರೀಯು ಆತನನ್ನೆ ದಿಟ್ಟಿಸಿ ನೋಡುತಿದ್ದಳೆಂಬು ಅವನಿಗೆ ಕಾಣಲಿಲ್ಲ. ಕಮ್ಮಿಶನರು ಮುಂದೆ ಓದಿದರು:—

''ಅಷ್ಟರಲ್ಲಿ ಕತ್ತಲೆ ಕವಿದಿತ್ತು. ಯದುಕುಲನಾಥನ ಒಳಸಂಚನ್ನು ನಮ್ಮ ಧನಿಗೆ ತಿಳಿಸಬೇಕೆಂದು ನಾನು ಮನೆಯ ಕಡೆಗೆ ಓಡತೊಡಗಿದೆನು. ಒಂದು ಮರದ ಬೇರು ಕಾಲಿಗೆ ಎಡವಿ ಬಿದ್ದುಬಿಟ್ಟೆನು. ಆ ಸದ್ದನ್ನು ಕೇಳಿದ ಯದುಕುಲನಾಥನು ತನ್ನ ಜತೆಯವರನ್ನು ದೂರ ಕಳುಹಿಸಿ ಅಲ್ಲೆ ಕುಸಿದು ಬಿದ್ದ ಗೋಡೆಯ ಖಂಡಿಯಿಂದ ಒಳಗೆ ಹಾಯ್ದು ನಾನಿದ್ದಲ್ಲಿಗೆ ಓಡಿ ಬಂದನು. ನನ್ನನ್ನು ಕಂಡು ''ಝುನೀನಾ! ನೀನು ನನ್ನ ಪಾಲಿನ ಶನಿ. ನನ್ನ ದಾರಿಗೆ ಅಡ್ಡ ಬರುವೆಯಾ? ನಿನ್ನನ್ನು ಇಲ್ಲಿಯೇ ಕೊರಳು ಹಿಸುಕಿ ಕೊಲ್ಲುವೆನು'' ಎಂದು ಹಾವಿನಂತೆ ಬುಸುಗುಟ್ಟಿದನು. ಈ ದುಷ್ಟನು ನನ್ನನ್ನು ಕೆಡಿಸಬೇಕೆಂದು ಹಲವು ಸಲ ಯತ್ನಿಸಿದ್ದನು. ಆಗಲಿಲ್ಲ. ಈಗ ಈತನನ್ನು ಕೆರಳಿಸುವ ಬದಲಾಗಿ ಉಪಾಯಾಂತರದಿಂದ ಆಶಾಭಂಗ ಮಾಡಬೇಕೆಂದು ನೆನಸಿ ನಾನು 'ಯದುಕುಲನಾಥರೆ! ನಿಮ್ಮನ್ನೇ ಕಂಡು ಇಲ್ಲಿ ನಿಂತಿದ್ದೆನು. ಕತ್ತಲಾದುದರಿಂದ ಗಾಬರಿಯಾಗಿ ಹಿಂತಿರುಗುತಿದ್ದೆನು' ಎಂದು ವಿನಯದಿಂದ ಹೇಳಿದೆನು. ಅವನು ಆ ಮಾತಿನ ಅರ್ಥವನ್ನು ವಿಪರೀತವಾಗಿ ಎಣಿಸಿ, 'ಹಾಗಿದ್ದರೆ ನಮ್ಮಿಬ್ಬರ ಪುಣ್ಯವು ಫಲಿತವಾಗುವ ಸಮಯು ಬಂದಿದೆ

ಎಂದು ತಿಳಿ. ಈಗ ನನಗೆ ಕೆಲಸವಿದೆ. ಇನ್ನೊಮ್ಮೆ ಕಾಣುವೆನು' ಎಂದು ನನ್ನ ಕೆನ್ನೆಯನ್ನು ಬಲಾತ್ಕಾರದಿಂದ ಮುದ್ದಿಟ್ಟು ಓಡಿದನು. ಆ ಮುತ್ತು ನನ್ನ ಕೆನ್ನೆಯನ್ನು ವಿಷದೋಪಾದಿ ಸುಡುತ್ತಿತ್ತು. ನಾನು ನೆಟ್ಟಗೆ ನಮ್ಮ ಯಜಮಾನಿಯ ಕೋಣೆಗೆ ಹೋದೆನು. ಅಲ್ಲಿ ನಮ್ಮ ಧನಿಯವರು "ನೀನು ಮಗುವಿನೊಂದಿಗೆ ದಾದಿಯ ಜತೆಯಲ್ಲಿ ಈಗಲೆ ಹೊರಡ ಬೇಕಾಗುವುದು" ಎಂದು ಹೇಳಿ ವೇಗದಿಂದ ಹೊರಗೆ ಹೋದರು. ಆ ಕೊನೆಯ ವಾಕ್ಯವು ನನ್ನ ಕಿವಿಗೆ ಬಿತ್ತು. ಅಷ್ಟರಲ್ಲಿ ಯದುಕುಲ ನಾಥನೇ ನಮ್ಮನ್ನು ಕರೆದುಕೊಂಡು ಹೋಗಲು ಒಂದು ಕಂದಿಲನ್ನು ಹಿಡಿದು ಬಂದುದರಿಂದ ನನ್ನ ಯಜಮಾನಿಯೊಡನೆ ಮಾತನಾಡುವ ಸಂದರ್ಭವು ನನಗೆ ದೊರೆಯಲಿಲ್ಲ. ನಾವು ವಿಹಾರಗೃಹಕ್ಕೆ ಆಗ ಹೊರಟು ಹೋದೆವು. ಅದೇ ರಾತ್ರೆಯಲ್ಲಿ ನಮ್ಮ ಯಜಮಾನರ ಜೀವ ಮತ್ತು ಸಂಪತ್ತಿನ ವಿನಾಶವೂ ಆಗಿತ್ತು. ಮರುದಿನ ರಾತ್ರೆ ಈ ವರ್ತಮಾನವನ್ನು ತಿಳಿಸುವುದಕ್ಕೆ ಯದುಕುಲನಾಥನೇ ನಾವಿದ್ದ ವಿಹಾರಗೃಹಕ್ಕೆ ಬಂದನು. ಆ ವರ್ತಮಾನ ಕೇಳಿದೊಡನೆ ನಮ್ಮ ಯಜಮಾನಿಯು ಧೊಪ್ಪನೆ ನೆಲಕ್ಕೆ ಬಿದ್ದು ಬಿಟ್ಟರು. ಬಿದ್ದವರು ಮತ್ತೆ ಏಳಲಿಲ್ಲ. ಆ ಕಾಲದಲ್ಲಿ ಈ ದುರಾತ್ಮನಾದ ಯದುಕುಲನಾಥನು ನನ್ನನ್ನು ಪ್ರಣಯದೃಷ್ಟಿಯಿಂದ ನೋಡಿ "ಝುನೀನಾ! ನಾನು ನಿನ್ನೆ ಹೇಳಿದಂತೆ ನಿನ್ನ ಪುಣ್ಯವು ಪಕ್ವವಾಯಿತು. ಈಗ ಈ ಕೂಸಿನೊಂದಿಗೆ ನನ್ನೊಂದಿಗೆ ನನ್ನ ಜತೆಯಲ್ಲಿ ಬರುವೆಯಲ್ಲ!" ಎಂದು ನಸುನಗುತ್ತ ಹೇಳಿ ದನು. ಅದನ್ನು ಕೇಳಿದೊಡನೆ ನನ್ನ ಮೈಮೇಲೆ ಉರಿಯುವ ಕೆಂಡ ವನ್ನು ಚೆಲ್ಲಿದಂತಾಯಿತು. ನಾನು ಕಣ್ಣುಗಳನ್ನು ಕೆರಳಿಸಿ "ಛಿ! ದುಷ್ಟಾ! ಘಾತುಕಾ! ಅನ್ನ ಕೊಟ್ಟು ಸಾಕಿದ ಸ್ವಾಮಿಯನ್ನು ಸೂರೆ ಗೊಂಡ ಪಾಪಿಯಾದ ನಿನ್ನೊಡನೆ ಜೀವಿಸುವೆನೆಂದು ಬಗೆದೆಯಾ? ಅತ್ತ ತೊಲಗು!" ಎಂದು ಗರ್ಜಿಸಿದೆನು. ಅಷ್ಟರಲ್ಲಿ ಅಲ್ಲಿ ನಿದ್ರಿಸುತಿದ್ದ ಅನ ಸೂಯೆಯು ಎಚ್ಚತ್ತಳು. ಯದುಕುಲನಾಥನು ಆಗ ನನ್ನ ಕೈಯನ್ನು ಹಿಡಿಯಲಿಕ್ಕೆ ಬಂದನು. ನಾನು ಆತನಿಂದ ತಪ್ಪಿಸಿಕೊಂಡು ಅಲ್ಲಿ ಬಿದ್ದಿರುವ ಒಂದು ಕಬ್ಬಿಣದ ಸಲಾಕಿಯನ್ನು ಆತನ ತಲೆಗೆ ಬಲವಾಗಿ

ಎಸೆದು ಬಿಟ್ಟೆನು. ಆ ಪೆಟ್ಟಿನಿಂದ ಗಾಯವಾಗಿ ಯದುಕುಲನಾಥನು ಸ್ಮೃತಿ ತಪ್ಪಿ ಬಿದ್ದನು. ಆ ಮೇಲೆ ಆ ಮಗುವನ್ನು ನಾನು ಎತ್ತಿಕೊಂಡು-ಅಯೇಷೆ—ಎಂದು ಹೆಸರಿಟ್ಟು ನನ್ನ ತೌರಮನೆಗೆ ಬಂದೆನು. ಅಯೇಷೆಯು ಮಡಿದುಹೋದ ನನ್ನ ಅಕ್ಕನ ಮಗಳೆಂದು ನಾನು ನನ್ನ ತಾಯಿಯನ್ನು ನಂಬಿಸಿದೆನು. ಹೀಗೆ ಕೆಲವು ಕಾಲ ದಾಟಿತು. ಈಗ ನನಗೆ ಮರಣಕಾಲವು ಪ್ರಾಪ್ತವಾಗಿದೆ. ಇವಳ ಆಸ್ತಿಪಾಸ್ತಿ ಏನಾದರೂ ಉಳಿದಿದೆಯೇ ಎಂದು ನನಗೆ ಗೊತ್ತಿಲ್ಲ. ನನ್ನ ಚಿಕಿತ್ಸೆಯನ್ನು ಮಾಡುವ ಹಕೀಮ ಮಲಿಕ ಜಾಫರರು ನನ್ನ ವಿಶ್ವಾಸಕ್ಕೆ ಪಾತ್ರರಾಗಿದ್ದುದರಿಂದ ಅವರೊಡನೆ ಈ ಅನಸೂಯೆ ಉರ್ಫ ಅಯೇಷೆಯನ್ನು ಯೋಗ್ಯ ಕುಟುಂಬ ದಲ್ಲಿ ಆರೈಕೆಗೆ ಒಪ್ಪಿಸುವಂತೆ ಮಾತುಪಡೆದಿರುವೆನು. ಈ ಕೆಳಗೆ ಸಹಿ ಹಾಕಿದ ನಮ್ಮೂರ ದೇಶಮುಖಿ ಮತ್ತು ಇತರ ಸದ್ಗೃಹಸ್ಥರ ಸಮ್ಮುಖದಲ್ಲಿ ಸ್ವಸ್ಥಚಿತ್ತರಿಂದ ಇದನ್ನು ಬರೆಯಿಸಿಕೊಟ್ಟು ನನ್ನ ಸಹಿ ಯನ್ನು ಕೊಟ್ಟಿದ್ದೇನೆ.—**ಝುನೀನಾಬೀ.**"

'ಇದಕ್ಕೆ ಸಾಕ್ಷಿಗಳು' ಎಂದು 5 ಜನರ ಸಹಿಗಳಿದ್ದುವು. ಇದನ್ನೆಲ್ಲ ಓದಿದ ಮೇಲೆ ಕಮ್ಮಿಶನರ ಸಾಹೇಬರು "ನೀವು ಯಾರು? ಈ ಪತ್ರವು ನಿಮ್ಮ ಕೈಗೆ ಹೇಗೆ ಸೇರಿತು?" ಎಂದು ಪ್ರಶ್ನಿಸಿದರು. ಆಗ ಆ ಸ್ತ್ರೀಯು ತನ್ನ ಅವಕುಂಠನವನ್ನು ತೆರೆದು "ನಾನೇ ಆ ಅನಸೂಯೆ—ನಾನೇ ಆ ಅಯೇಷೆ! ಈ ಪತ್ರವನ್ನು ಹಕೀಮ ಮಲಿಕ ಜಾಫರರು ನನ್ನ ರಕ್ಷಕ ರಾದ ಷೆಂಷೇರ ಜಂಗ ಬಹದ್ದೂರರ ಕೈಗೆ ಒಪ್ಪಿಸಿ ನನ್ನನ್ನೂ ಅವರ ಬಳಿ ಇರಿಸಿದರು. ಆ ಮಹಾಪುರುಷರು ನನ್ನನ್ನು ಸಾಕುಮಗಳಂತೆ ಕಾಣುತ್ತಾರೆ. ನನ್ನ ಹಿರಿಯರ ಆಸ್ತಿಯ ಪತ್ತೆ ಹಚ್ಚುವೆನೆಂದು ಅವರೇ ಈ ಪಟ್ಟಣಕ್ಕೆ ಬಂದಾಗ ಈ ಪತ್ರವನ್ನು ನನ್ನ ಕೈಗೆ ಒಪ್ಪಿಸಿದ್ದರು. ವರ್ತಮಾನ ಪತ್ರಿಕೆಯ ಬಾತಮಿಗಳನ್ನು ನೋಡಿದಾಗ ತಮ್ಮ ಬಳಿಯಲ್ಲಿ ನನ್ನ ವಿಚಾರವನ್ನು ಹೇಳಿಕೊಳ್ಳಬೇಕೆಂದು ನಾನು ತವಕಿಸಿ ಇಲ್ಲಿಗೆ ಬಂದೆನು. ಜಂಗ ಬಹದ್ದೂರರು ತನ್ನ ಉಮದಾಬಾಗಿನಲ್ಲಿ ಕಳವು ಮತ್ತು ಕೊಲೆಯಾದ ವ್ಯಸನದಿಂದ ಈ ದಿನವೇ ಮಹಾಬಲೇಶ್ವರಕ್ಕೆ ತೆರಳಿದ ನಿಮಿತ್ತ ಈ ವಿಷಯವನ್ನು ಅವರೊಡನೆ ಪ್ರಸ್ತಾಪಿಸಲು ನನಗೆ ಸಾಧ್ಯವಾಗಲಿಲ್ಲ."

**ಕಮಿಷ್ನರ್:**— ಈಗ ಈ ಯದುಕುಲನಾಥನಿಗೂ ಡಿಪ್ಯುಟಿ ಕಮಿಷ್ನರನ ದ್ವಾರಕಾನಾಥನಿಗೂ ಏನು ಸಂಬಂಧ?

**ಅಯೇಷೆ:**—ಅವರಿಬ್ಬರಲ್ಲ—ಒಬ್ಬನೆ! ಅದನ್ನು ರುಜುಪಡಿಸ ಬಲ್ಲೆ. ನಾನು ಇವನನ್ನು ಮೊನ್ನೆ ಮಾತ್ರ ಪ್ರಥಮತಃ ಕಂಡೆ. ಜಂಗ ಬಹದ್ದೂರರು ಒಂದು ರಾತ್ರೆ ನಾಟಕವನ್ನು ನೋಡುವುದಕ್ಕೆ ನನ್ನನ್ನು ಕರೆದುಕೊಂಡು ಹೋಗಿದ್ದರು. ನಾವು 'ರಿಜರ್ವ' ಕುರ್ಚಿಗಳಲ್ಲಿ ಕುಳಿತಿದ್ದೆವು. ಅಷ್ಟು ಹೊತ್ತಿಗೆ ಸ್ವಲ್ಪ ದೂರದಲ್ಲಿ ಈ ದ್ವಾರಕಾ ನಾಥನೂ ಮೆಲ್ಲಗೆ ಬರುತಿದ್ದನು. ನಮ್ಮ ತಂದೆ ಜೀವಂತನಾಗಿದ್ದಾಗ ಏನಾದರೂ ಒಂದು ನೆವ ಮಾಡಿಕೋಡು ನನ್ನ ದಾದಿಯಾದ ಝುನೀ ನಾಬೀಯೊಡನೆ ಸಲ್ಲಾಪ ಮಾಡಲು ಈತನು ನಮ್ಮ ಹಿಂದೆ ತೋಟಕ್ಕೆ ಬರುತಿದ್ದನು. ಆದುದರಿಂದ ಅವನ ಮುಖ, ಕಣ್ಣುಗಳು, ಅವನ ನಡಿಗೆ ಇವೆಲ್ಲ ಈಗ ಸುಮಾರು 20 ವರ್ಷಗಳು ದಾಟಿದರೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೆ ನಿಂತಿವೆ. ಈ ದ್ವಾರಕಾನಾಥನು ಸೆಕೆಯಾಗುತ್ತದೆಂದು ತನ್ನ ಪಾಗುವನ್ನು ಕೈಯಲ್ಲಿ ಹಿಡಿದಿದ್ದನು. ಆಗ ಝುನೀನಾಬಾಯಿಯು ಆತನ ತಲೆಗೆ ಮಾಡಿದ ಗಾಯದ ಗುರುತು ನನಗೆ ಸ್ಪಷ್ಟವಾಗಿ ಕಂಡಿತು. 'ಅವನು ಸಾಯಲಿಲ್ಲವಂತೆ' ಎಂದು ಝುನೀನೆಯು ನನಗೆ ತಿಳಿಸಿದ್ದಳು. ಈ ಗಾಯದ ಗುರುತನ್ನು ಕಂಡೊಡನೆ "ಇಗೊ! ಆ ದುಷ್ಟ ಯದುಕುಲನಾಥನು ಇವನೇ!" ಎಂದು ನಾನು ಜಂಗಬಹದ್ದೂರ ರಿಗೆ ತಿಳಿಸಿದೆನು. ಆತನನ್ನು ಕಂಡು ರೋಷದಿಂದ ನನಗೆ ತಲೆ ತಿರು ಗಿತು. ಇನ್ನೂ ನಾಟಕಶಾಲೆಯಲ್ಲಿ ನಾನು ಉಳಿಯುವುದು ಸರಿಯಲ್ಲ ವೆಂದು ಜಂಗಬಹದ್ದೂರರು ನನ್ನನ್ನು ಅಸ್ಮಾನಬಾಗಿಗೆ ಕರೆದುಕೊಂಡು ಹೋದರು. ಈ ವಿಷಯದಲ್ಲಿ ಜಂಗಬಹದ್ದೂರರು ಮಹಾಬಲೇಶ್ವರ ದಿಂದ ಬಂದೊಡನೆ ನೀವು ವಿಚಾರಿಸಬಹುದು. ಒಂದೇ ಮಾತು. ಆ ದ್ವಾರಕಾನಾಥನು ತನ್ನ ಪಾಗುವನ್ನು ಎತ್ತಲಿ, ಆತನ ತಲೆಯ ಎಡ ಪಾರ್ಶ್ವದಲ್ಲಿ ಸುಮಾರು ಎರಡು ಇಂಚು ಉದ್ದದ ಗಾಯದ ಗುರುತು ಕಾಣುತ್ತಿದೆಯೇ ಎಂದು ನೋಡೋಣಾಗಲಿ.

**ಕಮಿಷ್ನರ್:**—"ರಾವ ಸಾಹೇಬರೇ! ನಿಮ್ಮ ಪಾಗುವನ್ನು

ಒಮ್ಮೆ ಕೈಯಲ್ಲಿ ತೆಗೆದುಕೊಳ್ಳಿರಿ'' ಎಂದು ಹೇಳಿ ಪಾಗುವನ್ನು ಎತ್ತಿದೊಡನೆ ಈ ಗಾಯದ ಗುರುತನ್ನು ನೋಡಿ ''ರಾವಸಾಹೇಬರೇ! ನೀವು ಈ ಆರೋಪಕ್ಕೆ ಹೇಳತಕ್ಕದ್ದೇನಿದೆ?'' ಎಂದು ನಿಧಾನವಾಗಿ ಸ್ಪಷ್ಟೋಕ್ತಿಯಿಂದ ಕೇಳಿದರು. ದ್ವಾರಕಾನಾಥನ ಮುಖವು ವಿವರ್ಣವಾಗಿ ಏನೊ ಹೇಳಲಿಕ್ಕೆಂದು ಎದ್ದವನು ಬಾಯಾಡಿಸಲಾರದೆ ಕುರ್ಚಿಯಲ್ಲಿ ದಬಕ್ಕನೆ ಕುಳಿತುಬಿಟ್ಟನು. ಅವನಿಗೆ ಕಣ್ಣುಕತ್ತಲೆ ಬಂದಂತಾಯಿತು.

**ಅಯೋಷೆ:**—''ಇದಕ್ಕಿಂತಲೂ ಹೆಚ್ಚಿನ ರುಜುವಾತು ಬೇಕೆ?'' ಎಂದು ಆತನ ಕಡೆಗೆ ಬೆರಳು ತೋರಿಸಿದಳು.

ಕಮ್ಮಿಶನರು ದಫೆದಾರರನ್ನು ಕರೆದು ''ರಾವಸಾಹೇಬರಿಗೆ ದೇಹಾಲಸ್ಯವಿದ್ದಂತೆ ತೋರುತ್ತದೆ. ಅವರನ್ನು ಅವರ ಮನೆಗೆ ಮುಟ್ಟಿಸಿ ಬಾ'' ಎಂದು ಹೇಳಿದೊಡನೆ, ದಫೆದಾರನೂ ಇನ್ನೊಬ್ಬ ಶಿಪಾಯಿಯೂ ಆತನ ಭುಜಗಳನ್ನು ಹಿಡಿದು ಮೆಲ್ಲಗೆ ಆತನನ್ನು ಬಂಗಲೆಯ ತೋಟವಲ್ಲಿರುವ ವಿಕ್ಟೋರಿಯಕ್ಕೆ ವೈದರು. ಅವರೊಂದಿಗೆ ಕೋಣೆಯಿಂದ ಹೊರಗೆ ಹೋಗುವಾಗ, ತೀವ್ರ ದೃಷ್ಟಿಯನ್ನು ಅಯೋಷೆಯ ಕಡೆಗೆ ಬೀರಿ, ನಿಟ್ಟುಸುರು ಬಿಡುತ್ತ ವಿಕ್ಟೋರಿಯ ಹತ್ತಿಕೊಂಡು ದ್ವಾರಕಾನಾಥನು ಮನೆಗೆ ಹೋದನು.

ಈ ಮನವಿಯ ವಿಷಯದಲ್ಲಿ ಅಗತ್ಯವಿರುವ ವಿಚಾರ ನಡೆಸಿ, ಅಯೋಷೆಯ ಪಿತ್ರಾರ್ಜಿತ ಆಸ್ತಿಯನ್ನು ಅವಳಿಗೆ ಒಪ್ಪಿಸಿಕೊಡುವಂತೆ ಅಯೋಷೆಗೆ ಕಮ್ಮಿಶನರ ಸಾಹೇಬರು ಭರವಸೆಯನ್ನು ಕೊಟ್ಟು ಕಳುಹಿಸಿದರು.

---

## ಇಪ್ಪತ್ತೊಂದನೆ ಅಧ್ಯಾಯ

## ನಂದೂಲಾಲನ ಗುಪ್ತವಿಚಾರದ ಪರಿಣಾಮ

ದ್ವಾರಕಾನಾಥನು ಮನೆಗೆ ತಲ್ಪಿದೊಡನೆ ಸುಲೋಚನೆ ಅವನ ಭಯಂಕರ ಸ್ಥಿತಿಯನ್ನು ಕಂಡಳು. ಅವನನ್ನು ಮಂಚದ ಮೇಲೆ ಮಲಗಿಸಿದಳು. ಪತ್ರಕರ್ತ ಗಿರಿಧರಲಾಲನಿಗೂ, ಡಾಕ್ಟರರಿಗೂ ಹೇಳಿ ಕಳುಹಿದಳು. ಡಾಕ್ಟರನು ಬಂದು ''ದ್ವಾರಕಾನಾಥನಿಗೆ ಏನೋ ಸೋಂಕಿನಂತಾಗಿದೆ. ಒಂದೆರಡು ದಿನ ಪೂರ್ಣ ವಿಶ್ರಾಂತಿ ತೆಗೆದುಕೊಳ್ಳಬೇಕು.

ಅಂಥಾ ಗಾಬರಿಯೇನೂ ಇಲ್ಲ'' ಎಂದು ಔಷಧವನ್ನು ಕೊಟ್ಟು ಹೋದನು. ಗಿರಿಧರಲಾಲನು ಇದನ್ನೆಲ್ಲಾ ನೋಡಿ, ಸುಲೋಚನೆಯ ಅಪ್ಪಣೆಯನ್ನು ಪಡೆದು, ಮಹಾಬಲೇಶ್ವರಕ್ಕೆ ಜಂಗಬಹದ್ದೂರನೊಂದಿಗೆ ಹೊರಟು ಹೋಗಿರುವ ರಘುನಾಥನಿಗೆ ತಂತಿಯನ್ನು ಕೊಟ್ಟನು. ಅದು ಪೂನೆಯಿಂದ ಸುಮಾರು 3 ತಾಸಿನ ಪ್ರಯಾಣದ ದೂರದ ಸ್ಟೇಶನ್ನಿನಲ್ಲಿ ರಘುನಾಥನಿಗೆ ಮುಟ್ಟಿತು. ಅದನ್ನು ಜಂಗ ಬಹದ್ದೂರನಿಗೆ ತೋರಿಸಿದಾಗ ಇಬ್ಬರು ಮುಂದಕ್ಕೆ ಪ್ರಯಾಣ ಮಾಡದೆ ಹಿಂದಕ್ಕೆ ಬರುವ ಬಂಡಿಯಲ್ಲಿ ಪೂನೆಗೆ ಸುಮಾರು ಮಧ್ಯಾಹ್ನ ನಾಲ್ಕು ಗಂಟೆಗೆ ಬಂದು ಮುಟ್ಟಿದರು. ಸ್ಟೇಶನ್ನಿನಲ್ಲಿ ಗಿರಿಧರಲಾಲನು ಇವರಿಬ್ಬರಿಗೆ ಭೇಟಿಯಾದನು. "ರಾವಸಾಹೇಬರ ಆರೋಗ್ಯವು ಹೇಗಿದೆ?'' ಎಂದು ರಘುನಾಥನೂ, (ಅವನೊಂದಿಗೆ) ಜಂಗಬಹದ್ದೂರನೂ ಗಿರಿಧರಲಾಲನೊಡನೆ ವಿಚಾರಿಸಿದರು. ಆಗ "ಅಷ್ಟು ಚೆನ್ನಾಗಿಲ್ಲ! ಅದಕ್ಕಾಗಿಯೇ ನಿಮ್ಮ ತಾಯಿ ತಂತಿಬಿಡಲು ಹೇಳಿದರು. ನೀವು ಈ ಬಂಡಿಯಲ್ಲೆ ಹಿಂತಿರುಗಿ ಬರಬಹುದೆಂದು ಯೋಚಿಸಿ, ನಾನು ರೈಲ್ವೆ ಸ್ಟೇಶನ್ನಿನಲ್ಲಿ ಬಂದು ಕಂಡೆನು'' ಎಂದು ಗಿರಿಧರಲಾಲನು ಉತ್ತರ ಕೊಟ್ಟನು. ಜಂಗಬಹದ್ದೂರನು ತನಗಾಗಿ ಕಾದಿದ್ದ ಬಂಡಿಯಲ್ಲಿ ಅಸ್ಮಾನಬಾಗಿಗೆ ತೆರಳಿದನು.

ಗಿರಿಧರಲಾಲನೂ ರಘುನಾಥನೂ ವಿಕ್ಟೋರಿಯ ಬಂಡಿಯಲ್ಲಿ ಕುಳಿತು ಹೊರಟರು. ಬಂಡಿಯು 'ರಾಷ್ಟ್ರಮತದ' ಆಫೀಸಿನ ಮುಂದೆ ನಿಂತಿತು. ಗಿರಿಧರಲಾಲನು "ರಘುನಾಥ! ಇಲ್ಲಿ ಇಳಿಯಿರಿ'' ಎಂದನು. "ಇದೇನು? ನಮ್ಮ ಯಜಮಾನರಿಗೆ ಸೌಖ್ಯವಿಲ್ಲೆಂದು ನನಗೆ ತಂತಿ ಬಿಟ್ಟು ಈಗ ಅಲ್ಲಿಗೆ ಹೋಗುವ ಬದಲಾಗಿ ಇಲ್ಲಿ ಬಂಡಿಯನ್ನು ತಳುವಿದಿರಿ? ತಂತಿಯಲ್ಲಿ ಹೇಳಿದುದಕ್ಕಿಂತ ಹೆಚ್ಚಿನ ದುಃಖಕರ ವಾರ್ತೆ ಏನಾದರೂ ಇದೆಯೆ?'' ಎಂದು ರಘುನಾಥನು ಆರ್ತಸ್ವರದಿಂದ ಕೇಳಿದನು.

**ಗಿರಿಧರ:**—ಅಂಥದ್ದೇನೂ ಅಲ್ಲ. ಆದರೆ ನೀವು ಮನೆಗೆ ಹೋಗುವ ಮೊದಲು ಒಂದೆರಡು ಮಾತುಗಳನ್ನು ನಿಮ್ಮೊಡನೆ ಆಡಬೇಕೆಂದಿದ್ದೆ'' ಎಂದು ಗಿರಿಧರಲಾಲನು ತನ್ನ ಆಫೀಸಿನ ಒಳಕೋಣೆಯೊಳಕ್ಕೆ ಕರೆದುಕೊಂಡು ಹೋಗಿ ಬಾಗಿಲನ್ನು ಮುಚ್ಚಿ ರಘುನಾಥನನ್ನು ಒಂದು ಕುರ್ಚಿಯಲ್ಲಿ ಕುಳ್ಳಿರಿಸಿದನು.

**ರಘುನಾಥ:**— ಗಿರಿಧರ! ನಿಮ್ಮ ಇಂದಿನ ವರ್ತನವು ನನಗೆ ಸ್ವಲ್ಪವೂ ಬೋಧೆಯಾಗುವುದಿಲ್ಲ. ನನ್ನನ್ನು ಮುಳ್ಳುರಾಶಿಯ ಮೇಲೆ ಕುಣಿಯುವಂತೆ ಮಾಡುತ್ತೀರಲ್ಲ!

**ಗಿರಿಧರ:**— ನೀವು ಶಾಂತಮನಸ್ಸಿನಿಂದ ಸ್ವಲ್ಪ ಹೊತ್ತು ಕೇಳಿದರೆ ಎಲ್ಲವೂ ನಿಮಗೆ ಸ್ಪಷ್ಟವಾಗುವುದು.

**ರಘುನಾಥ:**— ಅದೇನದೇನು?

**ಗಿರಿಧರ:**— ನಿಮ್ಮ ತಂದೆಯನ್ನು ಉದ್ದೇಶಿಸಿ, ಗುಪ್ತ ರೀತಿಯಿಂದ ಬರೆದ ಲೇಖನವು, ವಿಶೇಷ ಚಳವಳ ಎಬ್ಬಿಸಲಿಲ್ಲ, ಎಂದು ಯೋಚಿಸಿ, ಇನ್ನಷ್ಟು ಗುಪ್ತ ಸೂಚನೆಗಳನ್ನು ಕೊಟ್ಟು, ಇನ್ನೊಂದು ಬಾತಮಿಯು 'ಲೋಕೋದ್ಧಾರ' ಎಂಬ ಪತ್ರಿಕೆಯಲ್ಲಿ ಪ್ರಕಟವಾಯಿತು. ಆ ಕುರಿತು ಇನ್ನೊಂದು ಮನವಿಯು ಕಮ್ಮಿಶನರ ಸಾಹೇಬರ ಕೈಸೇರಿತು. ಅದನ್ನು ಕುರಿತು ನಿಮ್ಮ ತಂದೆಯೊಡನೆ ಪ್ರಸ್ತಾಪವೆತ್ತುವಷ್ಟರಲ್ಲಿ ಯಾರೋ ಒಬ್ಬ ಹೆಂಗಸು ನಿಮ್ಮ ತಂದೆಯ ಮೇಲೆ ಸಾಕ್ಷಿ ನುಡಿದಳಂತೆ. ಆಗ ನಿಮ್ಮ ತಂದೆಯವರು ಪ್ರಜ್ಞೆ ತಪ್ಪಿದರು. ಅವರನ್ನು ಕಮ್ಮಿಶನರ್ ಸಾಹೇಬರು ಮನೆಗೆ ಕಳುಹಿಸಿ ಮುಂದಿನ ವಿಚಾರ ನಡಿಸಲಿರುವರು ಎಂದು ಅವರ ದಫೆದಾರನು ನನಗೆ ಹೇಳಿದನು.

**ರಘುನಾಥ:**— ಹಾಗಿದ್ದರೆ ನಮ್ಮ ತಂದೆ ತನ್ನ ಸ್ಥಾನಮಾನಾದಿಗಳನ್ನು ಕಳೆದುಕೊಳ್ಳುವುದಲ್ಲದೆ ವೃದ್ಧಾಪ್ಯದಲ್ಲಿ ಕಾರಾಗೃಹವಾಸವನ್ನೂ ಅನುಭವಿಸಬೇಕಾಗಿ ಬಂದೀತೇ?

**ಗಿರಿಧರ:**— ಅದು ಮುಂದಿನ ವಿಚಾರ. ಭವಿಷ್ಯತ್ಕಾಲದ ಉಡಿಯಲ್ಲಿ ಇದೆ.

**ರಘುನಾಥ:**— ಈ ರೀತಿಯಲ್ಲಿ ಹಳೇ ಪುರಾಣಕಥೆಯನ್ನು ಬಿಚ್ಚಿ ನಮ್ಮ ತಂದೆಯ ಮೇಲೆ ಸಾಧನೆ ಮಾಡುವವರು ಯಾರು?

**ಗಿರಿಧರ:**— ಹಿಂದೆ ನಾನು ಒಂದು ಮಾತನ್ನು ತಿಳಿಸಲು ಇಷ್ಟಪಡಲಿಲ್ಲ. ನಾನು ಸಾಂಗಲಿಗೆ ಹೋದಾಗ ಅಲ್ಲಿ ಪರಶುರಾಮ ದೀಕ್ಷಿತರೆಂಬವರು ಆಕಸ್ಮಾತ್ತಾಗಿ ನನಗೆ ಗಂಟುಬಿದ್ದರು. ಅವರು ಆ ಪ್ರಾಂತದ ಪರಿಚಯ ಚೆನ್ನಾಗಿ ಇದ್ದವರು. ಅವರು ಇದೇ ವಿಷಯದಲ್ಲಿ ತನಗೆ

ನಂದೂಲಾಲಸೇಟರಿಂದ ಒಂದು ಪತ್ರ ಬಂದಿತ್ತೆಂದು ತಿಳಿಸಿದರು. ನನಗೆ ಒದಗಿಸಿ ಕೊಟ್ಟ ಪತ್ರದ ಯಥಾ ನಕಲನ್ನು ಅವರು ಸೇಟಜಿಯವರ ಬಳಿಗೆ ಕಳುಹಿಸಿದ್ದೇನೆಂದರು.

**ರಘು:**—ನಂದೂಲಾಲ ಸೇಟರಿಗೆ ನಮ್ಮ ಮೇಲೆ ಅಷ್ಟೊಂದು ದ್ವೇಷವೇ?

**ಗಿರಿಧರ:**—ನಿಮ್ಮ ತಂದೆಯವರಿಗೆ ಬಿರುದು ಸಿಕ್ಕಿದುದು ಅವರ ಕಣ್ಣಿಗೆ ಸೂಜಿ ಚುಚ್ಚಿದಂತಾಗಿರಬಹುದು. "ಸಂಬಳ ಪಡೆದು ಕೆಲಸ ಮಾಡುವವರಿಗೆ ಬಿರುದುಗಳ ಶೃಂಗಾರವೇಕೆ?" ಎಂದು ಅವರು ಒಬ್ಬಿಬ್ಬರೊಡನೆ ಹೇಳುತ್ತಿದ್ದರಂತೆ.

**ರಘುನಾಥ:**—"ಹಾಗಿದ್ದರೆ ಈ ಕುಟಿಲೋಪಾಯವನ್ನು ಅವರು ಏತಕ್ಕೆ ನಡಿಸಿದರೆಂದು ಅವರ ಬಾಯಿಂದ ಹೊರಡಿಸೋಣ. ಬರುವಿರಾ?" ಎಂದನು.

ಅವರಿಬ್ಬರು, ನಂದೂಲಾಲ ಸೇಟರ ಮನೆಯನ್ನು ಮುಟ್ಟಿ, ತಾವು ಹೊರಗೆ ಬಂದಿರುವುದಾಗಿ ಹೇಳಿ ಕಳುಹಿಸಿದರು. "ಈಗ ಅವರಿಗೆ ಏನೂ ಸೌಖ್ಯವಿಲ್ಲ, ಇನ್ನೊಮ್ಮೆ ಬರಬಹುದು" ಎಂದು ಜವಾನನು ಹೇಳುವಷ್ಟರಲ್ಲಿ ಜವಾನನನ್ನು ಆಚೆಗೆ ತಳ್ಳಿ ಇವರಿಬ್ಬರೂ ನಂದೂಲಾಲನ ಬೈಠಕಖಾನೆಗೆ ಪ್ರವೇಶಮಾಡಿದರು. ನಂದೂಲಾಲನು ಆಗಲೆ ತನ್ನ ದಿನವಹಿಯ ಲೆಕ್ಕಾಚಾರವನ್ನು ಮುಗಿಸಿ, ಗುಮಾಸ್ತರನ್ನು ಮನೆಗೆ ಅಟ್ಟಿ, ತನ್ನ ಆಸನದ ಮೇಲೆ ಏನೂ ಯೋಚಿಸುತ್ತ ಕುಳಿತಿದ್ದನು. ಗಿರಿಧರಲಾಲನೂ, ರಘುನಾಥನೂ ಅವನ ಬಳಿಯಲ್ಲಿ ಕುಳಿತರು. ಅವರೊಡನೆ ಮಾತಾಡುವ ಇಚ್ಛೆ ಇಲ್ಲದವನಂತೆ ನಂದೂಲಾಲನು "ನನಗೇನೂ ಸೌಖ್ಯವಿಲ್ಲವೆಂದು ಹೇಳಿದ್ದನ್ನು ಕೇಳಿದಿರಲ್ಲ!" ಎಂದು ಚುರಚುರನೆ ಅವರನ್ನು ನೋಡಿದನು. "ನಮ್ಮ ಕೆಲಸವು ಅತಿ ಜರೂರಾಗಿದ್ದರಿಂದ ಇಲ್ಲಿಗೆ ಈಗಲೇ ಬರಬೇಕಾಯಿತು" ಎಂದು ಗಿರಿಧರಲಾಲನು ಉತ್ತರ ಕೊಟ್ಟನು.

**ರಘುನಾಥ:**—ನೀವು ಸಾಂಗಲಿಯಲ್ಲಿರುವ ಪರಶುರಾಮ ದೀಕ್ಷಿತರಿಗೆ ಕೆಲವು ದಿನಗಳ ಹಿಂದೆ ಪತ್ರ ಬರೆದಿದ್ದಿರೇ?

**ನಂದೂಲಾಲ**:—ಬರೆಯಬಾರದೇಕೆ? ನಮಗೆ ಲೇವಾದೇವಿ ಇದ್ದಲ್ಲೆಲ್ಲ ನಾವು ಆಗಾಗ ಪತ್ರವ್ಯವಹಾರ ನಡಿಸುತ್ತಲೆ ಇದ್ದೇವೆ. ಅದರಲ್ಲಿ ವಿಶೇಷವೇನು?

**ರಘುನಾಥ**:—ಅದರಲ್ಲಿ ನೀವು ನನ್ನ ತಂದೆಯ ವಿಷಯವಾಗಿ ಏನೋ ಒಂದು ಸಮಾಚಾರ ತಿಳಿಸಲು ಬರೆದಿದ್ದರೇ?

**ನಂದೂಲಾಲ**:— ಇದ್ದರೂ ಇರಬಹುದು.

**ರಘುನಾಥ**:— ಅದನ್ನು ತಾವು ವಿಚಾರಿಸುವ ಅಗತ್ಯ?

**ನಂದೂಲಾಲ**:— ನಮ್ಮಲ್ಲಿ ವಿವಾಹಸಂಬಂಧವನ್ನು ಬೆಳಿಸ ಬೇಕೆಂದು ಯೋಚಿಸುವವರ ಕುಲಗೋತ್ರ, ಪೂರ್ವಸ್ಥಿತಿ, ಮುಂತಾದ್ದ ನ್ನೆಲ್ಲ ವಿಚಾರಿಸಬೇಡವೇ?

**ರಘು**:— ಪರಶುರಾಮದೀಕ್ಷಿತರಿಂದ ಏನು ತಿಳಿದುಬಂತು?

**ನಂದೂಲಾಲ**:— ಪರಶುರಾಮ ದೀಕ್ಷಿತರ ಪತ್ರದಲ್ಲಿ, ಆ ವಿಶ್ವ ನಾಥ ಪಂತರ ವಿನಾಶಕ್ಕೆ ಮೂಲಕಾರಣನಾದ ಯದುಕುಲನಾಥನೂ, ಈಗ ರಾವಸಾಹೇಬನಾಗಿರುವ ದ್ವಾರಕಾನಾಥನೂ ಒಂದೇ ವ್ಯಕ್ತಿ ಎಂದು ತಿಳಿಯಿತು. ಪರಶುರಾಮ ದೀಕ್ಷಿತರ ಪರಿಚಯವನ್ನು ಮಾಡಿಸಿ ಕೊಡಲಿಕ್ಕೆ ನಮಗಾಪ್ತರಾದ ಜಂಗ ಬಹದ್ದೂರರೇ ಸಹಾಯಕರಾದರು.

**ರಘುನಾಥ**:— ಹಾಗಾದರೆ ಈ ಎಲ್ಲಾ ಸಂಗತಿಯು ಜಂಗ ಬಹದ್ದೂರರಿಗೇ ಗೊತ್ತೇ?

**ನಂದೂಲಾಲ**:— ಗೊತ್ತಿಲ್ಲವೆ ಮತ್ತೆ! ನನ್ನ ಪತ್ರವ್ಯವಹಾರ ವನ್ನೆಲ್ಲ ಅವರಿಗೆ ಕಾಣಿಸಿದ್ದೇನೆ.

ರಘುನಾಥನು ಕಳವಳ ಮತ್ತು ರೋಷದಿಂದ ಕೂಡಿದ ಉಚ್ಚಸ್ವರ ದಿಂದ:—"ಏನು! ಜಂಗ ಬಹದ್ದೂರರು ಈ ಒಳಸಂಚಿನಲ್ಲಿದ್ದರೇ? ಸರ್ವರ ಬಾಯಿಯಲ್ಲಿಯೂ ಧಾರಾಳಿಗಳು, ಪ್ರಾಜ್ಞರು, ಎಲ್ಲರ ಗೆಳೆ ಯರು ಅನ್ನಿಸಿಕೊಂಡು ಮೆರೆಯುತ್ತ, ಅಂತರಂಗದಲ್ಲಿ ಈ ಬಗೆಯಲ್ಲಿ ತಲೆತಲೆಗೆ ಗಂಟಿಕ್ಕಿ, ನಗರ ಮುಖಂಡರ ಮೇಲೆ ಇಲ್ಲಸಲ್ಲದ ಆರೋಪ ಗಳನ್ನು ಹೊರಿಸುವ ಕುತ್ಸಿತ ವರ್ತನವನ್ನು ಅವರು ಆಚರಿಸಿದರೇ?

ಮೊದಲು ಅವರ ಸಮಾಚಾರ ತಕ್ಕೊಂಡು, ಆ ಮೇಲೆ ನಿಮ್ಮ ಹೊಟ್ಟೆ ಕಿಚ್ಚಿಗೆ ಮದ್ದರೆಯುವೆನು'' ಎಂದು ನಂದೂಲಾಲನ ಬೈತಕಖಾನೆಯಿಂದ ಉನ್ಮತ್ತನಂತೆ ಹೊರಗೆ ಬೇಗಬೇಗನೆ ಕಾಲಿಟ್ಟನು. ''ಇದೇನು ವಿಪರೀತ!'' ಎಂದು ಗಿರಿಧರಲಾಲನು ಆತನನ್ನು ಬೀದಿಯಲ್ಲಿ ತಡೆದು ''ರಘುನಾಥ! ಈಗೇನು ಮಾಡಬೇಕೆಂಟರುವಿರಿ?'' ಎಂದು ಪ್ರಶ್ನಿಸಿದನು.

**ರಘುನಾಥ**:—ಮಾಡುವುದೇನು? ಹೆಚ್ಚಿಲ್ಲ. ನನ್ನ ನೇರಾದ ಪ್ರಶ್ನೆಗೆ ಜಂಗ ಬಹದ್ದೂರರು ಏನು ಉತ್ತರವನ್ನು ಕೊಡುವರೆಂದು ನೋಡುವೆನು. ಇಲ್ಲವಾದರೆ ಇಗೊ! ಈ ಪಿಸ್ತೂಲಿನಿಂದ ಅವರನ್ನು ಯಮಸದನಕ್ಕೆ ಅಟ್ಟಿಬಿಡುವೆನು.

**ಗಿರಿಧರ**:—ರಘುನಾಥ! ಏನು ಭ್ರಮೆ? ಯಮಸದನದ ಬೀಗದ ಕೈಯನ್ನು ಆ ಯಮರಾಯನು ನಿಮ್ಮ ಕೈಗೆ ಒಪ್ಪಿಸಿಲ್ಲವಲ್ಲ! ದ್ರವ್ಯ ಲಾಲಸೆಯಿಂದ ಶ್ರೀಮಂತರ ಕಾಲುನೆಕ್ಕುವ ನಂದೂಲಾಲನು ಕೂಡಾ ನಿಮಗೆ ಬೆದರಲಿಲ್ಲವಂತೆ! ಹಾಗಾದರೆ ಜಂಗ ಬಹದ್ದೂರರು ನಿಮ್ಮ ಒಣ ಬೆದರಿಕೆಗೆ ಸೊಪ್ಪು ಹಾಕುವುದುಂಟೇ? ಅವರ ಲಕ್ಷ್ಯಭೇದನ ಸಾಮರ್ಥ್ಯವನ್ನು ನೀವು ತಿಳಿದೇ ಇರುವಿರಿ. ಅವರ ಪ್ರಾಣವನ್ನು ತೆಗೆಯುವ ಬದಲಾಗಿ ನಿಮ್ಮ ಪ್ರಾಣವನ್ನೆ ಹೋಸಲಾಗಿಡುವ ಪ್ರಸಂಗ ಬಂದೀತಲ್ಲ!

**ರಘುನಾಥ**:—ನಮ್ಮಿಬ್ಬರಲ್ಲಿ ಒಬ್ಬನು ಈ ಲೋಕದಿಂದ ತೆರಳಬೇಕು. ಇಬ್ಬರಿಗೆ ಇಲ್ಲಿ ಸ್ಥಳವಿಲ್ಲ.

**ಗಿರಿಧರ**:—ನಿಮಗಿಂತಲೂ ನಿಮ್ಮ ತಾಯಿಯ ಕಳವಳದ ಯೋಚನೆ ನಿಮಗೆ ಬಂತೇ?

**ರಘುನಾಥ**:—ಬಂದಿದೆ. ಅದರಿಂದಲೇ ಜಂಗ ಬಹದ್ದೂರರನ್ನು ನನ್ನ ರೋಷಾಗ್ನಿಗೆ ಬಲಿಯಿಕ್ಕದೆ, ನನ್ನ ತಾಯಿಯ ಮೋರೆಯನ್ನು ನೋಡಲಾರೆ. ನೋಡಿದೆನೆಂದರೆ ನಾನು ತೀರಾ ಅಧೀರನಾಗಬಹುದು.

**ಗಿರಿಧರ**:—ಹಾಗಿದ್ದರೆ ಒಂದು ಬಗೆ ಮಾಡಿ. ನಾನೇ ನಿಮ್ಮ ತಾಯಿಯನ್ನು ಕಾಣುವೆನು. ನೀವು ಹೇಳಬೇಕಾದುದನ್ನೆಲ್ಲ ಒಂದು

ಕಾಗದದಲ್ಲಿ ಬರೆದು ನನ್ನ ಕೈಗೆ ಕೊಡಿ. ಅದನ್ನು ನಿಮ್ಮ ತಾಯಿಗೆ ಒಪ್ಪಿಸಿ ಒಂದು ತಾಸಿನೊಳಗಾಗಿ ಬರುವೆನು. ಅಪ್ಪರ ವರೆಗೆ ಇಲ್ಲಿಂದ ಕದಲುವ್ರುದಿಲ್ಲವೆಂದು ಮಾತು ಕೊಡುವಿರಾ?

**ರಘುನಾಥ**:— ಬರೀ 60 ಮಿನಿಟುಗಳ ಅವಧಿಯನ್ನು ಕೊಡುವೆನು. 61ನೇ ಮಿನಿಟಿಗೆ ನೀವು ಬಾರದಿದ್ದರೆ ಅನಂತರ ನಾನು ಇಲ್ಲಿ ನಿಲ್ಲಲಾರೆನು. ನೇರಾಗಿ ನಾನೊಬ್ಬನೇ ಜಂಗ ಬಹದ್ದೂರರಿದ್ದೆಡೆಗೆ ಹೋಗುವೆನು.

**ಗಿರಿಧರ**:— ಇಲ್ಲ! ಇಲ್ಲ! ಆ ಒಂದು ತಾಸಿನೊಳಗಾಗಿಯೇ ನಾನು ಬರುವೆನು. ಆ ಮೇಲೆ ನಾವಿಬ್ಬರೂ ಜಂಗ ಬಹದ್ದೂರರಲ್ಲಿಗೆ ಹೋಗಬಹುದು.

ಹೀಗೆ ಹೇಳಿ ರಘುನಾಥನನ್ನು ತನ್ನ ಆಫೀಸು ಕೋಣೆಯಲ್ಲಿರಿಸಿ ಗಿರಿಧರಲಾಲನು ಹೊರಗಿನಿಂದ ಬೀಗ ಹಾಕಿ ನೆಟ್ಟಗೆ ರಘುನಾಥಪಂತನ ಮನೆಗೆ ಹೋದನು.

---

## ಇಪ್ಪತ್ತೆರಡನೆ ಅಧ್ಯಾಯ

## ಜಂಗ ಬಹದ್ದೂರನಲ್ಲ, ತ್ರೈಲೋಕ್ಯನಾಥ

ಸಾಯಂಕಾಲ 5 ಗಂಟೆಯ ಸಮಯ ದಾಟಿ ಹೋಗಿತ್ತು. ಅಸ್ಮಾನಬಾಗಿನಲ್ಲಿ ತನ್ನ ಕೋಣೆಯಲ್ಲಿ ಜಂಗ ಬಹದ್ದೂರನು ಆರಾಮ ಕುರ್ಚಿಯಲ್ಲಿ ಕುಳಿತಿದ್ದನು. ಅವನ ಅಪ್ಪಣೆಯ ಮೇರೆಗೆ ಗಫೂರನು ಬಾರು ಮಾಡಿದ ಎರಡು ಪಿಸ್ತೂಲುಗಳನ್ನು ಜಂಗ ಬಹದ್ದೂರನ ಕುರ್ಚಿಗೆ ಸಮೀಪವಿರುವ ಮೇಜಿನ ಮೇಲೆ ತಂದಿಟ್ಟು, ಕೋಣೆಯ ಬಾಗಿಲನ್ನು ಮುಚ್ಚಿಕೊಂಡು ಹೊರಗೆ ಸಿದ್ಧನಾಗಿ ನಿಂತಿದ್ದನು. ಅಷ್ಟರಲ್ಲಿ ಮುಖದ ಮೇಲೆ ಅವಕುಂಠನವನ್ನು ಧರಿಸಿಕೊಂಡು ಒಬ್ಬ ಸ್ತ್ರೀಯು ಬಂದಳು. ಆ ಸಮಾಚಾರವನ್ನು ಗಫೂರನು ಜಂಗ ಬಹದ್ದೂರನಿಗೆ ತಿಳಿಸಿದನು. ಒಳಕ್ಕೆ ಕರೆದು ತಾರೆಂದು ಸಂಜ್ಞೆಯಾಯಿತು. ಗಫೂರನು ಅವಳನ್ನು ಒಳಗೆ ಬಿಟ್ಟನು. ಅವಳು ಬಂದೊಡನೆ ಜಂಗ ಬಹದ್ದೂರನು ಒರಗಿದ

ವನು ಎದ್ದು ಕುಳಿತು, ಸ್ವಲ್ಪ ದೂರದಲ್ಲಿರುವ ಕುರ್ಚಿಯನ್ನು ಆಕೆಗೆ ಕೈ ಸನ್ನೆಯಿಂದ ತೋರಿಸಿದನು. ಅವಳು ಕುಳಿತ ಮೇಲೆ "ನೀವು ಯಾರು? ಇಲ್ಲಿಗೆ ಬಂದ ಕೆಲಸವೇನು, ಹೇಳಬಹುದೇ?" ಎಂದು ಪ್ರಶ್ನಿಸಿದನು.

**ಸ್ತ್ರೀ**:—"ನಾನು ಯಾರೆಂದು ತಿಳಿಸುವ ಮೊದಲು ಈ ಕಾಗದ ವನ್ನು ಓದಿನೋಡಬೇಕು" ಎಂದು ಜಂಗ ಬಹದ್ದೂರನ ಕೈಗೆ ಅದನ್ನು ಒಪ್ಪಿಸಿದಳು.

**ಜಂಗ**:—ಈ ಕಾಗದವು ನನ್ನ ವಿಳಾಸಕ್ಕೆ ಬರೆದುದಲ್ಲ. ರಘು ನಾಥ ಪಂತರು ತನ್ನ ತಾಯಿಗೆ ಬರೆದ ಕಾಗದ. ಅಲ್ಲಿಗೆ ಮುಟ್ಟಿಸುವ ಬದಲಾಗಿ ಏನೊ ಪ್ರಮಾದ! ಇಲ್ಲಿಗೆ ತಂದಿರಾ?

**ಸ್ತ್ರೀ**:—ಅಂಥ ಪ್ರಮಾದವೇನೂ ಇಲ್ಲ. ಒಮ್ಮೆ ಆ ಕಾಗದ ವನ್ನು ಓದಿ ನೋಡಿರಿ, ಆ ಮೇಲೆ ನನ್ನ ವಿಚಾರವನ್ನು ತಿಳಿಸುವೆನು.

ಜಂಗ ಬಹದ್ದೂರನು ಬೇಗನೆ ಆ ಕಾಗದವನ್ನು ಓದಿದನು. ಅದರಲ್ಲಿ ಹೀಗೆ ಬರೆದಿತ್ತು "ಮಾತುಶ್ರೀಯವರೇ, ಈ ದಿನ ನನ್ನ ಕಿವಿಗೆ ಬಿದ್ದ ವರ್ತಮಾನದಿಂದ ನನಗೆ ಹಿಡಿದ ಮನೋವ್ಯಥೆಯು ಇಹಲೋಕ ತ್ಯಾಗವನ್ನು ಮಾಡುವುದಕ್ಕೆ ನನ್ನನ್ನು ಪ್ರೇರೇಪಿಸುತ್ತದೆ. ನಮ್ಮ ಕುಲ ಕಳಂಕವನ್ನು ಬಯಲಿಗಿಟ್ಟು ಅಪಮಾನದ ಕೂಪಕ್ಕೆ ನಮ್ಮನ್ನು ಸೆಳೆದು ಬಿಡಲು ಆ ನೀಚ ಜಂಗ ಬಹದ್ದೂರನಿಗೆ ಅಗತ್ಯವೇನಿತ್ತೋ ತಿಳಿಯದು. ಅದರ ಕಾರಣವನ್ನು ಕೇಳಲು ನಾನು ಅವನಲ್ಲಿಗೆ ಹೋಗಲಿದ್ದೇನೆ. ಈ ಪರಸ್ಪರ ಮಾತುಕತೆಯ ಪರಿಣಾಮವು ನಮ್ಮಿಬ್ಬರಲ್ಲಿ ಒಬ್ಬನನ್ನು ಇನ್ನೊಂದು ಲೋಕಕ್ಕೆ ಅಟ್ಟುವುದೆಂಬುದು ಖಂಡಿತ. ಹೀಗಾದುದರಿಂದ ತಮ್ಮನ್ನು ಇನ್ನೊಮ್ಮೆ ನೋಡಿಯೇನು ಎಂಬ ಭರವಸೆಯು ನನಗಿಲ್ಲ. ದೈವವಶಾತ್ ಉಳಿದರೆ ಬೇಗನೆ ಬಂದು ತಮ್ಮನ್ನು ಕಾಣುವೆನು. ಅದಕ್ಕೆ ಮೊದಲೇ ಬಂದರೆ, ತಮ್ಮ ಚಿಂತಾಭರದ ಮೋರೆಯನ್ನು ಕಂಡಾಗ ನಾನು ತೀರಾ ಅಧೀರನಾಗಬಹುದು. ನನ್ನ ಸರ್ವ ಅಪರಾಧ ಗಳನ್ನು ಕ್ಷಮಿಸಬೇಕಾಗಿ ಕೊನೆಯ ಪ್ರಾರ್ಥನೆ.

**ರಘುನಾಥನ ಪ್ರಣಾಮಗಳು"**

ಇದನ್ನು ಓದಿ ಇದರ ಅರ್ಥವೇನೆಂದು ಕೇಳುವವನಂತೆ ಜಂಗ ಬಹದ್ದೂರನು ಆ ಸ್ತ್ರೀಯನ್ನೇ ನೋಡಿದನು. ಆಗ ಅವಳು, ತನ್ನ ಅವ ಕುಂಠನವನ್ನು ತೆರೆದು, "ತ್ರೈಲೋಕ್ಯನಾಥ! ನನ್ನ ಒಬ್ಬನೇ ಮಗನ ಜೀವದಾನವನ್ನು ನಿನ್ನೊಡನೆ ಭಿಕ್ಷೆಯೆತ್ತಲು ಬಂದಿರುವೆನು. ಅದನ್ನು ನೀಡಲಾರೆಯಾ?" ಎಂದು ಕುರ್ಚಿಯಿಂದ ಎದ್ದು, ನಲದ ಕಂಬಳಿಯ ಮೇಲೆ, ಜಂಗ ಬಹದ್ದೂರನ ಕಾಲಬುಡದಲ್ಲಿ, ಎರಡು ಕೈಗಳನ್ನು ಜೋಡಿಸಿ ಧೊಪ್ಪನೆ ಕುಳಿತುಬಿಟ್ಟಳು. ಜಂಗ ಬಹದ್ದೂರನು ಒಮ್ಮೆ ಮೈಯನ್ನು ಕದಲಿಸದೆ ಏನನ್ನೊ ಚಿಂತಿಸುವವನಂತೆ, ಒಂದು ನಿಮಿಷ ನೀರವವಾದನು. ಕಡೆಗೆ "ನೀನು ದ್ವಾರಕನಾಥನ ಪತ್ನಿ—ಸುಲೋಚನೆ! ತಿಳಿಯಿತು. ನನ್ನನ್ನು ಏನೆಂದು ಸಂಬೋಧಿಸಿದೆ?"

**ಸುಲೋಚನೆ**:—ತ್ರೈಲೋಕ್ಯನಾಥನೆಂದೇ ಕರೆದೆನು. ನೀನೇ ಆತನು. ಅದರಲ್ಲಿ ನನಗೆ ಲವಲೇಶವಾದರೂ ಸಂದೇಹವಿಲ್ಲ. ನಾನು ನಿನ್ನ ಸುಲೋಚನೆಯಾಗಿಯೇ ಇಲ್ಲಿಗೆ ಬಂದಿರುವೆನು.

**ಜಂಗ**:—ಸುಲೋಚನೆ? ಯಾವ ಸುಲೋಚನೆ? ನನ್ನ ಪಾಲಿನ ಸುಲೋಚನೆ ಎಂದೋ ಆಗಿ ಹೋದಳು. ಈಗ ನನಗೆ ಸುಲೋಚನೆ ಇಲ್ಲ. ಸುಲೋಚನೆಯ ಆಲೋಚನೆ ಕೂಡಾ ಇಲ್ಲ.

**ಸುಲೋಚನೆ**:—ತ್ರೈಲೋಕ್ಯನಾಥ! ನಿನ್ನ ಒಂದು ಕಾಲದ ಪ್ರೇಯಸಿಯಾದ ಸುಲೋಚನೆ—ನೀನು ಪ್ರೇಮಪುರಸ್ಸರವಾಗಿ ಎದುರುಗೊಳ್ಳುತ್ತಲಿದ್ದ ಸುಲೋಚನೆ—ಈಗಲೂ ದುರ್ದೈವದಿಂದ ಜೀವಂತಳಾಗಿಯೇ ಇದ್ದಾಳೆ. ಜಂಗ ಬಹದ್ದೂರನಾಗಿ ನೀನು ಟೀ ಪಾರ್ಟಿಗೆ ಬಂದಾಗ ಅವಳೇ ನಿನ್ನನ್ನು ಪ್ರಥಮ ದರ್ಶನದಲ್ಲಿ ಗೊತ್ತುಹಚ್ಚಿದಳು. ಆಗ ಅವಳ ಹೃದಯದಲ್ಲಿ ಪ್ರೇಮಪ್ರವಾಹವು ಅಣಕಟ್ಟು ಬಿಚ್ಚಿಹೋದ ನೀರಿನ ಪ್ರವಾಹದಂತೆ ಉಕ್ಕೇರಿ ಬಂತು. ಆ ಪೂರ್ವದ ಪ್ರೇಮವೇ ಅವಳ ಕಣ್ಣಿಗೆ ದಿವ್ಯಾಂಜನವನ್ನು ಹಚ್ಚಿತು. ಆ ಸ್ವರ, ಧೀರತನದ ನೋಟ—ಆ ಮಂದಹಾಸ, ಆ ಗಂಭೀರವಾದ ನಡಿಗೆ, ಈಗ ಸುಮಾರು 20 ವರ್ಷಗಳು ದಾಟಿದರೂ ಈ ನಾಸಮಯವಾದ ಹೃದಯದಲ್ಲಿ ಇನ್ನೂ ಮಾಸಿ ಹೋಗಿಲ್ಲ. ನಿನ್ನನ್ನು ಟೀ ಪಾರ್ಟಿಯಲ್ಲಿ ನೋಡಿದಂದು

ನಿಂದ, ನಿನ್ನ ಚಲನವಲನಗಳನ್ನು ಭಯಭಕ್ತಿಯಿಂದ ಅವಳೇ ವಿಚಾರಿಸಿ ಕೊಳ್ಳುತ್ತಾ ಇದ್ದಳು. ಅವಳ ಪ್ರೀತಿಯ ಮಗನಾದ ರಘುನಾಥನ ಪ್ರಾಣವನ್ನು ಕಳ್ಳರ ಕೈಯಿಂದ ನೀನೇ ಬಿಡಿಸಿದೆ ಎಂದು ಅವಳಿಗೆ ನಿನ್ನಲ್ಲಿದ್ದ ಅಭಿಮಾನವು ಹಲವು ಪಟ್ಟು ಏರಿತ್ತು.

**ಜಂಗ**:—ಅದೆಲ್ಲ ಗತಿಸಿ ಹೋದ ಅವತಾರದ ದೃಶ್ಯ. ಅದನ್ನೆಲ್ಲ ಪುನಃ ಸ್ಮರಣೆಗೆ ತರುವುದರಿಂದ ಪುರುಷಾರ್ಥವೇನು? ವಿಸ್ಮೃತಿಯ ಸಾಗರದಲ್ಲಿ ಭಾರವಾದ ಕಲ್ಲು ಕಟ್ಟಿ ಆಳಕ್ಕೆ ತುಳಿದ ಆ ವಿಚಾರಗಳನ್ನು ಈಗ ಪುನಃ ಪಾತಾಳಗರುಡಯಿಂದ ಮೇಲಕ್ಕೆ ಎತ್ತುವ ಸಾಹಸವೇತಕ್ಕೆ?

**ಸುಲೋಚನೆ**:—ಆಗಿ ಹೋದ ಅವತಾರಗಳೆಂದು ಭಕ್ತರಾದವರು ಮರೆಯುತ್ತಾರೆಯೆ? ನನ್ನ ಪಾಲಿಗೆ ನೀನೊಂದು ಅವತಾರವೇ ಸರಿ. ದಯಾಮಯವಾದ ಅವತಾರವು ಎಲ್ಲಿಯೂ ತನ್ನ ನಿಜ ಭಕ್ತರನ್ನು ಮರೆಯುವುದುಂಟೇ ತ್ರೈಲೋಕ್ಯನಾಥ! ನಿನ್ನ ಕೋಪಾಗ್ನಿಯಿಂದ ನನ್ನ ಒಬ್ಬನೇ ಮಗನನ್ನು ದಹಿಸಬೇಡ. ನರಸಿಂಹ ಮೂರ್ತಿಯು ಹಿರಣ್ಯಕಶಪುವನ್ನು ಮಾತ್ರ ನಾಶಮಾಡಿದನಲ್ಲದೆ ಪ್ರಹ್ಲಾದನನ್ನೂ ನಾಶಮಾಡುವುದಕ್ಕೆ ಕೈಯೆತ್ತಿದನೇ?

**ಜಂಗ**:—ನಿನ್ನ ಮಗನನ್ನು ನನ್ನ ರೋಷಕ್ಕೆ ನಾನು ಬಲಿಇಕ್ಕುವೆನೆಂದು ನೀನು ಹೇಗೆ ತಿಳಿದೆ?

**ಸುಲೋಚನೆ**:—ತನ್ನ ಮುದ್ದುಮಗುವಿಗೆ ಬರುವ ಅಪಾಯವನ್ನು ತಾಯಿಯಾದವಳು ಮಾತೃಸ್ನೇಹದಿಂದ ಗೊತ್ತುಹಚ್ಚಲು ಬಲ್ಲಳು. ಇನ್ನೂ ನಿದರ್ಶನಗಳು ಬೇಕಾಗಿದ್ದರೆ ನಿನ್ನ ಮೇಜಿನ ಮೇಲೆ ಬಾರುಮಾಡಿಟ್ಟ ಪಿಸ್ತೂಲುಗಳೇ ಹೇಳುತ್ತಿವೆ. ಕಮಿಶನರ ಬಳಿಯಲ್ಲಿ ನಿಮ್ಮ ಅಯೋಷೆಯು ದೋಷಾರೋಪವನ್ನು ಮಾಡುವಾಗ ನನ್ನ ಮಗನು ಇಲ್ಲಿ ಇರಬಾರದೆಂದೇ ನೀನು ಅವನನ್ನು ಮಹಾಬಲೇಶ್ವರಕ್ಕೆ ಕರೆದುಕೊಂಡೊಯ್ದೆ.

**ಜಂಗ**:—ಇದು ಶುದ್ಧ ತಪ್ಪುಗ್ರಹಿಕೆ. ನನ್ನೊಡನೆ ರಘುನಾಥನನ್ನು ಕರೆದುಕೊಂಡು ಹೋಗಬೇಕೆಂದು ಗಿರಿಧರಲಾಲನೇ ಸೂಚಿಸಿ

ದನು. ಕಮ್ಮಿಶನರ ಬಳಿಯಲ್ಲಿ ದ್ವಾರಕಾನಾಥನ ಮೇಲೆ ಆರೋಪವನ್ನು ತರಲಿಕ್ಕೆ ಆಯೋಷೆಗೆ ನಾನೇನೂ ಪ್ರೇರೇಪಿಸಲಿಲ್ಲ. ಪತ್ರಿಕೆಗಳಲ್ಲಿಯ ಬಾತಮಿಗಳನ್ನು ಕಂಡೊಡನೆ ನಾನು ಇಲ್ಲಿ ಇಲ್ಲದ ವೇಳೆಯಲ್ಲಿ ಅವಳೊಬ್ಬಳೇ ಕಮ್ಮಿಶನರನ್ನು ಕಂಡಳು.

**ಸುಲೋಚನೆ:**— ಆದರೆ ಗಿರಿಧರನ ತಂತಿ ವರ್ತಮಾನದಿಂದ ನನ್ನ ಮಗನು ಈ ಊರಿಗೆ ಹಿಂತಿರುಗಿದಾಗ, ಆತನೊಡನೆ ನೀನೂ ಹಿಂತಿರುಗಿ ಬಂದು ಈ ರೀತಿಯಲ್ಲಿ ಸನ್ನದ್ಧನಾಗಿರುವುದನ್ನು ಕಂಡು ನನ್ನ ಊಹನೆಯು ತಪ್ಪಾಗಿಲ್ಲವೆಂದೇ ನನಗೆ ತೋರುತ್ತದೆ.

**ಜಂಗ:**— ಅಷ್ಟರ ಮಟ್ಟಿಗೆ ನಿನ್ನ ಊಹನೆ ಸರಿ ಎನ್ನುವ. ಆದರೆ ಪಾಪದ ಆಯೋಷೆ ಮಾಡಿದ ಕೆಲಸದಲ್ಲಿ ತಪ್ಪೇನಿದೆ? ತನ್ನ ತಂದೆಯನ್ನು ಕೊಂದು ತನ್ನ ಸ್ಥಿತಿಯನ್ನೇ ದೆಸೆಗೆಡಿಸಿದವನ ಗುಟ್ಟು ಬಯಲುಮಾಡಿದ್ದು ಅವಳ ದೋಷವೆ? ಒಂದು ವೇಳೆ ಅದರಲ್ಲಿ ನನಗೇನು ಸಂಬಂಧವಿದೆ ಎಂದು ನೀನು ಕೇಳುವುದಾದರೆ, ಕುಹಕದಿಂದ ನನ್ನನ್ನು ಮನೆಯಿಂದ ತಪ್ಪಿಸಿ, ನನ್ನ ಪ್ರಿಯತಮೆಯನ್ನು ನಾನಿಲ್ಲದ ವೇಳೆಯಲ್ಲಿ ಹಾರಿಸಿಕೊಂಡು ಹೋದ ಆ ಅಧಮನ ಮೇಲೆ ನನ್ನ ಸೇಡನ್ನು ತೀರಿಸಬೇಡವೆ?

**ಸುಲೋಚನೆ:**— ಅಂಥ ಸೇಡಿಗೆ ಪತಿಸತಿಗಳಿಬ್ಬರೂ ಬಲಿ ಬಿದ್ದರೇ ಸಾಲದೇ! ಅವರ ಪ್ರಾಣಾರ್ಪಣೆಗೆ ಮಗನನ್ನು ಕೊಡಬೇಕೇ? ಪಾಪದ ಆ ಮಗು ಏನು ತಪ್ಪು ಮಾಡಿದೆ?

**ಜಂಗ:**— ಅದನ್ನು ಕೇಳುವೆಯಾ? ನಾನು ಈ ದೇಶದಿಂದ ಫಕ್ಕನೆ ಹೇಗೆ ಮಾಯವಾದೆ ಎಂದು ನೀನು ಬಲ್ಲೆಯಾ?

**ಸುಲೋಚನೆ:**— ಹೌದು. ಆ ವಿಶ್ವನಾಥ ಪಂತರ ಮನೆಯ ದರೋಡೆ ಕೊಲೆಗಳ ಅಪವಾದಕ್ಕೆ ಗುರಿಯಾಗಿ ನೀನು ದೀರ್ಘಕಾಲ ದ್ವೀಪಾಂತರ ಬಂಧನೆಯನ್ನು ಅನುಭವಿಸಿದೆ ಎಂದು ತಿಳಿದೆ.

**ಜಂಗ:**— ಅದಕ್ಕೆ ಕಾರಣಭೂತರು ಯಾರು? ಹೇಳಬಲ್ಲೆಯಾ?

**ಸುಲೋಚನೆ:**— ನಿಂದಿತವಾಗಿಯೂ ಇಲ್ಲ.

**ಜಂಗ:**— ನಿನ್ನ ಯದುಕುಲನಾಥನೆ ಅದಕ್ಕೆ ಕಾರಣನು. ನಮ್ಮ ಮನೆಯಲ್ಲಿರುವ ಗಂಗಾರಾಮನಿಗೆ ಬಂಗಿಯ ಪಾನಕವನ್ನು ಕುಡಿಸಿ

ಆತನು ಅಮಲಿನಲ್ಲಿದ್ದಾಗ ಅವನಿಂದ ಸುಳ್ಳು ವರದಿಯನ್ನು ಬರೆಯಿಸಿ ಕೊಂಡು, ಗಂಗಾರಾಮನ ಸಹಿಯನ್ನು ಹಾಕಿಸಿ, ಆ ಯದುಕುಲನಾಥನೇ ಪೋಲೀಸಿನವರ ಕೈಗೆ ಆ ಪತ್ರವನ್ನು ಒಪ್ಪಿಸಿದನು. ಈ ಒಳಸಂಚಿನಲ್ಲಿ ವಿಶ್ವನಾಥ ಪಂತರ ಪಾರುಪತ್ಯಗಾರನಾದ ನಂದೂಲಾಲನೂ— ಈಗ ಇಲ್ಲಿ ಹುಂಡೀ ಸಾಹುಕಾರನಾಗಿ ನಂದೂಲಾಲ್ ಸೇಟ್ ಅನ್ನಿಸಿಕೊಳ್ಳುವವನು— ಸೇರಿಕೊಂಡಿದ್ದನು.

**ಸುಲೋಚನೆ**:— ಅದು ನಿನಗೆ ಹೇಗೆ **ಗೊತ್ತಾ**ಯಿತು?

**ಜಂಗ**:— ಪೆಟ್ಟಿಗೆಯ ಬಾಗಿಲನ್ನು ತೆರೆದು ಒಂದು ಲಕೋಟೆಯನ್ನು ಎತ್ತಿ "ಇಗೊ ಇದರೊಳಗಿರುವ ಪತ್ರವನ್ನು ಓದು" ಎಂದು ಆಕೆಯ ಕೈಗೆ ಕೊಟ್ಟನು. ಸುಲೋಚನೆ ಅದನ್ನು ಓದಿ "ಸರಿ ಸರಿ! ಇದರಲ್ಲಿ ಗಂಗಾರಾಮನು ಸಂಪೂರ್ಣ ಸಮಾಚಾರವನ್ನು ಬರೆದಿರುವನು" ಎಂದಳು.

**ಜಂಗ**:— ಗಂಗಾರಾಮನೇ ಈ ಸಮಾಚಾರವನ್ನು ನಾನು ಸಾಂಗಲಿಗೆ ಹೋದಾಗ ನನಗೆ ಹೇಳಿ ಬರೆಯಿಸಿ ತನ್ನ ಸಹಿಯನ್ನು ಕೊಟ್ಟಿರುವನು. ಅದಿರಲಿ. ಆ ಕೊಲೆ ದರೋಡೆಗಳಿಗೆ ನಾನೇ ಕಾರಣನೆಂದು ನೀನಾದರೂ ನಂಬಿದೆಯಾ?

**ಸುಲೋಚನೆ**:— ತ್ರೈಲೋಕ್ಯನಾಥ! ಈ ವೇದನಾತ್ಮಕವಾದ ಪ್ರಶ್ನೆಯಿಂದ ಮೊದಲೆ ಜರ್ಝರಿತವಾದ ನನ್ನ ಹೃದಯವನ್ನು ಇನ್ನೇತಕ್ಕೆ ತಿವಿಯುವೆ? ನೀನು ಅಪರಾಧಿಯಲ್ಲವೆಂದೂ ನಿನಗೆ ಬೇಗನೆ ಬಂಧ ವಿಮೋಚನೆಯಾಗಬೇಕೆಂದೂ ನಾನು ದೇವರೊಡನೆ ಎಷ್ಟೋ ಸಲ ಮೊರೆಯಿಟ್ಟೆನು. ಎಷ್ಟೊ ಹರಿಕೆಗಳನ್ನು ಹೊತ್ತೆನು. ಎಷ್ಟೊ ವ್ರತ ಉಪವಾಸಗಳನ್ನು ಆಚರಿಸಿದೆನು. ನಿನ್ನನ್ನು ಅಗಲಿದ ಐದು ವರ್ಷಗಳ ವರೆಗೆ ವಿವಾಹಕ್ಕೆ ನಾನು ಸಮ್ಮತಿಸಲಿಲ್ಲ. ವಿಧವೆಯಾಗಿದ್ದ, ನನ್ನ ರಕ್ಷಕಳಾದ ತಾಯಿಯೂ ಪರಲೋಕವನ್ನೈದಿದಳು. ಆ ಮೇಲೆ ನೀನು ಜನ್ಮಾಂತ ಶಿಕ್ಷೆಯನ್ನು ಹೊಂದಿದ ಕಾರಣ ಇನ್ನೂ ನಮ್ಮ ದೇಶಕ್ಕೆ ಹಿಂತಿರುಗಿ ಬರಲಾರೆಯೆಂದು ನಂಬಿಸಿ ನಿರಾಲಂಬಳಾದ ನನ್ನನ್ನು ಈ ವಿವಾಹಕ್ಕೆ ಸಮ್ಮತಿಸುವಂತೆ ಮಾಡಿದರು.

**ಜಂಗ**:—ಕಾರಾಗೃಹವಾಸವನ್ನು ಎಷ್ಟು ಕಾಲದ ವರೆಗೆ ಅನುಭವಿಸಿದೆ ಎಂದು ತಿಳಿದೆಯಾ?

**ಸುಲೋಚನೆ**:—ಇಲ್ಲ! ಇಲ್ಲ!

**ಜಂಗ**:—ಅಖಂಡ ಹದಿನಾಲ್ಕು ವರ್ಷಗಳ ವರೆಗೆ ಕಾರಾಗೃಹವಾಸವನ್ನು ಅನುಭವಿಸಬೇಕಾಯಿತು. ಆ ಮೇಲೆ ಕೇಳು ಕಥೆಯನ್ನು. ಅಲ್ಲಿ ಒಬ್ಬ ವೃದ್ಧ ಕೈದಿಯಿದ್ದನು. ಎಲ್ಲರೂ ಆತನನ್ನು ಹುಚ್ಚನೆಂದು ಭಾವಿಸಿದ್ದರು. "ನಿನ್ನ ನಿಕ್ಷೇಪದಲ್ಲಿ ನನಗೇನು ಪಾಲು ಕೊಡುವೆ?" ಎಂದು ಆತನನ್ನು ಗೇಲಿ ಮಾಡುತ್ತಿದ್ದರು. ಆ ಮುದುಕನು ಮಾತ್ರ "ಒಮ್ಮೆ ನನ್ನ ಬಂಧ ವಿಮೋಚನೆ ಮಾಡಿರಿ. ನಿಶ್ಚಿಂತೆಯಿಂದ ನಿಮ್ಮ ಜೀವಕಾಲವನ್ನು ಕಳೆಯುವಂತೆ ನಿಮಗೆ ಧನ ಸಂಚಯವನ್ನು ಕೊಡುವೆನು" ಎಂದು ಅವರ ಕಿವಿಯಲ್ಲಿ ಹೇಳುತಿದ್ದನು. ಈ ಮಾತುಗಳನ್ನು ಯಾರೂ ಯಥಾರ್ಥವೆಂದು ನಂಬಿದ್ದಿಲ್ಲ, ಜನರು ಆತನಿಗೆ ಹೀಗೆ ಪೀಡಿಸುವುದು ನನಗೆ ಒಗ್ಗಲಿಲ್ಲ. "ಅವನು ಹುಚ್ಚನು, ಆತ್ಮಘಾತವನ್ನು ಮಾಡಿಕೊಂಡಾನು" ಎಂದು ಆತನಿಗೆ ಕಾಲಿಗೆ ಬೇಡಿಗಳನ್ನು ಹಾಕಿ ಒಂದು ಕೊಠಡಿಯಲ್ಲಿರಿಸುತಿದ್ದರು. ನಾನೊಬ್ಬನೆ ಆತನಿಗೆ ಗೇಲಿಮಾಡದೆ ದಯಾಭಾವದಿಂದ ಕಾಣುತಿದ್ದೆನು. ಹೀಗಾಗಿ ದೈವವಶಾತ್ ಆತನಿಗೆ ನನ್ನ ಮೇಲೆ ಒಂದು ಬಗೆಯ ವಾತ್ಸಲ್ಯವುಂಟಾಯಿತು. ನಾನು ಮಲಗುವ ಕೋಣೆಯು ಆತನ ಕೋಣೆಯ ಒತ್ತಿನದಾಗಿತ್ತು. ರಾತ್ರೆಯಲ್ಲಿ ಒಂದು ದಿನ ನಾನು ಮಲಗಿದ ಚಾಪೆಗೆ ಒತ್ತಾಗಿ ಗೋಡೆಯಲ್ಲಿ ಏನೋ ಶಬ್ದವಾದಂತೆ ಕೇಳಿಸಿತು. ಕಿವಿಗೊಟ್ಟು ಕೇಳಿದೆನು. ಮೂರು ಸಲ ತಟ್ಟಿದಂತಾಯಿತು. ಇದೇನೆಂದು ಜಗ್ಗನೆ ನಾನು ಚಾಪೆಯಿಂದ ಎದ್ದೆನು. ಅತ್ತಿತ್ತ ನೋಡಿದರೂ ಏನೂ ಕಾಣಿಸಲಿಲ್ಲ. ಅಷ್ಟರಲ್ಲಿ ಕೆಲವು ನಿಮಿಷಗಳಲ್ಲಿ ಗೋಡೆಯ ಒಂದು ಇಟ್ಟಿಗೆಯು ಪುಸಕ್ಕನೆ ಜಾರಿ ಕೆಳಕ್ಕೆ ಬಂದಂತಾಯಿತು. ಇದೇನೆಂದು ಆಶ್ಚರ್ಯದಿಂದ ನಾನು ನೋಡುತ್ತಿದ್ದೆ. ಒಂದು ಮುದಿ ಕೈಯನ್ನು ಆ ತೂತಿನೊಳಗಿಂದ ನನ್ನ ಕೋಣೆಯೊಳಕ್ಕೆ ಚಾಚಿದಂತಾಯಿತು. ಅನಂತರ ಮುದುಕನು "ಹೆದರಬೇಡ! ನಿನ್ನೊಡನೆ ಮಾತುಕಥೆ ನಡೆಸಬೇಕೆಂದು ನನಗೆ ತುಂಬಾ ಆತುರವಿದೆ"

ಎಂದನು. ಆ ಮೇಲೆ ತಾನು ಇಟ್ಟಿಗೆಯನ್ನು ಜಾರಿಸಲಿಕ್ಕೆ ಸುಣ್ಣದ ಗಚ್ಚನ್ನು ಕೊರೆದು ದಿನವಹಿ ತೆಗೆಯುತಿದ್ದೆನೆಂತಲೂ ಆ ದೂಳನ್ನು ಕಿಟಿಕಿಯೊಳಗಿಂದ ಹೊರಗೆ ಗಾಳಿಗೆ ಬಾಯಿಂದ ಊದಿ ಹಾರಿಸುತಿದ್ದೆನೆಂತಲೂ ಇದಕ್ಕೆ ಒಂದು ವರ್ಷಕಾಲ ತಗಲಿತೆಂತಲೂ ಹೇಳಿದನು. ಅನಂತರ ನಾನೂ ಅವನೂ ರಾತ್ರೆಯಲ್ಲಿ ಕೆಲಸ ಮಾಡುತ್ತಾ ಒಬ್ಬ ಮನುಷ್ಯನು ಪಾರಾಗಿ ಹೋಗುವಷ್ಟು ತೂತನ್ನು ಮಾಡಿದೆವು. ಆ ಇಟ್ಟಿಗೆಗಳನ್ನು ಮಾತ್ರ ದಿನವಹಿ ಒಂದರ ಮೇಲೆ ಒಂದನ್ನು ಇಟ್ಟು ಪಹರೆಯವರಿಗೆ ಸಂಶಯ ಬಾರದಂತೆ ನಮಗೆ ಕುಡಿಯಲಿಕ್ಕೆ ಕೊಡುವ ನೀರನ್ನು ಕಲಸಿ ದಿನಂಪ್ರತಿ ಮಾಡಿದ ಸುಣ್ಣದ ಗಚ್ಚಿನಿಂದ ಸಂದುಗಳನ್ನು ಹೊರಬದಿಗೆ ಮುಚ್ಚುತಿದ್ದೆವು. ಅದರಲ್ಲಿ ಅಂಟಿಲ್ಲದುದರಿಂದ ರಾತ್ರೆಯಲ್ಲಿ ಅವನ್ನು ಕಳಚಿ ನಾವು ಒಂದೇ ಕೋಣೆಯಲ್ಲಿ ಸೇರುತಿದ್ದೆವು. ಆಗ ಅವನು ಒಂದು ದಿನ ತನ್ನ ಪೂರ್ವ ವೃತ್ತಾಂತವನ್ನು ಹೇಳಿದನು. ಅವನು ಹೆಸರುವಾಸಿಯಾದ ಜೋಯಿಸನಾಗಿದ್ದನಂತೆ. ಸಾಂಗಲಿಗೆ 10 ಮೈಲು ದೂರದಲ್ಲಿ ಆತನ ಮನೆಯಿತ್ತಂತೆ. ಒಂದು ದಿನ ಆತನು ನಾಗರವಳ್ಳಿಯ ಸಮೀಪದ ಕಾಡಿನಲ್ಲಿ ಸಂಚರಿಸುವಾಗ ಒಂದು ದೊಡ್ಡ ವಿಚಿತ್ರವಾದ ಗವಿಯು ಕಾಣಿಸಿತಂತೆ. ಅದರ ಬಾಯಿಯನ್ನು ಬಲವಾದ ಬಂಡೆಕಲ್ಲುಗಳಿಂದ ಮುಚ್ಚಿದ್ದರಂತೆ. ಅದರ ಮುಂದುಗಡೆ ಹಾಸುಕಲ್ಲಿನಲ್ಲಿ ದೇವನಾಗರಿಯಲ್ಲಿ ಒಂದು ಶ್ಲೋಕವನ್ನು ಕೆತ್ತಿತ್ತು. ಆ ಶ್ಲೋಕವನ್ನು ಆತನು ಬರೆದುಕೊಂಡು ಬಾಯಿಪಾಠ ಮಾಡಿದನು. ಅದರಲ್ಲಿ ಕೆಲವು ಜೀವಾಕ್ಷರಗಳು ಇರುವ ಕೊನೆಯು ತುಂಡಾಗಿದ್ದುದರಿಂದ ಆ ಅಕ್ಷರಗಳೇನೆಂದು ಓದಲಾಗದೆ ಆತನು ಅವನ್ನು ಗೊತ್ತು ಹಚ್ಚಲು ಯತ್ನಿಸಿದನು. ಅವನು ಮಂತ್ರಮೋಡಿಗಳನ್ನು ಬಲ್ಲವನೆಂದು ಗೊತ್ತಾಗಿ ಅವನ ಕೆಲವು ವಿರೋಧಿಗಳು ಎಲ್ಲಿಯೊ ಆದ ಒಂದು ದರೋಡೆ ಮತ್ತು ಕೊಲೆಯನ್ನು ಆತನು ಮಾಡಿಸಿದ್ದನೆಂದು ಸುಳ್ಳು ಸಾಕ್ಷಿ ನುಡಿಸಿ ಆತನಿಗೆ ದ್ವೀಪಾಂತರವಾಸಕ್ಕೆ ಅಟ್ಟಿದ್ದರು. ಅವನು ನನಗಿಂತ ಹತ್ತು ವರ್ಷ ಹಿಂದೆ ಅಲ್ಲಿಗೆ ಬಂದಿದ್ದನು. ಅವನು ಬಂದ ದಿನದಿಂದ ಗೋಡೆಯಲ್ಲಿ ದಿನಕ್ಕೊಂದು ಗುರುತು ಹಾಕಿ ಇಂತಿಷ್ಟೆ ವರ್ಷಗಳಾದುವು ಎಂದು ಗೊತ್ತುಮಾಡಿದ್ದನು. ಅವನು ಈ ಶ್ಲೋಕವನ್ನು ಮರೆಯದೆ ಹೇಳು

ತ್ತಿದ್ದನು. ಒಂದು ದಿನ ಆ ಜೀವಾಕ್ಷರಗಳು ಆ ಶ್ಲೋಕದಲ್ಲಿ ಫಕ್ಕನೆ ಇಂಥವೆ ಇರಬಹುವೆಂದು ಆತನಿಗೆ ಹೊಳೆಯಿತು. ಆಗ ಆ ಶ್ಲೋಕದ ಅರ್ಥವನ್ನು ಮಾಡಿದಾಗ ಮರಾಟೆಯವರ ಅವನತಿಯ ಕಾಲದಲ್ಲಿ ನಾನಾರಾವ ಪೇಶ್ವೆಯನ್ನು ಕೊಲೆಮಾಡಿದವರು, ಅಂದು ಅರಮನೆ ಯಿಂದ ಹೇರಳ ದ್ರವ್ಯವನ್ನು ಜವಾಹೀರುಗಳನ್ನು ಕದ್ದೊಯ್ದರೆಂದೂ, ಅದನ್ನು ಗವಿಯಲ್ಲಿರಿಸಿ ಶಿಲೆಯಿಂದ ಮುಚ್ಚಿ ಆ ಶ್ಲೋಕವನ್ನು ಕೆತ್ತಿಸಿದ ರೆಂದೂ ಗೊತ್ತಾಯಿತು. ಅನಂತರ ಅವರು ಆ ಸಂಪತ್ತನ್ನು ಅಲ್ಲಿಂದ ತಪ್ಪಿಸುವುದಕ್ಕೆ ಏನು ಅಡಚಣೆ ಬಂತೆಂದು ಆತನಿಗೆ ತಿಳಿಯಲಿಲ್ಲ. ಅಂತು ಆ ಗವಿಯಲ್ಲಿ ಕೋಟ್ಯಾವಧಿ ರೂಪಾಯಿ ಬೆಲೆಯ ಧನವಿದೆಯೆಂದು ಆತನು ನಂಬಿದ್ದನು. ಹೀಗೆ ದಿನವಹಿ ನಾವು ಒಂದೇ ಕೋಣೆಯಲ್ಲಿ ಸುಖಗೋಷ್ಟಿಯನ್ನು ಆಡುತ್ತ ಇದ್ದು ಅವನು ನನ್ನನ್ನು ತನ್ನ ಮೊಮ್ಮಗ ನಂತೆ ಪ್ರೀತಿಸತೊಡಗಿದನು.

ಕೆಲವು ದಿನಗಳಲ್ಲಿ ಆತನಿಗೆ ಅಕಸ್ಮಾತ್ತಾಗಿ ಕಾಯಿಲೆ ಪ್ರಾರಂಭ ವಾಗಿ ತನ್ನ ಅವಸಾನವು ಸಮೀಪಿಸಿತೆಂದು ಆತನು ತಿಳಿದನು. ಈ ಗವಿಯ ಶ್ಲೋಕವನ್ನು ನನಗೆ ಆತನು ಮೊದಲೇ ಬಾಯಿಪಾಠ ಮಾಡಿಸಿ ದ್ದನು. “ಮಗೂ, ನಿನಗಿನ್ನೂ ವಯಸ್ಸು ಮೀರಿಲ್ಲ. ಆಸೆಗೆ ಪಾರವಿಲ್ಲ, ಮನವೇ ಸ್ಥೈರಿಸು. ಹೇಗಾದರೂ ಮಾಡಿ ಇಲ್ಲಿಂದ ತಪ್ಪಿಸಿಕೊಂಡುಹೋಗಿ ಆ ವಿಪುಲ ಧನವನ್ನು ನಿನ್ನದಾಗಿ ಮಾಡಿಕೊ” ಎಂದನು. ಆಗ ನಾವಿ ಬ್ಬರೂ ನನ್ನ ಬಿಡುಗಡೆಯ ಬಗೆ ಹೇಗೆಂದು ಆಲೋಚನೆ ಮಾಡಿದೆವು. ವೃದ್ಧನು ಮರಣೋನ್ಮುಖನಾಗಿದ್ದರೂ, ವಿಚಕ್ಷಣನಾಗಿದ್ದನು. ಅಪೂ ರ್ವವಾದೊಂದು ಹಂಚಿಕೆಯನ್ನು ಆತನೆ ನನಗೆ ತಿಳಿಸಿದನು. ಆ ದ್ವೀಪ ದಲ್ಲಿ ಸತ್ತವರ ದೇಹಗಳನ್ನು ಉದ್ದವಾದ ಚೀಲಗಳಲ್ಲಿ ತುಂಬಿಸಿ ಸಮುದ್ರ ದಲ್ಲಿ ಎಸೆದು ಬಿಡುತಿದ್ದರು. ದ್ವೀಪವು ಸಣ್ಣದಾದುದರಿಂದ ಅಲ್ಲಿ ನೆಲ ದಲ್ಲಿ ಶವಗಳನ್ನು ಹುಗಿಯುತಿದ್ದಿಲ್ಲ. ಅನಂತರ ಎರಡು ದಿನಗಳಲ್ಲಿಯೇ ಮುದುಕನು ಪ್ರಾಣವನ್ನು ನೀಗಿದನು. ಒಂದು ಉದ್ದವಾದ ಚೀಲದಲ್ಲಿ ಆತನ ದೇಹವನ್ನು ಸುತ್ತಿ ಇಡುವಂತೆ ನನಗೆ ಪಹರೆಯವರು ಹೇಳಿದರು. ಅಷ್ಟು ಮಾಡುವುದರೊಳಗೆ ಸಾಯಂಕಾಲವಾದುದರಿಂದ ನಮ್ಮ ಕೋಣೆ ಯ ಹೊರ ಜಗಲಿಯಲ್ಲಿ ಆ ದೇಹವನ್ನು ಇಟ್ಟು ಪಹರೆಯವರು ತಮ್ಮ

ಬಿಡಾರಗಳಿಗೆ ಹಿಂತಿರುಗಿದನು. ರಾತ್ರಿ ನನ್ನ ಕೋಣೆಗೆ ಬೀಗ ಹಾಕಲಿಕ್ಕೆ ದೈವವಶಾತ್ ಪಹರೆಯವರು ಮರೆತಿದ್ದರು. ಹೀಗಾಗಿ ಆ ದೇಹವನ್ನು ಎಲ್ಲರೂ ನಿದ್ದೆ ಹೋದ ಮೇಲೆ ನಾನೊಬ್ಬನೇ ಎತ್ತಿಕೊಂಡು ಹೋಗಿ ಕಡಲಿಗೆ ಎಸೆದೆನು. ಆ ಮೇಲೆ ಆ ಚೀಲದ ಒಂದು ತುದಿಯನ್ನು ಬಿಡಿಸಿಕೊಂಡು, ನಾನೇ ಅದರೊಳಗೆ ಸೇರಿ, ಒಳಗಿನಿಂದ ಬಿಗಿದು ಬಿಟ್ಟೆನು. ಒಂದು ಚೂರಿಯನ್ನು ಚೀಲದೊಳಗೆ ಇಟ್ಟುಕೊಂಡಿದ್ದೆನು. ಅಷ್ಟರಲ್ಲಿ ಬೆಳಕು ಹರಿಯತೊಡಗಿತು. ಪಹರೆಯವರು ಆ ಚೀಲವನ್ನು ಹೊತ್ತುಕೊಂಡು ಕಡಲ ದಡಕ್ಕೆ ಹೋದರು. ಕಡಲ ತೆರೆಗಳು ದಡದ ಬಂಡೆಕಲ್ಲಿಗೆ ಅಪ್ಪಳಿಸುವ ಶಬ್ದವು ನನಗೆ ಚೆನ್ನಾಗಿ ಕೇಳಿಸುತಿತ್ತು. ನನ್ನ ಬಂಧನದಿಂದ ಬಿಡುಗಡೆಯ ಕಾಲ ಸಮೀಪಿಸಿತೆಂದು ನನಗೆ ಬೋಧೆಯಾಯಿತು. ಆದರೆ ಇನ್ನೊಂದು ಲೋಕಕ್ಕೋ, ಅಥವಾ ಕಡಲ ಆಚೆಗೆ ಇರುವ ಭೂಪ್ರದೇಶಕ್ಕೋ ಎಂಬುವನ್ನು ನಿರ್ಣಯಿಸುವುದು ವಿಧಿಯ ಕೈಯಲ್ಲಿ ಇತ್ತು. ಮನುಷ್ಯನ ಆರಿಗೆ ಪಾರವೇ ಇಲ್ಲ. ಆದ್ದರಿಂದ ದಿಗಿಲುಪಡದೆ 'ಆಸೆಗೆ ಪಾರವಿಲ್ಲ, ಮನವೇ ಸ್ಥೈರಿಸು' ಎಂದು ಸಮಾಧಾನಮಾಡಿಕೊಳ್ಳುತ್ತಾ, ಭಗವಂತನನ್ನು ಸ್ಮರಿಸುತ್ತಾ, ಮೈಯನ್ನು ಅಲುಗಿಸದೆ ಬಿದ್ದುಕೊಂಡೆನು. ಒಂದೇ ರಾತ್ರಿಯ ಒಳಗೆ ಮುದುಕನ ದೇಹವು ಊದಿ ಬಿಟ್ಟಿಂತಿದೆ. ನಿನ್ನೆಗಿಂತಲೂ ಭಾರವಾಗಿ ಕಾಣುತ್ತಿದೆ ಎಂದು ಪಹರೆಯವನೊಬ್ಬನು ನನಗೆ ಕೇಳುವಂತೆ ಗುಣುಗುಟ್ಟುತಿದ್ದನು. ನನ್ನ ಗುಟ್ಟು ಬಯಲಾದೀತೇ ಎಂದು ನನಗೆ ಎದೆಯು ಧಸಕ್ಕೆಂದಿತು. ಅಷ್ಟರಲ್ಲಿ ಪಹರೆಯವರು ಚೀಲವನ್ನು ಕಡಲಿಗೆ ಎಸೆದು ಬಿಟ್ಟರು. ಅವರೊಳಗೊಬ್ಬನು "ಹೋಯಿತು ಒಂದು ಮುಲಾಮತು, ಇದ್ದವರು ಸಲಾಮತು" ಎಂದು ತಮಾಷೆ ಮಾಡುತ್ತಾ ಬೊಬ್ಬಿಟ್ಟು ಹಿಂತಿರುಗಿದನು. ಅವನ ಬೊಬ್ಬೆಯಿಂದ ಪಹರೆಯವರು ನನ್ನನ್ನು ಬಿಟ್ಟು ಹೋದರೆಂದು ನನಗೆ ಸ್ಪಷ್ಟವಾಯಿತು. ಚೀಲದೊಳಗೆ ನೀರು ತುಂಬುವಷ್ಟರೊಳಗೆ ಅದರ ಹೊಲಿಗೆಯನ್ನು ಕಡಿದು ಬಿಡುವುದಕ್ಕೆ ನನಗೆ ಹೆಚ್ಚು ವೇಳೆ ಬೇಕಾಗಲಿಲ್ಲ. ಅಂತೂ ಚೀಲದಿಂದ ತಪ್ಪಿಸಿ ಹೊರಗೆ ಬಂದು, ಜೀವಂತ ಸಮಾಧಿಯಿಂದ ನನ್ನನ್ನು ತಪ್ಪಿಸಿದ ದೇವ

ಥಿಗೆ ಮತ್ತು ನನಗೆ ಸೂಚನೆ ಕೊಟ್ಟ ಮುದುಕ ಕೈದಿಗೆ ವಂದನೆಯನ್ನು ಅರ್ಪಿಸಿ, ಕಡಲಿನಲ್ಲಿ ಈಸಾಡತೊಡಗಿದೆನು. ನನಗೆ ಚೆನ್ನಾಗಿ ಈಸಲು ಬರುತ್ತಿದ್ದುದರಿಂದ ನಾನು ಕಡಲೊಳಗೆ ಬಹು ದೂರದ ವರೆಗೆ ಹೋದೆನು. ಅಷ್ಟರಲ್ಲಿ ಒಂದು ಹಡಗು ಸಮೀಪಿಸಿ, ಈಸುವ ನನ್ನನ್ನು ಕಂಡು ಒಂದು ಹಗ್ಗದ ತುದಿಯನ್ನು ನನ್ನ ಕಡೆಗೆ ಬಿಸಾಡಿತು. ಅದನ್ನು ಹಿಡಿದು ನಾನು ಹಡಗನ್ನೇರಿದೆನು. ನಾನು ಯಾರೆಂದು ಹಡಗಿನ ನಾಯಕನು ಹಿಂದುಸ್ಥಾನಿ ಭಾಷೆಯಿಂದ ನನ್ನನ್ನು ವಿಚಾರಿಸಿದನು. ತುಫಾನಿನಲ್ಲಿ ಮುಳುಗಿದ ಹಡಗಿನ ಕಲಾಸಿಗಳಲ್ಲಿ ನಾನೊಬ್ಬನೆಂದು ಹೇಳಿದೆನು. "ಈಗೆಲ್ಲಿಗೆ ಹೋಗಬೇಕೆಂದಿರುವೆ?" ಎಂದು ಆತನು ಕೇಳಿದನು. "ಮುಂಬಾಯಿ ಪಟ್ಟಣದಲ್ಲಿ ನನಗೆ ಇಳಿಸಿಬಿಟ್ಟರೆ ಮಹದುಪಕಾರ!" ಎಂದು ನಾನು ದೈನ್ಯದಿಂದ ಬೇಡಿದೆನು. ಆ ಹಡಗು ಮುಂಬಯಿಗೆನೇ ಹೋಗುತ್ತಿದ್ದುದರಿಂದ ನಾಯಕನು ಆ ವರೆಗೆ ನನಗೆ ಅನ್ನಾಹಾರಗಳನ್ನೂ ಉಡುಪುಗಳನ್ನೂ ಕೊಟ್ಟನು. ಎಂಟು ದಿವಸಗಳಲ್ಲಿ ನಾವು ಮುಂಬಯಿಗೆ ಮುಟ್ಟಿದೆವು. ಅಲ್ಲಿಂದ ನಾನು ತಿರುಪೆ ಎತ್ತುತ್ತಾ ದಾರಿಯನ್ನು ವಿಚಾರಿಸಿಕೊಂಡು ನಾಗರವಳ್ಳಿಗೆ ಸಮೀಪವಿರುವ ಆ ಗವಿ ಇದ್ದ ಕಾಡಿಗೆ ಹೋಗಿ ಮುಟ್ಟಿದೆನು. ಆ ಶ್ಲೋಕವನ್ನು ಬಾಯಿಪಾಠ ಮಾಡಿದ್ದರಿಂದ ಗವಿಯನ್ನು ಗುರುತಿಸಲಿಕ್ಕೆ ನನಗೆ ವಿಶೇಷ ಕಷ್ಟವಾಗಲಿಲ್ಲ. ಆದರೆ ಗವಿಯ ಬಾಯಿಗೆ ಮುಚ್ಚಿದ ಹಾಸುಕಲ್ಲನ್ನು ಉರುಳಿಸಲಿಕ್ಕೆ ಅನ್ನಾಹಾರವಿಲ್ಲದೆ ಎರಡು ದಿನ ಪೇಚಾಡಬೇಕಾಯಿತು. ಗವಿಯೊಳಕ್ಕೆ ಪ್ರವೇಶಿಸಿದಾಗ ನಾನು ತಂದ ಮಯಣದ ಬತ್ತಿಯ ಬೆಳಕಿನಲ್ಲಿ ವಿಪುಲವಾದ ಧನರಾಶಿಯ ಚೀಲಗಳು ತುಂಬಿದ ಪೆಟ್ಟಿಗೆಗಳು ನನ್ನ ಕಣ್ಣಿಗೆ ಬಿದ್ದವು. ಅವುಗಳಿಂದ ಚಿಕ್ಕದೊಂದು ಚೀಲವನ್ನು ಎತ್ತಿಕೊಂಡು ರಾತ್ರೆ ೮ ಗಂಟೆಯ ಸಮಯಕ್ಕೆ ನಾಗರವಳ್ಳಿಯನ್ನು ಮುಟ್ಟಿದೆನು. ಅಲ್ಲಿ ಒಬ್ಬ ತೀರಾ ಬಡ ಬ್ರಾಹ್ಮಣನೂ ಅವನ ಪತ್ನಿಯೂ ನನ್ನ ಕ್ಷುದ್ಬಾಧೆಯ ನಿವಾರಣೆಗಾಗಿ ಅಖಂಡ ಏಕಾದಶಿ ವ್ರತವನ್ನು ಆಚರಿಸಬೇಕಾಯಿತು. ಅಲ್ಲಿಗೆ ಈ ತ್ರೈಲೋಕ್ಯನಾಥನ ಅವತಾರವು ಸಂಪೂರ್ಣವಾಯಿತು. ಈಗ ಅದನ್ನೆಲ್ಲಾ ಸ್ಮರಣೆಗೆ ತಂದು ಪುರುಷಾರ್ಥವಿಲ್ಲ. ಈಗ ನಾನು ಕುಭೇರ ಪುತ್ರನಂತಿರುವ ಜಂಗಬಹದ್ದೂರ.

**ಸುಲೋಚನೆ:**— ಈಗೇನು? ನಿನ್ನ ಸೇಡನ್ನು ತೀರಿಸುವುದಕ್ಕೆ ಜನಮೇಜಯನಂತೆ ಸರ್ಪಯಾಗವನ್ನು ಮಾಡಲೆಳಸುವೆಯಾ? ತ್ರೈಲೋಕ್ಯನಾಥ! ನಿನ್ನ ಪವಿತ್ರನಾಮುವನ್ನು ನಾನು ಪದೇ ಪದೇ ಉಚ್ಚರಿಸುವಾಗ ನನ್ನನ್ನು ಒಮ್ಮೆಯಾದರೂ ಸುಲೋಚನೆಯೆಂದು ಏತಕ್ಕೆ ಸಂಬೋಧಿಸಲಾರೆ? ನನ್ನ ದೇಹವನ್ನು ಮಾತ್ರ ಇತರರಿಗೆ ಒಪ್ಪಿಸಿದೆನಲ್ಲದೆ ನನ್ನ ಆತ್ಮವೂ ಚಿತ್ತವೂ ಎಂದೋ ನಿನಗೇ ಸಮರ್ಪಣೆಯಾಗಿವೆ. ನಿನ್ನ ಹೃದಯದಲ್ಲಿ ಕರುಣಾರಸದ ಒರತೆಯು ಬತ್ತಿಹೋಗಿ ಅದು ತೀರಾ ಮರುಭೂಮಿಯಾಗಿದೆ ಎಂದು ಒಮ್ಮೆ ನೀನು ಹೇಳಿದ್ದಾದರೂ ನಿಜವೇ? ನಮ್ಮ ಅಪರಾಧಕ್ಕಾಗಿ ನಮ್ಮ ಕುಲವೇ ಅಳಿದು ಹೋಗಬೇಕೆ? ನಿನ್ನ ಪೂರ್ವ ಕಥೆಯನ್ನು ಕೇಳಿದ ಮೇಲಂತು ನನ್ನ ಮನೆಯ ಹೊಸ್ತಿಲನ್ನು ದಾಟಿ ಒಳಗೆ ಇನ್ನು ನಾನು ಕಾಲಿಡಲಾರೆ. ನಾನೂ ನನ್ನ ಒಬ್ಬನೇ ಮಗನೂ ನಮ್ಮ ಜೀವನೋಪಾಯಕ್ಕೆ ಊರೂರು ಅಲೆದು ಬೇಡಿಯಾದರೂ ತಿನ್ನುವೆವು. ಇಷ್ಟಕ್ಕೆ ನಾನು ಸಿದ್ಧಳಿರುವಾಗ ನಮ್ಮ ಅಪರಾಧಕ್ಕೆ ಇಷ್ಟು ಪ್ರಾಯಶ್ಚಿತ್ತವು ಸಾಲದೇ? ಆ ನನ್ನ ಕೋಮಲಕುಮಾರನು ನನ್ನ ಕಣ್ಣ ಮುಂದೆ ಅಪಮೃತ್ಯುವಿಗೆ ಒಳಗಾಗಿ ನಾನೊಬ್ಬಳೇ ಅನಾಥೆಯಾಗಿ ಅಲೆಯಬೇಕೆ? ಇಲ್ಲವಾದರೆ ಖಂಡಿತವಾಗಿ ಹೇಳು; ನಿನ್ನ ಮೇಜಿನ ಮೇಲೆ ಬಾರು ಮಾಡಿಟ್ಟ ಪಿಸ್ತೂಲುಗಳಲ್ಲಿ ಒಂದರಿಂದ ನನ್ನನ್ನೂ ಇನ್ನೊಂದರಿಂದ ಈಗಲೇ ಇಲ್ಲಿಗೆ ಬರುವ ನನ್ನ ಮಗನನ್ನೂ ಏಕಕಾಲದಲ್ಲಿ ಸುಟ್ಟುಬಿಡು. ನಿನಗೆ ಸೆರಗೊಡ್ಡಿ ಬೇಡುತ್ತೇನೆ'' ಎಂದು ಕಣ್ಣೀರು ಸುರಿಸುತ್ತಾ ಬಿದ್ದುಬಿಟ್ಟಳು.

**ಜಂಗ:**— ಒಂದು ವೇಳೆ, ನಿನ್ನ ಮಗನೇ ಇಲ್ಲಿಗೆ ಬಂದು, ನನ್ನ ಮೇಲೆ ಕೈ ಎತ್ತುವಂತಿದ್ದರೆ ನನ್ನ ಜೀವವನ್ನು ಕಾಪಾಡಿಕೊಳ್ಳದೆ, ಆತನ ಕೈಯಲ್ಲಿ ಒಪ್ಪಿಸಿಕೊಟ್ಟು ನನ್ನ ಹಿಂದಿನ ಕಷ್ಟಗಳ ಪರಿಸಮಾಪ್ತಿಮಾಡಿಸಿಕೊಳ್ಳಬೇಕೆನ್ನುವಿಯಾ? ಅಥವಾ ಹೇಡಿಯಂತೆ ಪ್ರಾಣದಾಸೆಗಾಗಿ ಇಲ್ಲಿಂದ ಸರ್ವವನ್ನೂ ಬಿಟ್ಟು ಪಲಾಯನ ಮಾಡಬೇಕೆನ್ನುವಿಯಾ?

**ಸುಲೋಚನೆ:**— ತ್ರೈಲೋಕ್ಯನಾಥ! ನಿನ್ನ ಈ ತೀಕ್ಷ್ಣವಾದ ಮಾತುಗಳು ಹರಿತವಾದ ಗರಗಸಕ್ಕಿಂತ ಬಲವಾಗಿ ನನ್ನ ಹೃದಯವನ್ನು

ಸೀಳುತ್ತಿವೆ. ಆಗಲಿ, ನಮ್ಮ ಅಪರಾಧವು ನನ್ನ ಮಗನಿಗೆ ಗೊತ್ತಾಗಿ, ನಿನ್ನ ಚರಣ ಧೂಳಿಯಲ್ಲಿ ಬಿದ್ದು ಆತನು ಕ್ಷಮಾಪಣೆ ಬೇಡುವುದಾದರೆ ಆಗೇನು ಎನ್ನುವೆ?

ಜಂಗಬಹದ್ದೂರನು ಈಗ ವಿಚಾರದಲ್ಲಿ ಬಿದ್ದನು. "ಷೆಂಷೇರ! ಸೇಡಿನ ಯಜ್ಞಕ್ಕೆ ಕಂಕಣವನ್ನು ಕಟ್ಟಿದಾಗಲೇ, ನಿನ್ನ ಮೃದುವಾದ ಹೃದಯವನ್ನು ಪ್ರಥಮತಃ ಆಹುತಿಯಾಗಿ ಕೊಡಬೇಕಿತ್ತು. ಹಾಗೆ ಮಾಡದೆ ಈಗ ಸುಲೋಚನೆಯು ಮಾತಿಗೆ ಏನೆನ್ನುವೆ? ಅಥವಾ ಈ ಸೇಡಿನ ಯಜ್ಞದಿಂದ ಮುಂದೆ ನಿನಗೆ ಯಾವ ಹೆಚ್ಚಿನ ಸುಖವು ದೊರೆತೀತು? ಇನ್ನೊಂದು ಪ್ರಶ್ನೆ! ಈಗ ಒಂದು ವೇಳೆ ರಘುನಾಥಪಂತನ ಕೈಯಿಂದ ನೀನು ಸತ್ತರೆ, ನಿನಗಾಗಿ ಅಳುವವರು ಯಾರು? ಆದರೆ—ಅಯೀಷೆಯ ಗತಿಯೇನು? ಆ ಅನಾಥೆಯಾದ ಬಾಲೆಯನ್ನು, ಯೋಗ್ಯ ಸ್ಥಾನದಲ್ಲಿ ಇರಿಸುವುದಾಗಿ ಮೃತ್ಯುಶಯ್ಯೆಯಲ್ಲಿದ್ದ ಝುನೀನಾಬೀಗೆ ನೀನು ಮಾತುಕೊಡಲಿಲ್ಲವೇ? ಅದನ್ನಾದರೂ ಮರೆತು ಬಿಡುವೆಯಾ!" ಹೀಗೆಂದು, ಕಣ್ಣುಮುಚ್ಚಿಕೊಂಡು ತುಸುಹೊತ್ತು ಯೋಚಿಸುತ್ತಾ ಕುಳಿತನು.

**ಸುಲೋಚನೆ:**—ತ್ರೈಲೋಕ್ಯನಾಥ! ಏನು? ಮರುತ್ತರವಿಲ್ಲ! ನಿನ್ನ ಹೃದಯವು ಪಾಷಾಣವಾಗಿದೆಯೆ?

**ಜಂಗ:**—"ಹಾಗಲ್ಲ. ಇನ್ನೊಂದು ವಿಚಾರವು ನನ್ನ ಮನಸ್ಸಿನಲ್ಲಿ ಹೊಳೆಯಿತು. ಒಂದು ವೇಳೆ ನಿನ್ನ ಮಗನೇ ಇಲ್ಲಿಗೆ ಬಂದು ಈ ಷೆಂಷೇರನನ್ನು ಕೊಂದರೆ ಇವನಿಗಾಗಿ ಅಳುವವರು ಯಾರು ಎಂದು ಯೋಚಿಸುತ್ತಾ ಇದ್ದೆ. ಅಳುವವರು ಯಾರೂ ಇಲ್ಲವೆಂದು ನನಗೆ ತೋಚಿತು. ನಿನ್ನ ಮಗನಿಗಾದರೋ ಅಳುವ ತಂದೆ ತಾಯಿಗಳಾದರೂ ಇದ್ದಾರೆ. ಆದುದರಿಂದ ಸುಲೋಚನೆ! ಹೆದರ ಬೇಡ. ನಿನ್ನ ಮಗನ ಕೈಯಿಂದ ಈ ಷೆಂಷೇರನ ಅವತಾರವು ಹಾಗೆಯೇ ಸಂಪೂರ್ಣವಾಗ ಬೇಕೆಂದು ದೈವೇಚ್ಛೆ ಇರಬಹುದು. ಅದನ್ನು ನಾನು ಅಳಿಸುವುದಾದರೂ ಹೇಗೆ? ಹೋಗು! ಸ್ವಸ್ಥಚಿತ್ತಳಾಗಿ ಹೋಗು!" ಎಂದು ನಿಟ್ಟುಸುರು ಬಿಡುತ್ತಾ ಬಾರುಮಾಡಿದ ಪಿಸ್ತೂಲುಗಳನ್ನು ಖಾಲಿಮಾಡಿದನು. ಸುಲೋಚನೆ ಆಗ ಅವನಿಗೆ ಅಡ್ಡಬಿದ್ದು "ನನ್ನ ಸರ್ವ ಅಪ

ರಾಧಗಳನ್ನೂ ಮಡಿಲಲ್ಲಿ ಹಾಕಿಕೊಂಡು, ಜರ್ಝರಿತವಾದ ನನ್ನ ಮನಸ್ಸಿಗೆ ಶಾಂತಿಯನ್ನು ಕೊಟ್ಟು, ನನ್ನ ಹೃದಯದಲ್ಲಿ ಮೂರ್ತಿಮತ್ತಾಗಿ ನೆಲೆನಿಂತ ತ್ರೈಲೋಕ್ಯನಾಥನೆಂದರೆ ನೀನೇ ಸರಿ!" ಎಂದು ಆತನ ಪಾದಗಳನ್ನು ತನ್ನ ಕಣ್ಣೀರಿಂದ ತೊಯಿಸಿದಳು.

ಅಷ್ಟರಲ್ಲಿ ಕಣ್ಣುಗಳಿಂದ ಕಿಡಿಗಳನ್ನು ಹಾರಿಸುತ್ತಾ, ಉನ್ಮಾದಾವೇಶದಿಂದ ರಘುನಾಥನೂ ಅವನ ಹಿಂದೆ ಗಿರಿಧರಲಾಲನೂ ಬೈಠಕಖಾನೆಯೊಳಗೆ ಪ್ರವೇಶ ಮಾಡಿದರು. ಅಲ್ಲಿ ತನ್ನ ತಾಯಿ ಜಂಗಬಹದ್ದೂರರ ಪಾದಗಳನ್ನು ಬಿಗಿಯಾಗಿ ಹಿಡಿದು, ಕಣ್ಣೀರು ಸುರಿಸುವುದನ್ನು ಕಂಡು, ರಘುನಾಥನು "ಅವ್ವಾ! ಏನಿದು ವಿಚಾರ!" ಎಂದು ಚಕಿತನಾಗಿ ಆರ್ತಸ್ವರದಿಂದ ಚೀರಿದನು.

**ಸುಲೋಚನೆ**:—ಮಗು! ಈ ಜಂಗಬಹದ್ದೂರರ ಮುಂದೆ ನಾವು ತುಂಬಾ ಅಪರಾಧಿಗಳು—

**ರಘುನಾಥ**:—ಏನಿದು ಭ್ರಮೆ! ನಮ್ಮ ತಂದೆಯ ಹೆಸರನ್ನು ಆ ಕಲಂಕದ ಕೆಸರಲ್ಲಿ ಅದ್ದಿದ, 20 ವರ್ಷಗಳ ಹಿಂದಿನ ಹಳೆ ಸಮಾಚಾರದ ಪ್ರೇತವನ್ನು ಸುಳಿಯುವಂತೆ ಮಾಡಿದ ಈ ಮಾಟಗಾರನಿಗೆ ನಾವು ಅಪರಾಧಿಗಳೇ? ಆತನನ್ನು—

**ಜಂಗಬಹದ್ದೂರ**:—ಆತನನ್ನು ಕೊಲ್ಲುವುದಕ್ಕಾಗಿಯೇ ಒಂದಲ್ಲ ಎರಡು ಪಿಸ್ತೂಲುಗಳನ್ನು ಬಾರು ಮಾಡಿಟ್ಟಿದ್ದೆ! ನಿನ್ನ ತಾಯಿಯ ಬಲವಂತದಿಂದಲೇ—

**ಸುಲೋಚನೆ**:—"ಮಗೂ! ಈ ಮಹಾಪುರುಷನಿಗೆ ನಮ್ಮಿಂದ ಅನೇಕ ಮಹದಪರಾಧಗಳು ಉಂಟಾಗಿವೆ. ಅದಕ್ಕಾಗಿ ಅವನ ಕ್ಷಮಾಪಣೆಯನ್ನು ನಾನು ಬೇಡುತಿದ್ದೇನು. ಸಕಾಲದಲ್ಲಿ ನೀನೂ ಬಂದೆ. ನೀನೂ ಅವರೊಡನೆ ಕ್ಷಮಾಪಣೆಯನ್ನು ಬೇಡಿಕೊ. ಈ ಕಥೆಯನ್ನು ವಿಸ್ತಾರವಾಗಿ ಗಿರಿಧರನು ಹೇಳುವನು. ಇನ್ನೊಂದು ಮಾತನ್ನು ತಿಳಿಸಬೇಕಾಗಿದೆ. ನಮ್ಮ ಮನೆಯ ಹೊಸ್ತಿಲನ್ನು ದಾಟಿ ಕಾಲಿಡಲು ನಮಗೆ ಸಾಧ್ಯವಿಲ್ಲ. ಮರ್ಯಾದೆಯಿಂದ ನಮ್ಮ ಜೀವನವನ್ನು ಹೇಗೆ ನಡೆ

ಯಿಸಬೇಕೆಂದು ಮುಂದೆ ವಿಚಾರಮಾಡತಕ್ಕದ್ದಿದೆ. ಆದ್ದರಿಂದ ನನ್ನ ಕೋರಿಕೆಯಂತೆ ಈ ಜಂಗಬಹದ್ದೂರರ ಕಾಲುಗಳನ್ನು ಹಿಡಿದು, ಅವರ ಕ್ಷಮೆಯನ್ನು ಸಂಪಾದಿಸಿ ನನ್ನ ಹಿರೇ ಮಗನಂತಿರುವ ಈ ಗಿರಿಧರಲಾಲನ ಆಫೀಸಿಗೆ ಹೋಗೋಣ" ಎಂದೊಡನೆ ತನ್ನ ತಾಯಿಯ ಅಪ್ಪಣೆಯನ್ನು ಮೀರಲಾರದೆ ರಘುನಾಥನು ಕಣ್ಣು ಕಣ್ಣು ಬಿಡುತಿದ್ದನು. ಆಗ ಸುಲೋಚನೆ ಆತನ ಕೈಗಳನ್ನು ಹಿಡಿದು ಬೇಡಿಕೊಂಡಿದ್ದರಿಂದ, ಆತನು ಜಂಗಬಹದ್ದೂರರ ಪಾದಗಳನ್ನು ಮುಟ್ಟಿ ನಮಸ್ಕರಿಸಿ ಗದ್ಗದ ಕಂಠದಿಂದ ಅವರ ಅಪ್ಪಣೆಯನ್ನು ಪಡೆದು ತಾಯಿಯೊಂದಿಗೆ ಬೈಠಕಖಾನೆಯಿಂದ ಹೊರಗೆ ಹೋದನು. ಜಂಗಬಹದ್ದೂರನು ಗಿರಿಧರಲಾಲನನ್ನು ಕೈಸನ್ನೆಯಿಂದ ಕರೆದು "ಗಿರಿಧರಲಾಲ! ನೀವು ಇವರಿಗೆ ಪರಮಾಪ್ತರಾಗಿರುವಿರಿ. ವಿಧಿಯು ಇವರಿಗೆ ದೊಡ್ಡ ಸಂಕಷ್ಟವನ್ನು ಒದಗಿಸಿರುವನು. "ಹಿರಿಯರ ಪಾಪ ಕಿರಿಯರ ಮೇಲೆ" ಎಂಬಂತೆ ಇವರ ಸ್ಥಿತಿಯಾಗಿದೆ. ಈಗ ಅವರು ನನ್ನಿಂದ ಏನೊಂದೂ ಸಹಾಯವನ್ನು ಅಂಗೀಕರಿಸಲಾರರು. ಆದರೆ ನನ್ನ ಮಿತ್ರರಾದ ಅನೇಕ ಸಾಹುಕಾರರು ಮುಂಬಯಿಯಲ್ಲಿರುವರು. ವೊಟ್ಸನ್ ಕಂಪೆನಿಯ ಮೆನೇಜರನೊಡನೆ ಈ ಉಂಗುರವನ್ನು ತೋರಿಸಿ, ನೀವು ಸ್ವತಃ ಮಾತನಾಡಿದರೆ, ಅವನು ಇಬ್ಬರಿಗೂ ಬೇಕಾದ ಸೌಕರ್ಯಗಳನ್ನು ಮಾಡಿಕೊಡುವನು. ಆದರೆ ಈ ಸಹಾಯವು ನನ್ನಿಂದ ಆಯಿತೆಂದು ನೀವು ಅವರಿಗೆ ಈಗ ತಿಳಿಸುವ ಅವಶ್ಯವಿಲ್ಲ. ನಿಮಗೆ ನನ್ನ ಪ್ರಾರ್ಥನೆ ಇಷ್ಟೇ. ನಾನು ಕಟುಕನೆಂದು ಮಾತ್ರ ತಿಳಿಯಬೇಡಿರಿ" ಎಂದು ಆತನ ಎರಡೂ ಭುಜಗಳನ್ನು ತನ್ನೆರಡು ಕೈಗಳಿಂದ ಹಿಡಿದುಕೊಂಡನು. ಆಗ ಅವರಿಬ್ಬರ ಕಣ್ಣುಗಳು ಒದ್ದೆಯಾಗಿದ್ದವು. ಗಿರಿಧರಲಾಲನು ಆ ಕ್ಷಣವೇ ಆ ಉಂಗುರವನ್ನು ತನ್ನ ಜೇಬಿಗೆ ಸೇರಿಸಿಕೊಂಡು, ತಾಯಿಮಗಂದಿರ ಹಿಂದೆ ಓಡಿದನು. ಜಂಗಬಹದ್ದೂರನು ತನ್ನ ಆರಾಮ ಕುರ್ಚಿಯಲ್ಲಿ ಬಿದ್ದುಕೊಂಡನು. ಅವನ ಸೂಚನೆಯ ಮೇರೆಗೆ ಗಫೂರನು ಪಿಸ್ತೂಲುಗಳನ್ನು ಇನ್ನೊಮ್ಮೆ ಬಾರು ಮಾಡಿಟ್ಟನು. ಕಾಲು ತಾಸು ಕಳೆಯಲಿಲ್ಲ, ಅಷ್ಟರೊಳಗೆ ಇನ್ನೊಬ್ಬನು ಉನ್ಮತ್ತನಾಗಿ ಒಳಗೆ

ಕಾಲಿಟ್ಟನು; ಅವನು ದ್ವಾರಕಾನಾಥನಾಗಿದ್ದನು. ಆಗ ಕತ್ತಲಾದು ದರಿಂದ ಗಫೂರನು ದೀಪವನ್ನು ಮೇಜಿನ ಮೇಲೆ ತಂದಿಟ್ಟನು.

---

## ಇಪ್ಪತ್ತಮೂರನೆಯ ಅಧ್ಯಾಯ

### ಎರಡನೆ ಋಣವಿಮೋಚನೆ

ದ್ವಾರಕಾನಾಥನು ಒಳಗೆ ಗಡಿಬಿಡಿಯಿಂದ ಕಾಲಿಟ್ಟು, ಕಣ್ಣು ಗಳನ್ನು ಕೆರಳಿಸುತ್ತಾ, ಅಂಗಿಯ ಕಸೆಗಳನ್ನು ಸರಿಯಾಗಿ ಕಟ್ಟದೇ ಮೈಬೆವರಿನಿಂದ ಕೂಡಿದವನಾಗಿ ಉಚ್ಚಸ್ವರದಿಂದ "ಏನು! ಇನ್ನೂ ಜೀವದಲ್ಲಿರುವೆಯಾ? ರಘುನಾಥನು ನಿನ್ನ ಸಮಾಪ್ತಿಗಾಗಿ ಇಲ್ಲಿಗೆ ಬಂದನೆಂದು ಕೇಳಿದೆ! ಅವನೆಲ್ಲಿ? ಕಾಣಿಸುವುದಿಲ್ಲ?"

**ಜಂಗ**:—"ನೀನು ಮಾಡಿದ ಘೋರ ಪಾತಕಕ್ಕೆ ಪ್ರಾಯಶ್ಚಿತ್ತ ವೇನೆಂದು ನಿಶ್ಚಯಿಸಲು ಹೋಗಿರುವನು" ಎಂದು ದಿಟ್ಟ ಸ್ವರದಿಂದ ಉತ್ತರಕೊಟ್ಟು, ಕುರ್ಚಿಯಿಂದ ಎದ್ದು, ಸೊಂಟದ ಮೇಲೆ ಎರಡು ಕೈಗಳನ್ನು ಊರಿ ನಿಂತನು.

**ದ್ವಾರಕಾ**:—ನಿನ್ನ ಎದೆಯ ರಕ್ತದಲ್ಲಿ ತನ್ನ ಕೈಯನ್ನು ತೊಳೆ ಯುವುದೇ ಅದಕ್ಕೆ ತಕ್ಕ ಪ್ರಾಯಶ್ಚಿತ್ತವೆಂದು ಆತನಿಗೆ ನೀನೇ ಹೇಳ ಬಾರದಿತ್ತೇ?

**ಜಂಗ**:—ಅದೇ ಉದ್ದೇಶದಿಂದ ಇಲ್ಲಿಗೆ ಆತನು ಬಂದಿದ್ದನು. ಆದರೆ ಕಡೆಗೆ ಏನೂ ಮಾಡದೆ ಹಿಂತಿರುಗಿದನು.

**ದ್ವಾರಕಾ**:—ಅದೇನು? ಆತನೊಡನೆ ಪ್ರಾಣದಾನವನ್ನು ಬೇಡಿ ದೆಯಾ? ಹೇಡಿ!

**ಜಂಗ**:—ಹಾಗಲ್ಲ. ನೀನು ಮಾಡಿದ ಪಾಪದ ವಿವರವನ್ನು ಆತನ ತಾಯಿಯು ಇಲ್ಲಿಗೆ ಬಂದು ಸಾದ್ಯಂತವಾಗಿ ಆತನಿಗೆ ತಿಳಿಸಿದಳು. ವಿಶ್ವನಾಥಪಂತರ ಕೊಲೆ, ಅವರ ಮನೆಯ ದರೋಡೆ, ಅವರ ಹೆಂಡ ತಿಯ ದುರ್ಮರಣ, ಅವರ ಒಬ್ಬಳೇ ಮಗಳ ಅನಾಥತ್ವ, ನಿರಪರಾಧಿ ಯಾದ ತ್ರೈಲೋಕ್ಯನಾಥನ ದ್ವೀಪಾಂತರ ಶಿಕ್ಷೆ, ಆತನ ವೃದ್ಧತಂದೆ ಮತ್ತು ಆತನಿಗೆ ಆದ ವಿಯೋಗದುಃಖದ ದೆಸೆಯಿಂದ ಆ ವೃದ್ಧನ

ಮರಣ ಇವುಗಳನ್ನೂ, ಇದಕ್ಕೆಲ್ಲ ಕಾರಣನಾದ ಯದುಕುಲನಾಥನೂ ತನ್ನ ತಂದೆಯಾದ ದ್ವಾರಕಾನಾಥನೂ ಒಬ್ಬನೆಯೆಂಬುದನ್ನೂ ರಘು ನಾಥನು ತಿಳಿದು, ಈ ಪಾಪಗಳ ತುಲನೆಯನ್ನು ಶಾಂತಚಿತ್ತದಿಂದ ಮಾಡುವುದಕ್ಕಾಗಿ ತನ್ನ ತಾಯಿಯೊಡನೆ ಇಲ್ಲಿಂದ ಇಳಿದು ಹೋದನು.

**ದ್ವಾರಕಾ:**—ಈ ಪುರಾಣಕಥೆಯೆಲ್ಲ ಪಂಜಾಬದ ಷೆಂಷೇರ ಜಂಗನಿಗೆ ಹೇಗೆ ಗೊತ್ತಾಯಿತು? ಬುಟ್ಟಿಯಲ್ಲಿ ಸ್ವಸ್ಥವಾಗಿ ಮಲ ಗಿರುವ ಸರ್ಪವನ್ನು ಕೋಲಿನಿಂದ ಕುಕ್ಕಿ, ಕೆಣಕಿಸಿದ ನೀನಾರು? ನಿಜವಾಗಿಯೂ ನೀನು ಷೆಂಷೇರ ಜಂಗನೋ ಅಥವಾ ಎಷ್ಟೋ ವರ್ಷಗಳ ಹಿಂದೆ ದ್ವೀಪಾಂತರದಲ್ಲಿ ಸತ್ತ ತ್ರೈಲೋಕ್ಯನಾಥನ ಪ್ರೇತವೊ, ಹೇಳು! ನೀನು ಮನುಷ್ಯನಾಗಿದ್ದರೆ ನಮ್ಮಿಬ್ಬರೊಳಗೆ ಒಬ್ಬನು ಇಲ್ಲಿಂದ ಜೀವಂತ ನಾಗಿ ಕದಲಲಾರನು. ಬೇಗ ಹೇಳು! ನೀನು ನರನೊ, ಪ್ರೇತವೋ!

**ಜಂಗ:**—“ನಾನು ಯಾರೆಂದು ತಿಳಿಯಬೇಕೆ? ನಿನ್ನ ಆಸೆ ಯನ್ನು ಪೂರೈಸುವೆನು” ಎಂದು ತನ್ನ ಹೊರ ಅಂಗಿಯನ್ನೂ, ಚಿಕ್ಕ ಗಡ್ಡವನ್ನೂ ತಲೆಯ ಫೇಟಾವನ್ನೂ ಕಿತ್ತುಬಿಟ್ಟು ಎದೆಯನ್ನು ಅಗಲಿಸಿ ಕೊಂಡು “ಈಗಲಾದರೂ ನನ್ನ ಗುರುತು ಸಿಕ್ಕಿತೆ? ಇಗೊ! ಚೆನ್ನಾಗಿ ಕಣ್ತೆರೆದು ನೋಡು. ನಾನು ಭೂತವೂ ಅಲ್ಲ; ಪ್ರೇತವೂ ಅಲ್ಲ. ಈಗಲೇ ಹೇಳಿದ ಇನ್ನೂ ಜೀವಂತನಾಗಿರುವ ತ್ರೈಲೋಕನಾಥನೆಂದು ತಿಳಿ. ನನ್ನ ಕೈ ಮುಟ್ಟಿನೋಡು! ರಕ್ತನಾಡಿ ಇಲ್ಲಿ ಸರಿಯಾಗಿ ಆಡು ತ್ತಿದೆ. ಎದೆಯನ್ನು ಮುಟ್ಟಿನೋಡು! ಅದು ಕ್ರಮವಾಗಿ ಶಬ್ದ ಮಾಡು ತ್ತಿದೆ. ಏನು? ನನ್ನ ಪ್ರಾಣಹರಣವನ್ನು ನಿನ್ನ ಮಗನು ಮಾಡ ಬೇಕೆಂದು ಹಾರೈಸಿದೆಯಲ್ಲ! ಆ ನಿಷ್ಕಳಂಕ ಬುದ್ಧಿಯ ತರುಣನಿಗೆ ನಿನ್ನ ಮಗನೆನ್ನಿಸಿಕೊಳ್ಳುವ ಅಪಮಾನವೇ ಸಾಕು. ಇನ್ನೂ ನನ್ನ ಕೊಲೆಯ ಪಾಪದ ಹೊರೆಯನ್ನು ಏತಕ್ಕೆ ಆತನ ಮೇಲೆ ಹೊರಿಸಲು ಯತ್ನಿ ಸುವೆ? ನಿನ್ನ ಹೆಗಲುಗಳು ಇನ್ನೆಷ್ಟೊ ಪಾಪಗಳನ್ನು ಹೊರುವಷ್ಟು ಅಗಲವಾಗಿವೆ. ನರಹತ್ಯ ಮಾಡುವುದರಲ್ಲಿ ನುರಿತ ಕೈ ನಿನ್ನದು. ನೀನೆ ಆ ಕೃತ್ಯವನ್ನು ಮಾಡು. ಏನು? ತಟಸ್ಥನಾಗಿ ನಿಂತಿರುವೆ? ಕೈಯಲ್ಲಿ ಆಯುಧವಿಲ್ಲವೆನ್ನುವೆಯಾ? ಇಗೋ ನೋಡು! ಮೇಜಿನ

ಮೇಲೆ ಬಾರು ಮಾಡಿದ ಒಂದಲ್ಲ ಎರಡು ಪಿಸ್ತೂಲುಗಳು ಇವೆ. ನನ್ನ ಅಂಗಿಯನ್ನು ತೆರೆದು ನನ್ನ ಎದೆಯನ್ನು ನಿನ್ನ ಏಟಿಗೆ ಒಡ್ಡಿದ್ದೇನೆ. ತಡ ಮಾಡುವೆ ಏಕೆ? ಈ ಜನ್ಮದಲ್ಲಿ ನೀನು ನಿನ್ನ ಎಲ್ಲಾ ಇಚ್ಛೆ ಪೂರೈಸಿ ಬಿಡು. ಇನ್ನೊಂದು ಜನ್ಮವೆತ್ತುವ ವರೆಗೆ ಆ ಕಾಂಕ್ಷೆಯನ್ನು ಮಿಗಿಸಿ ಇಡಬೇಡ! ಏಕೆ ಸ್ತಬ್ಧನಾಗಿರುವೆ? ಇನ್ನೊಂದು ಜನ್ಮದಲ್ಲಿ ನಮ್ಮಿಬ್ಬ ರ್ವರಿಗೂ ಭೇಟಿಯಾದೀತು ಎಂದು ಭರವಸೆಯಿಲ್ಲ. 'ಸಂಕ ಮುರಿದಲ್ಲೆ ಸ್ನಾನ' ಮಾಡು. ಪಾಪರಹಿತನಾದ ನನಗೆ ದ್ವೀಪಾಂತರವಾಸದ ಶಿಕ್ಷೆಯನ್ನು ಅನುಭವಿಸುವಂತೆ ಮಾಡಿದ ನೀನು—ಜನ್ಮ ಜನ್ಮಾಂತರದಲ್ಲಿ ಶಿಕ್ಷೆಯನ್ನು ಅನುಭವಿಸುವುದಕ್ಕೆ ಸಂಚಯವನ್ನು ಈಗಲೇ ಮಾಡು."

ಇದನ್ನೆಲ್ಲ ಕೇಳುತಿದ್ದ ಹಾಗೆ ದ್ವಾರಕಾನಾಥನು ಜಂಗಬಹದ್ದೂರನನ್ನು ನೋಡುತ್ತ ನೋಡುತ್ತ ಕಣ್ಣಾಲಿಗಳು ಸ್ಥಿರವಾಗಿರದೆ ಫಕ್ಕನೆ ಸ್ಮೃತಿ ತಪ್ಪಿ ನೆಲದ ಮೇಲೆ ಬಿದ್ದುಬಿಟ್ಟನು. "ಇಲ್ಲಿಗೆ ನನ್ನ ಎರಡನೆ ಅವತಾರದಲ್ಲಿ ಎರಡನೆ ಅಂಕವನ್ನು ಮುಗಿಸಿದೆನು" ಎಂದು ಹೇಳಿ ಜಂಗಬಹದ್ದೂರನು ಬಿದ್ದವನ ಕಡೆಗೆ ಬೆರಳು ತೋರಿಸಿ ಕೈಸನ್ನೆಯಿಂದ ದ್ವಾರಕಾನಾಥನನ್ನು ಆತನ ಮನೆಗೆ ಕೊಂಡುಹೋಗುವಂತೆ ಏರ್ಪಡಿಸಿ, ತನ್ನ ಆರಾಮಕುರ್ಚಿಯಲ್ಲಿ ಹುಕ್ಕೆಯನ್ನು ಸೇದುತ್ತಾ ತುಸುಹೊತ್ತು ಬಿದ್ದುಕೊಂಡನು.

---

## ಇಪ್ಪತ್ತನಾಲ್ಕನೆಯ ಅಧ್ಯಾಯ

## ವಿಮುದಲಾಲನ ವಿವಾಹ ನಿಶ್ಚಯ

ಮರುದಿನ ಬೆಳಿಗ್ಗೆ ಜಂಗಬಹದ್ದೂರನು, ಅಸ್ಮಾನ್ ಬಾಗಿನಿಂದ ಹೊರಟು ಎಲ್ಲಿಗೋ ಹೊರಗೆ ಹೋಗುವುದಕ್ಕೆ ಸಿದ್ಧನಾಗಿದ್ದನು. ಅಷ್ಟರಲ್ಲಿ ಫಕ್ಕನೆ ಕಿಟಿಕಿಯೊಳಗಿಂದ ವಿಮುದಲಾಲನನ್ನು ಕಂಡು, ಅವನು ಬಂದಿರುವ ಸಂಗತಿಯನ್ನು ವಿಚಾರಿಸಿ ಹೋಗೋಣವೆಂದು ಅಲ್ಲಿಯೇ ನಿಂತನು. ವಿಮುದಲಾಲನು ಒಳಗೆ ಪ್ರವೇಶಮಾಡಿ, ಜಂಗಬಹದ್ದೂರನನ್ನು ಕಂಡು—"ಓಹೋ! ತಾವು ಎಲ್ಲಿಗೊ ಹೊರಟಂತೆ ಕಾಣುತ್ತದೆ?" ಎಂದನು.

**ಜಂಗ**:—ವಿಶೇಷ ಕೆಲಸವೇನೂ ಇರಲಿಲ್ಲ. ಒಮ್ಮೆ ಪೇಟೆಯಲ್ಲಿ ಸುತ್ತಾಡಿ ಬರೋಣವೆಂದು ಹೊರಟೆ.

**ವಿಮುದ**:—ಹಾಗಿದ್ದರೆ ನಿಮ್ಮೊಂದಿಗೆ ನಾನು ಬರಲೇ?

**ಜಂಗ**:—"ಏಕೆ? ಅಂತಹದೇನು? ನನಗೆ ಅಷ್ಟೊಂದು ಅವಸರದ ಕೆಲಸವೇನೂ ಇರಲಿಲ್ಲ. ಇಲ್ಲಿಯೇ ಕುಳಿತುಕೊಂಡು ಸಲ್ಲಾಪವನ್ನು ಮಾಡೋಣ." ಎಂದು ಇಬ್ಬರೂ ಒಂದೊಂದು ಆರಾಮ ಕುರ್ಚಿಯಲ್ಲಿ ಕುಳಿತರು.

**ವಿಮುದ**:—ನನ್ನ ವಿವಾಹ ನಿಶ್ಚಯದ ಸಮಾರಂಭಕ್ಕಾಗಿ ತಮಗೆ ನಂದೂಲಾಲ್ ಸೇಟರಿಂದ ಆಮಂತ್ರಣ ಬರಲಿಲ್ಲವೇ?

**ಜಂಗ**:—ಬಂದಿದೆ. ಅದು ಈ ಹೊತ್ತು ಮಧ್ಯಾಹ್ನ ಮೂರು ಗಂಟೆಗೆ ಜರಗತಕ್ಕದ್ದಲ್ಲವೇ?

**ವಿಮುದ**:—ಅದಕ್ಕೆ, ನನ್ನ ಪರವಾಗಿ ಆಮಂತ್ರಿಸಲು ನಾನೇ ಬಂದು ಬಿಟ್ಟೆ.

**ಜಂಗ**:—ಅದೇನು? ನೀವೇ ಸ್ವತಃ?

**ವಿಮುದ**:—ನಮ್ಮ ತಂದೆ ಇಲ್ಲಿಲ್ಲ. ಅವರ ಸ್ಥಾನದಲ್ಲಿ ವರನ ಕಡೆಯಿಂದ ತಾವೇ ಆ ಕೆಲಸ ನಡಿಸಬೇಕೆಂದು ಬೇಡಿಕೊಳ್ಳಲು ಬಂದೆ. ನಂದೂಲಾಲ ಸೇಟರೊಡನೆ ನನಗೆ ಸಂಬಂಧವಾಗುವುದಕ್ಕೆ ತಾವೇ ಕಾರಣವೆಂದು ನನ್ನ ತಿಳುವಳಿಕೆ.

**ಜಂಗ**:—ಚೆನ್ನಾಗಿ ನೆನಪುಮಾಡಿ ನೋಡು. ಅವರ ಬಂಡಸಾಲೆಯಲ್ಲಿ ಹಣದ ಪುರವಠೆಯನ್ನು ಮಾತ್ರ ನಾನು ಮಾಡಿಸಿ ಕೊಟ್ಟೆನು. ಮತ್ತೇನೂ ನಾನು ಮಾಡಲಿಲ್ಲ. ನಂದೂಲಾಲನು ತಾನಾಗಿಯೇ ನಿನ್ನನ್ನು ಮನೆಯ ಅಳಿಯನಾಗಿ ಆರಿಸಿಕೊಂಡಿರುವನು.

**ವಿಮುದ**:—ಆದರೆ ಕಳೆದು ಹೋದ ನನ್ನ ತಂದೆಯನ್ನು ಮರಳಿ ದೊರಕಿಸಿಕೊಟ್ಟು ನನಗೆ ಉಪಕಾರವನ್ನು ಮಾಡಿದ ತಮ್ಮನ್ನು ಪಿತೃ ಸಮಾನನಾಗಿಯೇ ಭಾವಿಸುವೆನು.

**ಜಂಗ**:—ಅದಿರಲಿ, ಈ ವಿವಾಹವಾದರೆ ನೀನು ಪುಣ್ಯವಂತನೆನ್ನ ಬೇಕಲ್ಲವೆ?

**ವಿಮುದ**:—ಹೌದು. ಕನ್ನಿಕೆಯೂ ಯೋಗ್ಯಳಿದ್ದಾಳೆ. ಮಾವ ನಾಗುವವರೂ ಇಲ್ಲಿಯ ಪ್ರಜಾಮುಖಂಡರಲ್ಲಿ ಒಬ್ಬರು.

**ಜಂಗ**:—"ಅಷ್ಟೆ ಅಲ್ಲ. ಮುಂದೆ ನೀನು ನಂದೂಲಾಲರ ಹೇರಳ ಬದುಕಿಗೂ ಹಕ್ಕುದಾರನಾಗುವೆ" ಎಂದು ವಿಮುದಲಾಲನ ಮೋರೆಯನ್ನೆ ನೆಟ್ಟ ದೃಷ್ಟಿಯಿಂದ ನೋಡಿದನು. ವಿಮುದಲಾಲನ ಮೋರೆಯು ಪ್ರಫುಲ್ಲವಾಯಿತು.

**ವಿಮುದ**:—ಅವರ ಬದುಕುಬಾಳು ಎಷ್ಟಿರಬಹುದೊ?

**ಜಂಗ**:—ನಗದಾಗಿ ಸುಮಾರು ಇಪ್ಪತ್ತು ಲಕ್ಷ ರೂಪಾಯಿ, ಸ್ಥಿರಚರಸೊತ್ತು, ನಗನಾಣ್ಯ, ಜವಾಹೀರು ಕೂಡಾ ಒಂದೆರಡು ಲಕ್ಷ ವಾಗಬಹುದು ಎನ್ನುತ್ತಾರೆ.

**ವಿಮುದ**:—"ಇಷ್ಟೆಲ್ಲ ನನಗೆ ಮುಂದೆ ಸಿಗುವಂತೆ ಮಾಡಲು ತಾವೇ ಕಾರಣಭೂತರಲ್ಲವೆ?" ಜಂಗಬಹದ್ದೂರನು ಈ ಮಾತನ್ನು ಕೇಳಿ "ಈ ಠಕ್ಕನು ಅದೇ ಉಪಕಾರ ಸ್ಮರಣೆಯಿಂದ ನನ್ನನ್ನು ಪರ ಲೋಕಕ್ಕೆ ಅಟ್ಟಿಬಿಡುವಂತೆ ಗಂಗಾರಾಮನಿಗೆ ಬೋಧಿಸಿ ಹವಣಿಸಿದ್ದ ನಲ್ಲವೆ? ನನ್ನ ಹೇರಳ ಸಂಪತ್ತಿಗೂ ಕೈಚಾಚಬೇಕೆಂದು ಯೋಚಿಸಿದ ನಲ್ಲವೇ? ಇಷ್ಟು ಸಣ್ಣ ಯುವಕನಲ್ಲಿ ಇಷ್ಟೆಲ್ಲ ಮಾಯಾತಂತ್ರಗಳೂ ದೂರಾಲೋಚನೆಗಳೂ ನರನಾಡಿಗಳಲ್ಲಿ ಹಾಸುಹೊಕ್ಕಾಗಿ ಇರುವುದು ಆಶ್ಚರ್ಯ" ಎಂದು ತನ್ನಲ್ಲಿಯೇ ಅಂದುಕೊಳ್ಳುತ್ತಾ ಕಿರುನಗೆಯನ್ನು ಬೀರುತ್ತಾ "ಈ ಎಲ್ಲಾ ಹಣವು ನಿನಗೆ ಮುಂದೆ ಸಿಗುವಂತಿದ್ದರೆ—"

**ವಿಮುದ**:—"ಈಗ ನನ್ನ ತಂದೆ—ಪೊಪಟಲಾಲರು ನನಗಾಗಿ ಬೇಂಕಿನಲ್ಲಿ ಇಟ್ಟ ಹಣವೆಲ್ಲಾ ವೆಚ್ಚವಾಗುತ್ತಾ ಬಂತು. ತಂದೆಯವರ ಸುಳಿವೇ ಒಂದೆರಡು ದಿನಗಳಿಂದ ಇಲ್ಲ. ಈ ವಿವಾಹವು ಬೇಗನೆ ಜರಗದಿದ್ದರೆ ನನಗೆ ಮಂಗಳನ ದಶೆಯೇ ಬಂದೀತು" ಎಂದನು. ಆಗ ಜಂಗಬಹದ್ದೂರನು ತನ್ನಲ್ಲಿಯೇ "ಅನಾಯಾಸವಾದ ದ್ರವ್ಯಲಾಭವು

ಅಪಾತ್ರರಲ್ಲಿ ಉಂಟಾದರೆ ಅದು ಬೇಗನೆ ಮಾಯವಾಗುವುದರಲ್ಲಿ ತಪ್ಪೇನು? ಬೆವರಿನಿಂದ ದುಡ್ಡನ್ನು ಗಳಿಸಿದರಲ್ಲವೇ ಅದರ ನೋವು ಗೊತ್ತಾದೀತು? ಇಂಥಾ ದುಷ್ಟನಿಗೆ ಲೋಕದ ಸಂಪತ್ತನ್ನೆಲ್ಲಾ ಕೊಟ್ಟರೂ ನಾಲ್ಕು ದಿನಗಳಲ್ಲಿ ವೆಚ್ಚಮಾಡಿ ಮೊದಲಿನ ಭಿಕಾಜಿ ಅಥವಾ ಭಿಕಾರಿ—ಯಾಗುವನು" ಎಂದು ತಲೆದೂಗುತ್ತ "ನಿನಗೆ ಮಂಗಳವು ದಾಟಿ ಬುಧನ ದಶೆ ಈಗ ಬಂದಿದೆ. ಆ ಮಂಗಳವು ವಕ್ರದೃಷ್ಟಿಯಿಂದ ನಿನ್ನನ್ನು ಬಿಟ್ಟು ಹೋಗದೆ ಎದುರು ನೋಡುತ್ತಾ ಇದೆ" ಎಂದನು.

ವಿಮುದಲಾಲನು ಈ ಮಾತಿನ ಗೂಢಾರ್ಥವನ್ನು ತಿಳಿದುಕೊಳ್ಳುವಷ್ಟು ಸ್ವಸ್ಥಚಿತ್ತನಾಗಿರಲಿಲ್ಲ. ಮುಂದಿನ ದ್ರವ್ಯಲಾಭದ ವಿಚಾರದಿಂದ ಮನಸ್ಸಿನಲ್ಲಿ ವಾಯುಗೋಪುರಗಳನ್ನು ಕಟ್ಟಿಕೊಂಡು, ಅವುಗಳ ಮೇಲಣ ಅಂತಸ್ತುಗಳಲ್ಲಿ ಕ್ರೀಡಿಸುತಿದ್ದನು. ಎತ್ತರ ಸ್ಥಳದಿಂದ ದುಮುಕಿದಷ್ಟಕ್ಕೆ ಬೇಗನೆ ಕಾಲುಕೀಲು ಮಿಂಗಡಿಸುತ್ತದೆ ಎಂಬ ಲೋಕಾನುಭವವನ್ನು ಇನ್ನೂ ಈ ತರುಣನು ಮಾಡಿರಲಿಲ್ಲ.

ಹೀಗಾಗಿ ಸಮಾರಂಭಕ್ಕೆ ಇನ್ನೊಮ್ಮೆ ಜಂಗಬಹದ್ದೂರನನ್ನು ಆಮಂತ್ರಿಸಿ ಅವನಿಗೆ 'ರಾಮ! ರಾಮ!' ಮಾಡಿ, ಕೈಯಲ್ಲಿರುವ ಬೆತ್ತವನ್ನು ತಿರುಗಿಸುತ್ತಾ ಸಡಗರದಿಂದ ಆ ಬೈಠಕಖಾನೆಯಿಂದ ಹೊರಗೆ ಇಳಿದು ಹೋದನು. ಅವನ ಸ್ಥಿತಿಯನ್ನು ಕಂಡು ಜಂಗಬಹದ್ದೂರನಿಗೆ ನಸುನಗು ತುಟಿಗಳ ಮೇಲೆ ಕುಣಿಯ ತೊಡಗಿತು. "ಹೆಡತಲೆಯ ಮೃತ್ಯು ಕುಣಿಯುವುದನ್ನು ನೋಡದಿರುವ ಜನ್ಮಾಂಧರ ಗತಿಯೇ ಹೀಗೆ" ಎಂದು ತನ್ನೊಳಗೆ ಅಂದುಕೊಂಡು ತನ್ನ ಬಂಡಿಯನ್ನು ತರಿಸಿ ಅದನ್ನು ಹತ್ತಿಕೊಂಡು ಜಂಗಬಹದ್ದೂರನು ಪುರಸಂಚಾರಕ್ಕೆ ಹೊರಟು ಹೋದನು.

---

## ಇಪ್ಪತ್ತೈದನೆಯ ಅಧ್ಯಾಯ

### ಭಿಕಾಜಿಗೆ ಕೈದು

ವಿಮುದಲಾಲನ ಮನೆಯಲ್ಲಿ ಸರ್ವವೂ ಸಿದ್ಧವಾಗಿತ್ತು. ಮುಹೂರ್ತಕ್ಕೆ ಮೊದಲೇ ಆಮಂತ್ರಿತ ಸ್ತ್ರೀ ಪುರುಷ ವೃಂದವು ಬಂದು ತಿವಾಸಿಗಳ ಮೇಲೆ ಮಂಡಿಸಿತ್ತು. ಮಧ್ಯಾಹ್ನ ಮೂರನೆ ತಾಸಿನ ಸಮಯಕ್ಕೆ ಜಂಗಬಹದ್ದೂರನ ಸವಾರಿಯು ಜೋಡು ಕುದುರೆಯ ಬ್ರೊಹೆಮದಲ್ಲಿ ಬಂದುಬಿಟ್ಟಿತು. ಅವನು ಒಳಗೆ ಕಾಲಿಟ್ಟೊಡನೆ ಎಲ್ಲರೂ ಎದ್ದು ಅವನಿಗೆ 'ರಾಮ್! ರಾಮ್!' ಮಾಡಿದರು. ಜಂಗಬಹದ್ದೂರನೂ ಒಂದು ಲೋಡಿಗೆ ಒರಗಿಕೊಂಡು ಕುಳಿತನು. ಇಕ್ಕಡೆಯ ಪುರೋಹಿತರು ಹಣೆಗೆ ಕುಂಕುಮದ ಕಸ್ತೂರಿಯನ್ನು ಇಟ್ಟು, ತಲೆಗೆ ಕೆಂಪು ಶಾಲುಗಳನ್ನು ಸುತ್ತಿಕೊಂಡು, ನಡುವೆ ಕುಳಿತಿದ್ದರು. ಅವರಿಗೆ ಒತ್ತಾಗಿ ನಂದೂಲಾಲನೂ ಅವನ ಹೆಂಡತಿಯೂ ಬಂದು ಕುಳಿತಿದ್ದರು. ಅವರಿಗೆದುರಾಗಿ ವಿಮುದಲಾಲನು ಸುಂದರವಾದ ಪೋಷಾಕನ್ನು ಧರಿಸಿ, ಜರಿಯ ಉತ್ತರೀಯವನ್ನು ಹೊದ್ದು ಹಣೆಗೆ ಕುಂಕುಮದ ಕಸ್ತುರಿಯನ್ನು ಇಟ್ಟು ಕುಳಿತಿದ್ದನು. 'ಶಾಸ್ತ್ರೋಕ್ತವಿಧಿಗಳನ್ನು ಪ್ರಾರಂಭಿಸಲೆ?' ಎಂದು ಪುರೋಹಿತರು ಸಭೆಯ ಅಪ್ಪಣೆಯನ್ನು ಕೇಳಿದರು. ಅಷ್ಟರಲ್ಲಿ ಯಾರೋ ಒಬ್ಬನು "ಪೋಲಿಸ್ ಸುಪರಿಂಟೆಂಡೆಂಟ್ ಮುರಾರಿರಾಯರ ಸವಾರಿ ಇನ್ನೂ ಬರಲಿಲ್ಲ!" ಎಂದನು.

**ಜಂಗ:**—ಅದಕ್ಕೆ ಕೆಲವಂಶ ನಾನೇ ಜವಾಬ್ದಾರನು. ಅವರು ನಮ್ಮ ಮೊಕದ್ದಮೆಯನ್ನು ಪತ್ತೆ ಹಚ್ಚುವ ಅವಸರದಲ್ಲಿದ್ದಾರೆ.

**ನಂದೂಲಾಲ:**—ಅದೆಂಥಾ ಮೊಕದ್ದಮೆ?

**ಜಂಗ:**—ನಮ್ಮ ಉಮದಾಬಾದು ಬಂಗಲೆಯನ್ನು ಕೆಲವು ದಿನಗಳ ಹಿಂದೆ ಪ್ರವೇಶ ಮಾಡಿದ ಕಳ್ಳನು ತನ್ನ ಜತೆಗಾರನಿಂದ ಕೊಲ್ಲಲ್ಪಟ್ಟನು.

**ಪುರೋಹಿತ:**—ತಮ್ಮ ಬಂಗಲೆಯನ್ನು ಕಳ್ಳರು ಪ್ರವೇಶ ಮಾಡಿದರೇ?

**ಜಂಗ:**— ಹೌದು. ಆದರೆ ಪುಣ್ಯವಶಾತ್ ಆ ರಾತ್ರೆ ನಾನು ಅಲ್ಲಿ ಉಳಿದುಕೊಂಡಿರಲಿಲ್ಲ. ನನ್ನ ಪರಮ ಆಪ್ತರಾದ ಪರಶುರಾಮ ದೀಕ್ಷಿತರು ಮಾತ್ರ ಅಲ್ಲಿ ಇದ್ದರು. ಕೊಲೆಯಾದವನ ಕೂಗನ್ನು ಕೇಳಿ ಪೋಲಿಸಿನವರಿಗೆ ಅವರು ವರದಿಯನ್ನು ಕೊಟ್ಟರು. ಸುಪರಿಂಟೆಂಡೆಂಟ್ ಸಾಹೇಬರು ಸ್ವತಃ ಬಂದು ಮೃತನ ಅಂಗಪರೀಕ್ಷೆ ಮತ್ತು 'ಮಹಾಜರ'ನ್ನು ನಡಿಸಿದಾಗ ಮೃತನ ಕಿಸೆಯಲ್ಲಿ ಒಂದು ಪತ್ರವು ಸಿಕ್ಕಿತು. ಅದು ನಂದೂಲಾಲ ಸೇಟರ ವಿಳಾಸಕ್ಕೆ ಬರೆದಿತ್ತಂತೆ. ದೀಕ್ಷಿತರು ಅದನ್ನು ಸುಪರಿಂಟೆಂಡೆಂಟರ ಕೈವಶ ಕೊಟ್ಟರಂತೆ.

ಇದನ್ನು ಕೇಳಿದಾಗ ವಿಮುದಲಾಲನು ಕೂತಲ್ಲಿಯೇ ತತ್ತರಿಸುತ್ತಾ ಆಚೆ ಈಚೆ ನೋಡಿಕೊಂಡು, ಏನನ್ನೊ ಮರೆತವನಂತೆ ತೋರಿಸಿ ಕೊಂಡು, ಪುರೋಹಿತರೊಡನೆ "ಒಮ್ಮೆ ಒಳಕೋಣೆಗೆ ಹೋಗಿ ಬರುವೆನು" ಎಂದು ಎದ್ದುಹೋದನು. ಆದರೆ ನಂದೂಲಾಲನು ಅದನ್ನು ಲೆಕ್ಕಿಸದೆ ಚಕಿತನಾಗಿ ಜಂಗಬಹದ್ದೂರನನ್ನೇ ನೋಡುತ್ತಾ, "ಲಕೋಟೆಯ ಮೇಲೆ ನನ್ನ ವಿಳಾಸ ಇತ್ತು; ಎಂದಿರಾ? ಕೊಲೆ ಹೊಂದಿದವನು ಯಾರೋ K. D. ಯಂತೆ ಅಲ್ಲವೇ?"

**ಜಂಗ:**— ಹೌದು. ಅವನ ಹೆಸರು ಗಂಗಾರಾಮನಂತೆ. ಕೆಲವು ವರ್ಷಗಳ ಹಿಂದೆ ಸಾಂಗಲಿಯಲ್ಲಿ ಆತನನ್ನು ನೋಡಿರುವುದಾಗಿ ಪರಶು ರಾಮ ದೀಕ್ಷಿತರು ನನ್ನೊಡನೆ ಅಂದರು. ಆ ಲಕ್ಕೋಟೆಗೆ ಗಂಗಾ ರಾಮನ ರಕ್ತವೆಲ್ಲಾ ಅಂಟಿಕೊಂಡಿತ್ತಂತೆ.

ಅಷ್ಟರಲ್ಲಿ ಮುಹೂರ್ತವು ಸಮೀಪಿಸಿತೆಂದು ಅವಸರದಿಂದ ಗಡ ಬಡಿಸುತ್ತಿದ್ದ ಪುರೋಹಿತರಿಬ್ಬರೂ ಇಕ್ಕಡೆಯ ಸಾಮೋಚ್ಚಾರಣೆ ಮಾಡಿ ಅಲ್ಲಿ ವಿಮುದಲಾಲನನ್ನು ಕಾಣದೆ "ವಿಮುದ ಲಾಲ್ ಸೇಟ್ ಜಿ!" ಎಂದು ಕೂಗಿ ಕರೆದರು. ಅಷ್ಟರಲ್ಲಿ ಪೋಲೀಸ್ ಜಮಾದಾರನೊಬ್ಬನು ಆ ಕೋಣೆಯೊಳಗೆ ಪ್ರವೇಶ ಮಾಡಿ "ಇಲ್ಲಿ ಪೋಪಟ್‌ಲಾಲರ ಮಗ— ವಿಮು ದಲಾಲನೆಂದರೆ ಯಾರು?" ಎಂದು ಪ್ರಶ್ನಿಸಿದನು. ಆಗ ಪುರೋಹಿ ತನು "ಓಹೋಯಿ! ವಿಮುದಲಾಲರೇ! ಯಾರೋ ನಿಮ್ಮನ್ನು ಕರೆಯುವಂತಿದೆ" ಎಂದು ಸ್ವರವೆತ್ತಿ ಕೂಗಿದನು. ವಿಮುದಲಾಲನು

ಕೋಣೆಯ ಕಿಟಿಕಿಯೊಳಗಿಂದ ಯಾರಿಗೂ ಕಾಣಿಸದಂತೆ ಇಣಿಕಿ ಪೋಲೀಸ್ ಜವಾದಾರನನ್ನು ಕಂಡು ಕೈಕಾಲು ತಣ್ಣಗಾದವನಂತೆ ಅಲ್ಲಿಯೆ ನಿಂತು ಬಿಟ್ಟನು. ಅಷ್ಟರಲ್ಲಿ ನಂದೂಲಾಲನು ಜವಾದಾರನನ್ನು ನೋಡಿ "ಜವಾದಾರರೇ! ಈಗ ಇಲ್ಲಿ ವಿವಾಹ ಲಗ್ನ ನಿಶ್ಚಯದ ಸಮಾರಂಭವು ಜರಗಲಿಕ್ಕಿದೆ. ಹೊರಗೆ ನೀವು ಸ್ವಲ್ಪ ಹೊತ್ತು ಕಾದಿದ್ದು ಬಾಯಿ ಸಿಹಿ ಮಾಡಿಕೊಂಡ ಮೇಲೆ ವಿಮುದಲಾಲನೊಡನೆ ಮಾತನಾಡಬಹುದು."

**ಜಮಾದಾರ**:—"ಅಷ್ಟು ವಿರಾಮವಿಲ್ಲ. ವಿಮುದಲಾಲನ ಮೇಲೆ ಅಮಲ್ದಾರ್ ಕಚೇರಿಯ ವಾರಂಟು ಇದೆ" ಎಂದು ಒಂದು ಕಾಗದವನ್ನು ಎತ್ತಿ ತೋರಿಸಿದನು. ಕುಳಿತವರೆಲ್ಲರೂ ಬೆಗಿಲುಗೊಂಡರು. ಮನೆಯ ಹೊರಭಾಗದಲ್ಲಿ ಪೋಲೀಸ್ ಪಹರೆ ಇದ್ದುದನ್ನು ಕಂಡು ವಿಮುದಲಾಲನು ಇನ್ನೇನೂ ಮಾಡಲಾರದೆ ಧೈರ್ಯವನ್ನು ತೋರ್ಪಡಿಸಿ "ಏನಿದು ವಾರಾಂಟು?" ಎಂದು ದೊಡ್ಡ ಸ್ವರದಿಂದ ಕೇಳಿದನು.

**ಜಮಾದಾರ**:—ವಿಮುದಲಾಲನೆಂದರೆ ನೀನೆ ಏನು? ಇಗೊ! ವಾರಾಂಟನ್ನು ಓದಿ ಹೇಳುತ್ತೇನೆ—"ಭಿಕಾಜಿ ಉರ್ಫ್ ವಿಮುದಲಾಲನು ತನ್ನ ಬಂದೀವಾಸದಿಂದ ತಪ್ಪಿಸಿಕೊಂಡು ಹೋದುದಲ್ಲದೆ, ಜಂಗ ಬಹದ್ದೂರರ ಉಮದಾಬಾದಿನ ಬಂಗಲೆಯೊಳಕ್ಕೆ ತನ್ನ ಜತೆಗಾರನಾದ ಗಂಗಾರಾಮನನ್ನು ಕಳುಹಿಸಿ, ಆತನು ಹೊರಗೆ ಬರುವ ವೇಳೆಯಲ್ಲಿ ಪಿಸ್ತೂಲಿನಿಂದ ಸುಟ್ಟು ಕೊಂದುಬಿಟ್ಟನು ಎಂಬ ಎರಡು ಆರೋಪಗಳ ಮೇಲೆ ಕೈದು ಮಾಡಲ್ಪಡಬೇಕು" ಎಂದು ಇದೆ. ಈಗ ಗಲಾಟೆ ಮಾಡದೆ ನಮ್ಮೊಂದಿಗೆ ಬಂದರೆ ಆಯಿತು. ಇಲ್ಲವಾದರೆ ನಿನ್ನ ಕೈಗಳಿಗೆ ಬೇಡಿಗಳನ್ನು ಬಿಗಿಯಬೇಕಾದೀತು" ಎಂದು ಮುಂದೊತ್ತಿ ವಿಮುದಲಾಲನ ಎರಡೂ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡನು. ಅಲ್ಲಿ ನೆರೆದ ಜನರೆಲ್ಲರೂ ಒಬ್ಬೊಬ್ಬರಾಗಿ ಮಾತೆತ್ತದೆ ಕಾಲು ಹಿಂತೆಗೆದರು. ಜಂಗಬಹದ್ದೂರನು ಅಸ್ವಾನಬಾಗಿಗೆ ಹಿಂತಿರುಗಿದನು.

## ಇಪ್ಪತ್ತೊಂದನೆಯ ಅಧ್ಯಾಯ

### ಭಿಕಾಜಿಯ ವಿಚಾರಣೆ

ಕಮ್ಮಿಶನರ ಕಚೇರಿಯಲ್ಲಿ 11 ಗಂಟೆ ಸಮಯದಲ್ಲಿ ಕಮ್ಮಿಶನರ ಸಾಹೇಬರು ವಿಮದಲಾಲನ ತಕ್ಸೀರಿನ ಮೊಕದ್ದಮೆಯ ವಿಚಾರವನ್ನು ಪ್ರಾರಂಭಿಸಿದ್ದರು. ಕೈದಿಯಾದ ವಿಮದಲಾಲನು ಬಿಚ್ಚುಕತ್ತಿಯ ಪೋಲೀಸ್ ಪಹರಿಯವರ ನಡುವೆ ಕೈದಿಯ ಗೂಡಿನೊಳಗೆ ನಿಂತಿದ್ದನು. ಹಿಂದುಗಡೆಯಲ್ಲಿ ಕಮ್ಮಿಶನರ ಧರ್ಮಾಸನದ ಎದುರುಗಡೆ ಕುರ್ಚಿಯಲ್ಲಿ ಕುಳಿತುಕೊಂಡು ಸೂಪರಿಂಟೆಂಡೆಂಟ್ ಮುರಾರಿ ರಾಯನು ಸರಕಾರದ ಕಡೆಯಿಂದ ಮೊಕದ್ದಮೆಯನ್ನು ನಡಿಸುತಿದ್ದನು. ಧರ್ಮಾಸನದ ಎದುರು ಕಡೆಯಲ್ಲಿ ಕೊಂಚ ದೂರದಲ್ಲಿ ಕೆಲವು ವಕೀಲರು ಕಾನೂನು ಪುಸ್ತಕಗಳ ಮತ್ತು ಮೊಕದಮೆಗಳ ಪತ್ರಗಳನ್ನು ಹಿಡಿದುಕೊಂಡು ಉದ್ದವಾದ ಒರಗುವ ಬೆಂಚಿನ ಮೇಲೆ ಒಂದು ದೊಡ್ಡ ಮೇಜಿನ ಸುತ್ತಲೂ ಕುಳಿತಿದ್ದರು. ಅದರ ಸುತ್ತಿನಲ್ಲಿ ಬೆಂಚುಗಳ ಮೇಲೆ ನಂದೂಲಾಲ ಮುಂತಾದ ಕೆಲವು ಗೃಹಸ್ಥರು ಬಂದು ಕೂಡಿದ್ದರು. ವಿಚಾರಣೆ ಕೋಣೆಯ ಒಂದು ಪಾರ್ಶ್ವದಲ್ಲಿ ಮೊಕದಮೆಯ ಸಾಕ್ಷಿಗಾರರು ನಿಂತಿದ್ದರು.

**ಕಮ್ಮಿಶನರು:**—ಸೂಪರಿಂಟೆಂಡೆಂಟ್ ಸಾಹೇಬರೇ! ಸರಕಾರ ಕಡೆಯ ವಿಚಾರಣೆಯು ಪ್ರಾರಂಭವಾಗಲಿ. ಈ ಕೈದಿಯ ಮೇಲೆ ಆರೋಪವೇನು?

**ಮುನಶಿ:**—ಒಂದು ಕಾಗದವನ್ನು ಎತ್ತಿಕೊಂಡು "ಈ ಕೈದಿಯು ಅಂದರೆ ಭಿಕಾಜಿ ಊರ್ಫ್ ವಿಮದಲಾಲನು ಜೈಲಿನಿಂದ ತಪ್ಪಿಸಿಕೊಂಡು K. D. ಗಂಗಾರಾಮನೊಡನೆ ಷಂಷೇರ್ ಜಂಗರ ಉಮದಾಬಾಗಿನ ಬಂಗಲೆಯನ್ನು — ನೇ ತಾರೀಕಿನ ಮಧ್ಯ ರಾತ್ರಿಯಲ್ಲಿ ದರೋಡೆ ಮಾಡಲು ಪ್ರಯತ್ನಿಸಿದನು. ಅವರೊಳಗೆ ಗಂಗಾರಾಮನು ಕಿಟಿಕಿಯಿಂದ ಹಿಂತಿರುಗಿ ಬರುವಾಗ ಈ ಭಿಕಾಜಿಯು ಆತನನ್ನು ಪಿಸ್ತೂಲಿನಿಂದ ಸುಟ್ಟು ಕೊಂದು ಬಿಟ್ಟನು. ಈ ತಕ್ಸೀರುಗಳಿಗಾಗಿ ಈ ಕೈದಿಯು ಉತ್ತರವಾದಿಯಾಗಿರುವನು" ಎಂದು ಓದಿದನು.

**ಕಮಿಶ್ನರನು**:-"ಸರಕಾರ ಕಡೆಯ ಸಾಕ್ಷಿಗಳ ವಿಚಾರವಾಗಲಿ."

**ದಫೆದಾರನು**:—"1 ನೇ ಸಾಕ್ಷಿ—ಷಂಷೇರ ಜಂಗ ಬಹದ್ದೂರರು!" ಎಂದು ಕರೆದನು. ಜಂಗಬಹದ್ದೂರನನ್ನೇ ನೋಡಿಕೊಂಡು ವಿಮುದಲಾಲನು ಪಹರೆಯವರೊಡನೆ "ಇಗೋ ಇವರೇ ನನ್ನ ತಂದೆಯು. ಇವರು ನನ್ನನ್ನು ಈ ಮೊಕದ್ದಮೆಯಿಂದ ಬಿಡುಗಡೆ ಮಾಡಿಸದೆ ಎಂದಿಗೂ ಇರಲಾರರು. ಇವರು ದೊಡ್ಡ ಶ್ರೀಮಂತರು. ನಿಮಗೆ ಗೊತ್ತಾಯಿತೇ?" ಎಂದು ಹೇಳಿದನು.

**ಜಂಗ**:—ನಾನು ಕಳವಿನ ರಾತ್ರೆ ಉಮದಾಬಾಗದಲ್ಲಿ ಉಳುಕೊಂಡಿರಲಿಲ್ಲ. ನಡುರಾತ್ರೆ ದಾಟಿದ ಸ್ವಲ್ಪ ಸಮಯದಲ್ಲಿಯೇ ಗಫೂರನು ನನ್ನನ್ನು ಎಚ್ಚರಿಸಿ ಉಮದಾಬಾಗಿನ ಹೊರಗೆ ಕೊಲೆಯಾಯಿತು ಎಂದು ತಿಳಿಸಿ, ಅಲ್ಲಿಂದ ಪೋಲೀಸ್ ಸುಪರಿಂಟೆಂಡೆಂಟ್ ಸಾಹೇಬರಿಗೂ ಈ ವರ್ತಮಾನವನ್ನು ತಿಳಿಸಿದ್ದನು. ತನ್ನ ಪರಮ ಆಪ್ತರಾದ ಪರಶುರಾಮ ದೀಕ್ಷಿತರು ಮಾತ್ರ ಆ ರಾತ್ರೆ ಬಂಗಲೆಯಲ್ಲಿ ಉಳುಕೊಂಡಿದ್ದರು.

**ಸುಪರಿಂಟೆಂಡೆಂಟ್**:—ಪರಶುರಾಮ ದೀಕ್ಷಿತರು ಈ ರಾತ್ರೆ ಒಬ್ಬರೇ ಉಮದಾಬಾಗಿನಲ್ಲಿ ಇರಲು ಕಾರಣವೇನು?

**ಜಂಗ**:—ಅವರು ನನ್ನ ಒಂದು ಹಳೇ ಗ್ರಂಥವನ್ನು ಓದುವ ಇಚ್ಛೆಯಿಂದ ಬಂದಿದ್ದರು. ನನ್ನ ಪುಸ್ತಕ ಭಂಡಾರವು ಉಮದಾಬಾಗದಲ್ಲಿರುವುದರಿಂದ ಅವರು ಆ ರಾತ್ರೆ ಅಲ್ಲಿಯೇ ಉಳಿದರು.

**ಸುಪರಿಂಟೆಂಡೆಂಟ್**:—ಸರಿ! ಮುಂದರಿಸಿರಿ.

**ಜಂಗ**:—"ನಡು ರಾತ್ರೆಯ ವರೆಗೆ ಓದುತ್ತಾ ಕುಳಿತು ದೀಪ ನೊಂದಿಸಿ ತಾನು ಮಲಗಿದೊಡನೆ ಕಿಟಿಕಿಯ ಬಾಗಿಲು ಸಟಕ್ಕನೆ ತೆರೆದಂತಾಗಿ ಯಾರೋ ಒಬ್ಬನು ಒಳ ನುಗ್ಗಿದನಂತೆ. ಅಲ್ಲಿ ತನ್ನನ್ನು ಕಂಡು ಹಿಂದಕ್ಕೆ ಓಡಿ ಮರವನ್ನು ಹತ್ತಿ ಕೆಳಗೆ ಇಳಿದನಂತೆ. ಆ ಮೇಲೆ 'ಕೊಲೆಯಾಯಿತು' ಎಂಬ ಕೂಗು ಕೇಳಿಸಿತು. ತಾನು ಹೊರಕ್ಕೆ ಹೋದಾಗ ಅಲ್ಲಿ ಬಿದ್ದವನು ರಕ್ತಪ್ರವಾಹದಲ್ಲಿ ತೊಯ್ದು ಸಾಯಲಿಕ್ಕಾಗಿದ್ದನು. ಆತನು ತಾನು ಹೇಳುವುದನ್ನೆಲ್ಲಾ ಬರೆದುಕೊಳ್ಳಲು ತನಗೆ

ಹೇಳಿ ಅದಕ್ಕೆ ಸಹಿ ಹಾಕಿದನು. ಅವನೇ ಸಾಂಗಲಿಯಲ್ಲಿ ತಾನು ಕೆಲವು ವರ್ಷಗಳ ಹಿಂದೆ ನೋಡಿದ್ದ ಗಂಗಾರಾಮನೆಂದು ದೀಕ್ಷಿತರು ನನ್ನೊಡನೆ ಹೇಳಿದರು! ಸತ್ತು ಬಿದ್ದವನ ದೇಹವನ್ನು ಪರೀಕ್ಷಿಸುವಾಗ ಅವರಿಗೆ ರಕ್ತದಲ್ಲಿ ತೊಯ್ದು ಒಂದು ಲಕ್ಕೋಟೆಯು ಸಿಕ್ಕಿತು. ಅದು ಈ ನಗರದ ಹುಂಡೀ ಸಾಹುಕಾರ ನಂದೂಲಾಲ ಸೇಟರ ವಿಳಾಸಕ್ಕೆ ಬರೆದಿತ್ತು. ಆ ದೇಹವನ್ನೂ ಆ ಲಕೋಟೆಯನ್ನೂ ಪೋಲೀಸ್ ಠಾಣ್ಯಕ್ಕೆ ಕೊಂಡು ಹೋದರೆಂದು ದೀಕ್ಷಿತರು ನನಗೆ ತಿಳಿಸಿದರು. ಇಷ್ಟೇ ನನಗೆ ಗೊತ್ತಿದೆ.''

ಹೀಗನ್ನುವಾಗ ವಿಮದಲಾಲನು ಪಹರೆಯವರೊಡನೆ "ನೋಡಿ ದಿರಾ! ಎಷ್ಟು ಚಮತ್ಕಾರವಾಗಿ ಸಾಕ್ಷಿ ನುಡಿಯುತ್ತಾರೆ. ಅವರು ನನ್ನ ಮೇಲೆ ದೂರು ಇಡುತ್ತಾರೇನು?'' ಎನ್ನುತಿದ್ದನು.

**ಕಮ್ಮಿಶನರು**:—ಮುಖ್ಯ ಸಾಕ್ಷಿಯಾದ ಪರಶುರಾಮ ದೀಕ್ಷಿತರು ಬಂದಿರುವರೇ?

**ಸುಪರಿಂಟೆಂಡೆಂಟ್**:—ಇಲ್ಲ. ಅವರು ಈ ಊರಲ್ಲಿಲ್ಲ. ಅವರಿಗೆ ಸಮ್ಮನ್ಸ್ ಜಾರಿಯಾಗುವುದಕ್ಕೆ ಸ್ವಲ್ಪ ವಿಳಂಬವಾದೀತು. ವಿಚಾರ ಮುಗಿಯುವ ವೊದಲೇ ಅವರನ್ನು ಹಾಜರು ಪಡಿಸುವೆವು.

ಅನಂತರ ಮುನಶಿಯು ಚಮನಲಾಲನನ್ನು ಕರೆಯಬೇಕೆಂದು ದಫೆದಾರನಿಗೆ ತಿಳಿಸಿದನು. ಚಮನಲಾಲನು ಮುಂದೆ ಬರುವಾಗ ತಲೆ ತಗ್ಗಿಸಿ ವಿಮದಲಾಲನು ಕಣ್ಣಂಚಿನಿಂದ ಆತನನ್ನು ನೋಡುತ್ತಾ "ಈ ಪೀಡೆಯು ಎಲ್ಲಿಂದ ಬಂತಪ್ಪಾ!'' ಎಂದು ಪೋಲೀಸಿನವರು ಕೇಳುವ ಹಾಗೆ ತನ್ನಲ್ಲಿಯೇ ಅಂದುಕೊಳ್ಳುತಿದ್ದನು.

**ಕಮ್ಮಿಶನರ್**:—ಈ ಸಾಕ್ಷಿಗಾರನು ಯಾರು?

**ಮುನಶಿ**:-ಚಮನಲಾಲನೆಂಬವನು; ಜಂಗಬಹದ್ದೂರರ ಚಾಕರನೊಬ್ಬನು.

**ಕಮ್ಮಿಶನರ್**:—ಅವನು ಹೇಳುವುದೇನು?

**ಮುರಾರಿ ರಾವ್**:—ಭಿಕಾಜಿಯನ್ನು ಕುರಿತು ನೀನು ಏನು ಹೇಳಲಿರುವೆ?

**ಚಮನ:**—“ಈಗ ಸುಮಾರು 20 ವರ್ಷಗಳ ಹಿಂದೆ ನಾನು ಸಾಂಗಲಿಯಲ್ಲಿ ವಾಸವಾಗಿದ್ದೆನು. ಆಗ ಅಲ್ಲಿ ಜನಪೀಡಕನಾದೊಬ್ಬ ದೊಡ್ಡ ಪೋಲೀಸ ಆಫಿಸರನಿದ್ದನು.”ಎನ್ನುವಷ್ಟರಲ್ಲಿ ಮುರಾರಿ ರಾಯನು ಒಮ್ಮೆ ಫಕ್ಕನೆ ತಲೆ ಎತ್ತಿ ಕಡೆಗಣ್ಣಿನಿಂದ ಅವನನ್ನು ನೋಡಿ, ಕಮಿಶನರ ಕಣ್ಣು ತಪ್ಪಿಸಿ ಏನೋ ರಿಕಾರ್ಡು ಹುಡುಕುವಂತೆ ತಲೆ ಬಗ್ಗಿಸಿದನು. ಚಮನಲಾಲನು ಮುಂದರಿಸಿದನು:—

“ಈ ಪೋಲೀಸ ಆಫೀಸರನು ನನ್ನ ಅಣ್ಣನ ಮೇಲೆ ಸುಳ್ಳು ಮೊಕದ್ದಮೆಯನ್ನು ಠರಾಯಿಸಿ ಜೈಲಿಗೆ ಅಟ್ಟಿದ ನಿಮಿತ್ತ ನನಗೆ ಈ ಪೋಲೀಸ ಆಫೀಸರನ ಮೇಲೆ ತುಂಬಾ ಸಿಟ್ಟಿತ್ತು. ಒಂದು ದಿನ ಕತ್ತಲಾದೊಡನೆ ಅವನು ಉದ್ದವಾದ ಒಂದು ಪೆಟ್ಟಿಗೆಯನ್ನು ತನ್ನ ಹೆಗಲ ಮೇಲೇರಿಸಿಕೊಂಡು ಸರಸರನೆ ಊರ ಹೊರಗಿನ ಕಾಡಿನ ಕಡೆಗೆ ಹೋಗುತಿದ್ದನು. ಅವನ ಒಂದು ಕೈಯಲ್ಲಿ ಚಿಕ್ಕದೊಂದು ಹಾರೆಗೋಲು ಇತ್ತು. ನನಗೆ ಏನೊ ಒಂದು ಬಗೆಯ ಸಂದೇಹವು ಬಂದು ದೂರ ದಿಂದ ಆತನನ್ನು ಹಿಂಬಾಲಿಸಿ ಹೋಗುತ್ತಿದ್ದೆನು. ಆತನು ಒಂದು ಮರದ ಅಡಿಯಲ್ಲಿ ಆ ಪೆಟ್ಟಿಗೆಯನ್ನು ಇರಿಸಿ ಹಾರೆಗೋಲಿನಿಂದ ನೆಲ ವನ್ನು ಅಗೆಯ ತೊಡಗಿದನು. ನಾನು ಅದನ್ನೆ ನೋಡುತ್ತಾ ನಿಂತೆನು. ಅವನು ಒಂದು ಕುಣಿಯನ್ನು ಅಗಿದು ಅದರಲ್ಲಿ ಆ ಪೆಟ್ಟಿಗೆಯನ್ನು ಇಳಿಸಿ ತರಗೆಲೆಗಳಿಂದ ಮುಚ್ಚಿ ಅತ್ತಿತ್ತ ನೋಡದೆ ಹೊರಟು ಹೋದನು. ಕಳವಿನಲ್ಲಿ ತನ್ನ ಪಾಲನ್ನು ಆತನು ಅವಿತಿಟ್ಟಿರುವನೆಂದು ಭಾವಿಸಿ ನಾನು ಕುಣಿಯನ್ನು ಮುಚ್ಚಿದ ತರಗೆಲೆಯನ್ನೂ ಮಣ್ಣನ್ನೂ ತೆಗೆದು ಪೆಟ್ಟಿಗೆ ಯನ್ನು ಎತ್ತಿ ಬಾಗಿಲನ್ನು ತೆರೆದಾಗ ಅದರಲ್ಲಿ ಒಂದು ಮಗು ಸುಖವಾಗಿ ನಿದ್ದೆ ಹೋಗುತಿತ್ತು. ಇಂಥ ಕಟುಕನನ್ನು ಮೊದಲೆ ತಿಳಿದರೆ ನಾನು ಕೊಂದು ಹಾಕುತಿದ್ದೆನೆಂದು ಪಶ್ಚಾತ್ತಾಪ ಪಟ್ಟೆನು.” ಎನ್ನುವಷ್ಟರಲ್ಲಿ ಮುರಾರಿರಾಯನು ಕುರ್ಚಿಯಲ್ಲಿ ಕುಳಿತವನು ಒಮ್ಮೆ ಭುಜಗಳನ್ನು ಅಲುಗಿಸುತ್ತ ತಿರಿಗಿ ಏನೊ ಬರೆದುಕೊಳ್ಳುವಂತೆ ನಟಿಸಿದನು. ವಿಮದ ಲಾಲನು ಪಹರೆಯವರನ್ನು ಕೈಯಿಂದ ತಟ್ಟುತ್ತ “ಇಗೊ! ಇವನು ಹರಟೆ ಪುರಾಣ ಎಷ್ಟು ಉದ್ದ ಮಾಡುತ್ತಾನಪ್ಪಾ!” ಎಂದನು. ಆಗ ಅವರು ‘ಸುಮ್ಮನಿರು’ ಎಂದು ಗದರಿಸಿದರು.

**ಚಮನ**:—ಆ ಶಿಶುವನ್ನು ನಾನು ಎತ್ತಿಕೊಂಡು ಮಕ್ಕಳಿಲ್ಲದ ನನ್ನ ಹೆಂಡತಿಯು ಕೈಗೆ ಒಪ್ಪಿಸಿದೆನು. ಅವಳಿಗೆ ತುಂಬಾ ಆನಂದ ವಾಯಿತು. ನಾವು ಆತನಿಗೆ 'ಭಿಕಾಜಿ' ಎಂದು ಹೆಸರಿಟ್ಟು ಮಮತೆ ಯಿಂದ ಸಲಹಿದೆವು.

**ವಿಮದ**:—"ಆ ಕೂಸು ನಾನೇ. ಈಗ ಇವನು ನಾಲಗೆ ಇಷ್ಟು ಉದ್ದ ಮಾಡುವ ಬದಲಾಗಿ ನನ್ನ ತಂದೆಯ ಹೆಸರನ್ನು ಬೇಗನೆ ಗಂಟಲಿ ನಿಂದ ಕಾರಿ ಬಿಡಬಹುದಲ್ಲ!" ಎಂದು ಔಡನ್ನು ಕಚ್ಚಿದನು. ಪಹರೆ ಯವರು ಮೂಗಿನ ಮೇಲೆ ಬೆರಳಿಟ್ಟು ಆತನಿಗೆ ಸುಮ್ಮನಿರ ಹೇಳಿದರು.

**ಚಮನ**:—ಅನಂತರ ನಾನು ಈ ಸಮಾಚಾರ ಎಲ್ಲಾದರೂ ಆ ಪೋಲೀಸ ಆಫೀಸರನ ಕಿವಿಗೆ ಬಿದ್ದೀತೆಂದು ನೆನಸಿ ಇಲ್ಲಿಗೆ ಸಮೀಪ ವಿರುವ ಒಂದು ಹಳ್ಳಿಯನ್ನು ಸೇರಿ ಕೂಲಿ ಕೆಲಸದಿಂದ ಜೀವಿಸ ತೊಡಗಿ ದೆನು. ಆದರೆ "ಸರ್ಪದ ಹೊಟ್ಟೆಯಿಂದ ಸರ್ಪವೇ ಹುಟ್ಟೀತು" ಎಂಬಂತೆ ಈ ಮಗುವಿನ ಮುಂದಿನ ಚರ್ಯೆ ಚೇಷ್ಟೆಗಳಿಂದ ತಿಳಿಯಿತು.

**ಕಮ್ಮಿಶನರ್**:—ಈ ಪೋಲೀಸ ಆಫೀಸರರು ಯಾರು?

**ಚಮನ**:—ಆ ಕಾಲದ ಸರಕಾರಿ ರಿಕಾರ್ಡಿನಿಂದ ಗೊತ್ತಾಗ ಬಹುದು.

ಆಗ ಕಮ್ಮಿಶನರು 'ಸೂಪರಿಂಟೆಂಡೆಂಟ್ ಸಾಹೇಬರೇ' ಎನ್ನು ವಷ್ಟರಲ್ಲಿ ಅಲ್ಲಿ ನೆರೆದ ಜನರ ಗುಂಪಿನಿಂದ ಅವಕುಂಠಿತಳಾದ ಒಬ್ಬ ಸ್ತ್ರೀ ಪಹರೆಯವರನ್ನೂ ಲೆಕ್ಕಿಸದೆ ಭಿಕಾಜಿಯನ್ನು ಅಪ್ಪಿ ಹಿಡಿದು, "ಹಾಯ್, ಹಾಯ್! ಆ ದುರಾತ್ಮನು ನನ್ನ ಮಗು ಹುಟ್ಟುವಾಗಲೇ ಸತ್ತು ಹೋಗಿತ್ತು ಎಂದು ನನ್ನನ್ನು ವಂಚಿಸಿದನೆ? ಆ ಮಗುವು ಆಗಲೆ, ನನಗೆ ಸಿಕ್ಕಿದ್ದರೆ ಈಗ ಅದಕ್ಕೆ ಈ ಕಷ್ಟ ಬರುತಿದ್ದಿಲ್ಲ. ಈಗ ನನ್ನ ಮುಂದೆ ಅದು ಗಲ್ಲಕ್ಕೇರುವುದನ್ನು ನೋಡಿ ನನ್ನ ಕಣ್ಣುಗಳು ಒಡೆಯ ಲಾರವೇ? ದೇವರೇ?" ಎಂದು ಅರಚುತ್ತ ಸ್ಮೃತಿ ತಪ್ಪಿ ಬಿದ್ದಳು. ಇನ್ನೊಂದು ಕಡೆ ಸೂಪರಿಂಟೆಂಡೆಂಟ ಮುರಾರಿ ರಾಯನು 'ನಾ—ನು—' ಎಂದು ಏನೊ ಹೇಳುವವನಂತೆ ಎದ್ದು ಕುರ್ಚಿಯ ಮೇಲಿಂದ ಕೆಳಕ್ಕೆ ಬಿದ್ದನು.

ಕಮ್ಮಿಶನರ್ ಸಾಹೇಬರು ಆ ಸ್ತ್ರೀ ಯಾರೆಂದು ನೋಡಲು ದಫೆದಾರನಿಗೆ ಹೇಳಿದರು. ಅವಳ ಅವಕುಂಠನವನ್ನು ತೆರೆದಾಗ, ಅವಳು ನಂದೂಲಾಲ ಸೇಟಜೀಯ ಹೆಂಡತಿಯೆಂದು ಅಲ್ಲಿ ನೆರೆದ ಒಬ್ಬಿಬ್ಬರು ಗುರುತಿಸಿದರು. ಅದನ್ನು ನೋಡಿ ನಂದೂಲಾಲ ಸೇಟನು ತನ್ನ ಹೆಂಡತಿಯು ವಿವಾಹವಾಗುವ ಮೊದಲೇ ಒಂದು ಮಗುವನ್ನು ಹಡೆದು ತನ್ನನ್ನು ವಂಚಿಸಿದಳೇ ಎಂದು ತನ್ನ ತಲೆಯನ್ನು ಕೈಯಿಂದ ಮೆಲ್ಲನೆ ಬಡಕೊಂಡು ಕಚೇರಿಯಿಂದ ಯಾರಿಗೂ ಕಾಣಿಸಿಕೊಳ್ಳದೆ ಪಲಾಯನ ಮಾಡಿದನು.

**ಚಮನ**:— ಹುಜೂರ್! ಈಗ ಈ ಹುಡುಗನ ತಂದೆ ತಾಯಿ ಯಾರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇಷ್ಟೇ. "ಬೇವಿನ ಬೀಜದಿಂದ ಮಾವಿನ ಗಿಡ ಹುಟ್ಟಲಾರದು" ಎಂದು ಹೇಳಿ ಸುಮ್ಮಗಾದನು. ಸಾಕ್ಷಿಗಾರರು ಕೆಲವರು ಬಾರದ ನಿಮಿತ್ತದಿಂದಲೂ ಸರಕಾರಿ ಕಡೆಯಿಂದ ವ್ಯವಹರಿಸುವ ಸೂಪರಿಂಟೆಂಡೆಂಟರೇ ಸ್ಮೃತಿ ತಪ್ಪಿ ಕೋರ್ಟಿನಲ್ಲಿ ಬಿದ್ದುದರಿಂದಲೂ ಮೊಕದ್ದಮೆಯ ವಿಚಾರವನ್ನು ಮುಂದರಿಸಿಟ್ಟು ಕಮ್ಮಿಶನರ್ ಸಾಹೇಬರು ಕಚೇರಿಯಿಂದ ಎದ್ದು ಹೋದರು.

---

## ಇಪ್ಪತ್ತೇಳನೆಯ ಅಧ್ಯಾಯ

### ಎರಡನೆ ಋಣ ವಿಮೋಚನೆ

ಮುರಾರಿ ರಾಯನು ಚೇತರಿಸಿಕೊಂಡ ಮೇಲೆ ಯಾರಿಗೂ ಮೋರೆ ತೋರಿಸದೆ ನಾಚಿಕೆಯಿಂದ ತಲೆ ತಗ್ಗಿಸಿ, ಒಂದು ಸಾರೋಟಿನಲ್ಲಿ ಕುಳಿತು, ಅದರ ಪರ್ದೆಗಳನ್ನು ಮುಚ್ಚಿಸಿ, ನೇರಾಗಿ ಮನೆಯ ದಾರಿ ಹಿಡಿದನು. ಅವನು ಮನೆಯ ಮೆಟ್ಟಲು ಹತ್ತುವಷ್ಟರಲ್ಲಿ ಮನೆಯ ಚಾಕರನೊಬ್ಬನು ಅವನನ್ನು ಕಂಡು "ಮಗು! ಮೋಹನ—ಯಜಮಾನಿಯವರು—" ಎಂದು ಏನನ್ನೊ ಹೇಳತೊಡಗಿ ಬೆರಗಾಗಿ ನಿಂತನು. ಗಾಬರಿಯಾದ ಮುರಾರಿ ರಾಯನು ಕಚೇರಿಯಲ್ಲಿ ನಡೆದ ವಿಷಯವೆಲ್ಲ ತನ್ನ ಮನೆಗೆ ತಿಳಿದಿರಬಹುದೆಂದು ಊಹಿಸಿ ಬೇಗ ಬೇಗನೆ ಮನೆಯೊಳಗೆ ಕಾಲಿಟ್ಟನು. ಅಲ್ಲಿ ಒಂದು ಕೋಣೆಯೊಳಗೆ ಆತನ ಪತ್ನಿಯಾದ

ಚಿತ್ತರಂಜನೆ ನಿಶ್ಚೇಷ್ಟಿತಳಾಗಿ ಬಿದ್ದಿದ್ದಳು. ಅವಳ ಕಾಲಬುಡದಲ್ಲಿ ಅವಳ ಸವತಿಯ ಮಗಳಾದ ಮಾಲಿನಿಯು ಕಣ್ಣೀರು ಮಿಡುತ್ತ ಕುಳಿತಿದ್ದಳು.

ಮುರಾರಿ ರಾಯನು ಮಗಳಿಂದ ತಣ್ಣೀರನ್ನು ತರಿಸಿ ಚಿತ್ತ ರಂಜನೆಯ ಮುಖಕ್ಕೆ ಚಿಮುಕಿಸಿ, ಅವಳು ಚೇತರಿಸುವಂತೆ ಮಾಡಿ, “ಇದೇನವಸ್ಥೆ!” ಎಂದು ಕೇಳಿದನು. ಆಗ ಅವಳು ಗಟ್ಟಿ ಸ್ವರದಿಂದ ಪ್ರಲಾಪಿಸುತ್ತ “ಮಗು ಮೋಹನ! ನನ್ನ ಮಾಟವು ನನಗೆನೆ ತಿರುಗಿತು” ಎಂದು ಮಾಲಿನಿಯ ಕಡೆಗೇ ನೋಡಿದಳು. ಏನೊ ಗುಟ್ಟಿನ ಪ್ರಸಂಗ ವಿದೆ ಎಂದು ತಿಳಿದು ಅವಳು ತನ್ನ ಅಜ್ಜನು ಮಲಗಿರುವ ಕೋಣೆಯ ಕಡೆಗೆ ಹೋಗಿ ಒಳಗೆ ಹೋಗಲು ಕಾಲು ಬಾರದೆ ನಿಂತಳು.

ಅಷ್ಟರಲ್ಲಿ “ತನ್ನ ವಿಚಾರವಲ್ಲವಿದು, ಇದು ಹೊಸ ವಿಚಾರ!” ಎಂದು ಮನಸ್ಸಿನಲ್ಲಿ ಅಂದುಕೊಂಡು ಮುರಾರಿ ರಾಯನು “ಏನು? ಮೋಹನನ ಅವಸ್ಥೆ ಏನು?” ಎಂದು ಕಾತರನಾಗಿ ಪ್ರಶ್ನಿಸಿದನು. ಆಗ ಚಿತ್ತರಂಜನೆ ತನ್ನೊಬ್ಬನೆ ಮಗುವಿನ ಹಿತವನ್ನು ಬಯಸಿ ದುರಾಸೆ ಯಿಂದ ತಾನೆ ಆತನಿಗೆ ವಿಷವನ್ನು ಊಡಿಸಿದೆನೆಂದು ತನ್ನನ್ನು ಬೈದು ಕೊಂಡಳು. ಮುರಾರಿ ರಾಯನಿಗೆ ಇದಷ್ಟು ದೊಡ್ಡ ಒಗಟಾಯಿತು. “ನೀನೇನು ಹೇಳುವೆ? ಬೇಗನೆ ಬಾಯಿ ಬಿಚ್ಚಿ ಒದರು!” ಎಂದು ಇನ್ನೊಮ್ಮೆ ಕೇಳಿದನು. ಆಗ ಅವಳು ತನ್ನ ಪೂತನೀ ಪ್ರಯೋಗದ ಕಥೆಯನ್ನು ಹೀಗೆ ಹೇಳತೊಡಗಿದಳು:—“ನಾನು ಈ ಮನೆಗೆ ಬಂದಂದಿನಿಂದ ನಮ್ಮ ಮಾವನವರಿಗೆ ನನ್ನ ಮೇಲೆ ತಾತ್ಸಾರ, ದ್ವೇಷ. ನನ್ನನ್ನು ಕಂಡರೆ ಅವರು ಕೆಂಡ ಕಾರುತಿದ್ದರು. ಆದರೆ ನಿಮ್ಮೆದುರಿ ನಲ್ಲಿ ಅದನ್ನು ತೋರ್ಪಡಿಸುತಿದ್ದಿಲ್ಲ. ನಾನೇನು ಕೊಟ್ಟರೂ ಅವರು ತಿನ್ನುತಿದ್ದಿಲ್ಲ, ಕುಡಿಯುತಿದ್ದಿಲ್ಲ. ಮಾಲಿನಿಯ ಕೈಯಿಂದ ಮಾತ್ರ ಪಥ್ಯವನ್ನೊ ಔಷಧವನ್ನೊ ಅವರು ಸೇವಿಸುತಿದ್ದರು. ಅಪ್ಪಿತಪ್ಪಿ ನಮ್ಮ ಮೋಹನನು ಅವರ ಕೋಣೆಯೊಳಗೆ ಕಾಲಿಟ್ಟನೆಂದರೆ ಅವರು ನಾಗರ ಹಾವಿನಂತೆ ಬುಸುಗುಟ್ಟುತಿದ್ದರು. ನನ್ನ ಮೇಲೆ ದ್ವೇಷವಿದ್ದರೆ ಅದನ್ನು ಆ ಪಾಪದ ಕೂಸಿನ ಮೇಲೆಯೂ ತೋರಿಸಬೇಕೇ? ಅದು ಅವರಿಗೆ

ಏನು ಹಾನಿ ಮಾಡಿದೆ? ಅವರು ಈಗ ಒಂದು ವರ್ಷದಿಂದ ಹಾಸಿಗೆ ಹಿಡಿದು ಮಲಗಿದ ಮೇಲಂತೂ ಅವರು ನನ್ನನ್ನು ಕಂಡರೆ ತುಟಿಗಳನ್ನು ಕಚ್ಚಿಕೊಂಡು ಚುರಚುರನೆ ನೋಡುತ್ತಿದ್ದರು. ನಾನು ಅವರಿಗೇನೊ ಮದ್ದು ಹಾಕಿಸಿದೆನೆಂದು ಅವರ ಅಭಿಪ್ರಾಯವಿತ್ತು. ಹೀಗಾಗಿ ನಾನು ಆ ಕಡೆಗೆ ಹೋಗುತ್ತಿರಲೇ ಇಲ್ಲ. ಅವರ ಪಥ್ಯಪಾನಾದಿಗಳ ಕೆಲಸ ವನ್ನೆಲ್ಲ ಮಾಲಿನಿಯೇ ನೋಡಿಕೊಳ್ಳುತಿದ್ದಳು. ಅವಳು ಅವರಿಗೆ ಏನು ಮಂತ್ರಮಾಯಾಜಾಲವನ್ನು ಪಸರಿಸಿದಳೆಂದು ನಾನರಿಯೆ. ಈಚೆಗೆ 2 ದಿನಗಳ ಹಿಂದೆ ಅವರು ಗೋಪ್ಯವಾಗಿ ವಕೀಲರನ್ನು ಕರೆಯಿಸಿ ತನ್ನ 50 ಸಾವಿರ ರೂಪಾಯಿಯ ಜೀವಣಾತಿಗಳನ್ನು ಮಾಲಿನಿಯ ಹೆಸರಿನಲ್ಲಿ ಮೀಲು ಬರೆದಿಟ್ಟರು. ಇದನ್ನು ಅವರ ಚಿಕಿತ್ಸೆ ಮಾಡುವ ಡಾಕ್ಟರರ ಬಾಯಿಯಿಂದ ನಾನು ತಿಳಿದೆನು. ಹೀಗಾಗಿ ದುಃಖದಿಂದ ನಾನು ವಿಷ ಕುಡಿದು ಸತ್ತ ಮೇಲಾದರೂ ಈ ಮುದಿ ಅಜ್ಜನು ನನ್ನ ಮಗುವಿನ ಮೇಲೆ ಕನಿಕರ ತೋರಿಸಬಹುದೆಂದು ನೆನಸಿ ನಾನು ವಿಷವನ್ನು ತರಿಸಿಟ್ಟಿದ್ದೆನು"— ಎನ್ನುವಷ್ಟರಲ್ಲಿ

"ಶೀಖಾ ಸುಳ್ಳು! ಅದರ ಕಥೆಯೇ ಬೇರೆ" ಎಂದು ಗಂಭೀರ ಸ್ವರವೊಂದು ಅವನ ಹಿಂದಿನಿಂದ ಕೇಳಿಸಿತು. ದೀರ್ಘಕಾಯವೊಂದು ಆತನಿಗೆ ಕಾಣಿಸಿತು. ಆತನನ್ನು ನೋಡಿ ಮುರಾರಿ ರಾಯನು ಔಡು ಗಳನ್ನು ನೆತ್ತರು ಹಾರುವಂತೆ ಕಚ್ಚುತ್ತಾ "ಘಾತುಕಾ! ಅಧಮಾ! ಕಚೇರಿಯಲ್ಲಿ ಬಹಿರಂಗವಾಗಿ ನನಗೆ ಅಪಮಾನವಾಗುವ ಹಂಚಿಕೆ ಯನ್ನು ಹೂಡಿದ್ದಲ್ಲದೆ ನನ್ನ ಮನೆಯೊಳಗೂ ನನ್ನನ್ನು ಹಿಂಬಾಲಿಸಿ ಬಂದಿರುವೆಯಾ?" ಎಂದು ಏರಿಸಿದ ಸ್ವರದಿಂದ ಕೇಳಿದನು. ಬಂದ ವನು ಜಂಗಬಹದ್ದೂರನಾಗಿದ್ದನು.

**ಜಂಗ**:— ನಿನ್ನ ಹೆಂಡತಿಯು ವಿಷಪ್ರಯೋಗದ ಗ್ರಂಥವನ್ನು ನನ್ನಲ್ಲಿಂದ ತರಿಸಿ ಓದಿ ಒಂದು ಬಗೆಯಲ್ಲಿ ನನ್ನ ಶಿಷ್ಯಳಂತಿದ್ದಾಳೆ. ಅವಳ ಪಾಠವೆಷ್ಟಾಯಿತು? ಎಂದು ತಿಳಿಯುವ ಕುತೂಹಲದಿಂದ ಬಂದು ಬಿಟ್ಟೆ.

**ಮುರಾರಿ**:— ಅದೇನನ್ನು ಹೇಳುವೆ?

**ಜಂಗ:**—ಸಾವಧಾನದಿಂದ ಕೇಳು. ಇವಳು ನಿನ್ನ ತಂದೆಯ ಸ್ವಾರ್ಜಿತ ಧನವನ್ನು ಮಾಲಿನಿಯು ಪಡೆದಾಳೆಂಬ ಶಂಕೆಯಿಂದ ಮೊದಲು ಆತನಿಗೆ ಮದ್ದುಮಾಯೆಯಿಂದ ಹಾಸಿಗೆ ಹಿಡಿಸಿದಳು. ಅನಂತರ ವಿಷಪ್ರಯೋಗವನ್ನು ಕಲಿತುಕೊಳ್ಳುವ ಉದ್ದೇಶದಿಂದ, ಅವಳು ನನ್ನಲ್ಲಿಯ ವೈದ್ಯಗ್ರಂಥವನ್ನು ತರಿಸಿದಳು. ವಿಷಪ್ರಯೋಗದ ಪ್ರಕರಣವುಳ್ಳ ಅಧ್ಯಾಯದ ಹಾಳೆಗಳ ಮೇಲೆ ಮಡಿಗಳೂ ಬೆರಳ ಬೆವರೂ ಕಂಡುಬಂದುದರಿಂದ ನಿನ್ನ ಹೆಂಡತಿಯು ಅದನ್ನು ಮಾತ್ರ ಚೆನ್ನಾಗಿ ಪಠಿಸಿರುವಳೆಂದು ನನಗೆ ಗೊತ್ತಾಯಿತು. ಅದರ ಅನಂತರ ನಿನ್ನ ಮಗಳಾದ ಮಾಲಿನಿಗೂ ನಿನ್ನ ಮಾವನಿಗೂ ಹಕೀಮನಾಗಿ ಗೋಪ್ಯದಿಂದ ಔಷಧಗಳನ್ನು ಕೊಟ್ಟು ಅವರ ಮೇಲೆ ವಿಷಪ್ರಯೋಗದ ಪ್ರಭಾವವು ಕಂಡುಬಾರದಂತೆ ಎಚ್ಚರವಿಟ್ಟಿದ್ದೆನು. ನಿನ್ನ ತಂದೆಯು ವೀಲು ಬರೆಸುವಾಗ ಹಾಜರಿದ್ದ ಡಾಕ್ಟರನೂ ನಾನೇ. ಅದೇ ದಿನ ನಿನ್ನ ಹೆಂಡತಿಗೆ ಅದು ಗೊತ್ತಾಗಿ ನಿನ್ನ ತಂದೆಯನ್ನೂ ಮಗಳನ್ನೂ ಕೊಲ್ಲಬೇಕೆಂದು ಅವಳು ನೂತನ ವಿಷವನ್ನು ತರಿಸಿಟ್ಟಳು. ಹಕೀಮನ ವೇಷದಿಂದ ನಾನು ಅಲ್ಲಲ್ಲಿ ಚಿಕಿತ್ಸೆಯನ್ನು ಮಾಡುವಾಗ ಅಪೂರ್ವ ಔಷಧಿಗಳನ್ನು ಯಾವ ಅಂಗಡಿಯಿಂದ ತರಿಸುತಿದ್ದೆನೋ ಆ ಅಂಗಡಿಯ ಹೆಸರನ್ನು ನಿನ್ನ ಹೆಂಡತಿಯು ನನ್ನಿಂದ ಮೊದಲೇ ತಿಳಿದುಕೊಂಡಿದ್ದು ಈ ವಿಷವನ್ನು ಅಲ್ಲಿಂದಲೇ ತರಿಸಿಟ್ಟಳು. ಅಲ್ಲಿದ್ದ ನನ್ನ ವಿಶ್ವಾಸದ ವ್ಯಕ್ತಿಯೊಬ್ಬನು ಆ ಕ್ಷಣವೇ ಆ ಸಮಾಚಾರವನ್ನು ನನಗೆ ತಿಳಿಸಿದನು. ಅಂದಿನಿಂದ ನಾನು ನಿನ್ನ ಮನೆಗೆ ನೀನಿಲ್ಲದ ವೇಳೆಯಲ್ಲಿ ನಿನ್ನ ತಂದೆಯ ಹಕೀಮನಾಗಿ ದಿನಕ್ಕೆರಡು ಸಲ ಬರತೊಡಗಿದೆನು. ನಿನ್ನ ಹೆಂಡತಿಯು ತರಿಸಿದ ವಿಷವು ಅತೀ ಸುವಾಸನೆಯುಳ್ಳ ಅತ್ತರಿನಂತಿದೆ. ಅದನ್ನು ಮೈಯ ಬಟ್ಟೆಯ ಮೇಲೆ ಚಿಮುಕಿಸಿದರೆ ಅದು ಸ್ವೇದನಾಳಗಳಲ್ಲಿ ಸೇರಿ ಅಲ್ಲಿಂದ ರಕ್ತದೊಳಗೆ ಹರಡುತ್ತದೆ. ಆಗ ಮೈಯಲ್ಲೆಲ್ಲ ಅಪೂರ್ವ ರೀತಿಯಲ್ಲಿ ಉರಿ ಎದ್ದು ಕೈಕಾಲು ಬಡಿದು ಪ್ರಾಣಹೋಗುವುದಲ್ಲದೆ, ಅದಕ್ಕೆ ಉಪಶಮನವೇ ಇಲ್ಲ. ಅದನ್ನೆ ಔರಂಗಜೇಬನು ರಾಣಾಜಸವಂತಸಿಂಗನ ಮಗನಿಗೆ ಕೊಟ್ಟ ಬಹುಮಾನದ ಖಿಲ್ಲತಿನ ಮೇಲೆ ಪ್ರೋಕ್ಷಣೆಮಾಡಿಸಿ

ಕೊಲ್ಲಿಸಿದ್ದನು. ವಿಧಿಯ ನಿರ್ಧಾರದಂತೆ ನಿನ್ನ ಮಗನು ಅದನ್ನು ಅತ್ತರೆಂದು ಭಾವಿಸಿ ತನ್ನ ಬಟ್ಟೆಯ ಮೇಲೆ ಚಿಮುಕಿಸಿಕೊಂಡನು. ಅದು ಅವನ ರಕ್ತದೊಳಗೆ ಪಸರಿಸಿ ಈಗ ಆತನು ಮೃತನಾಗಿರುವನು, ಇದು ನಿಜವೊ ಅಲ್ಲವೊ ಎಂದು ಆಚೆ ಕೋಣೆಯಲ್ಲಿ ಇಣಿಕಿನೋಡು" ಎಂದನು.

ಜಂಗಬಹದ್ದೂರನು ಹೇಳಿದೊಡನೆ ಮುರಾರಿ ರಾಯನು ಆಚೆಯ ಕೋಣೆಗೆ ಒಂದೇ ಉಸುರಿಗೆ ಓಡಿದನು. ಅವನ ಹಿಂದೆಯೆ ಜಂಗ ಬಹದ್ದೂರನೂ ಹೋದನು. ಜಂಗಬಹದ್ದೂರನು ಹೇಳಿದ ಹಾಗೆ ಬಾಲಕನು ಮೈಸುಟ್ಟಂತೆ ತೀರ ಕಪ್ಪಗಾಗಿ ಬಿದ್ದಿದ್ದನು. ಪ್ರಾಣವು ದೇಹದಿಂದ ಅರ್ಧತಾಸಿನ ಹಿಂದೆಯೇ ಹಾರಿಹೋಗಿತ್ತು. ಬಾಲಕನು ಕೈಯಲ್ಲಿ ಆ ಸೀಸೆಯನ್ನು ಬಿಗಿಯಾಗಿ ಹಿಡಿದಿದ್ದನು.

ಮುರಾರಿ ರಾಯನು ಈ ನೋಟವನ್ನು ನೋಡಿ ರೋಷದಿಂದಲೂ, ದುಃಖದಿಂದಲೂ ಸಂತಪ್ತನಾದನು. ಈ ದುಷ್ಟವರ್ತನವನ್ನು ಕಂಡು ಆ ಸೀಸೆಯನ್ನು ಮೃತದೇಹದ ಕೈಯಿಂದ ಕಿತ್ತುಕೊಂಡು, ತನ್ನ ಬೆನ್ನ ಹಿಂದೆ ಅಳುತ್ತ ನಿಂತ ಹೆಂಡತಿಯನ್ನು ನೋಡಿ "ಇಗೊ! ನಿನ್ನ ಪ್ರೀತಿಯ ಮಗನನ್ನು ಬಿಟ್ಟಿರುವುದು ಉಚಿತವಲ್ಲ. ಎಲೇ ಪೂತನೀ! ನಿನ್ನ ದುರಾಶೆಯ ಪ್ರತಿಫಲವನ್ನು ನೀನೂ ತಿನ್ನು" ಎಂದು ಆ ಸೀಸೆಯನ್ನು ಅವಳ ಕೈಗೆ ಒಪ್ಪಿಸಿದನು. ಹತಾಶಳಾದ ಅವಳು ತನ್ನ ಗುಟ್ಟುಬಯ ಲಾದುದರಿಂದ ಇನ್ನು ತನಗೆ ಉಳಿಗಾಲವಿಲ್ಲೆಂದು ತಿಳಿದು ಆ ಸೀಸೆ ಯಲ್ಲಿನ ವಿಷವನ್ನು ಕುಡಿದು ಒಂದೇ ಸವನೆ ನೆಲಕ್ಕೆ ಬಿದ್ದುಬಿಟ್ಟು ಪ್ರಾಣವನ್ನು ನೀಗಿದಳು.

ಅನಂತರ ಮುರಾರಿ ರಾಯನು ಜಂಗಬಹದ್ದೂರನನ್ನು ಕಂಡು "ನಿನ್ನ ಕಣ್ಣಿಗೆ ಹಬ್ಬವಾಯಿತೇ? ಈ ರೀತಿಯಲ್ಲಿ ನನ್ನ ಕುಲಕ್ಕೆ ರಾಹು ಬಡೆದಂತೆ ನನ್ನ ಮೇಲೆ ಸಾಧನೆಮಾಡಿ ನಮ್ಮ ಪೂರ್ವಕಥೆಯ ಮೃತ ದೇಹಗಳನ್ನು ಸಮಾಧಿಯಿಂದ ಅಗೆದು ತೆಗೆದು ಗಾಳಿಗೆ ಒಡ್ಡಿ ದುರ್ವಾ ಸನೆಯು ಊರಲ್ಲೆಲ್ಲ ಹಬ್ಬುವಂತೆ ಮಾಡಿದ ನೀನು ಈ ಊರಿಗೆ ಬಂದ

ಮಾರಿಯೆ, ಪಿಶಾಚಿಯೆ? ಯಾರು ನೀನು? ಒಮ್ಮೆ ಹೇಳಿ ಬಿಡು.'' ಎಂದು ಕ್ರೋಧವಶನಾಗಿ ಗರ್ಜಿಸಿದನು.

ಆಗ ಜಂಗಬಹದ್ದೂರನು ತಾತ್ಸಾರಸೂಚಕವಾದ ನಗುವನ್ನು ತನ್ನ ತುಟಿಗಳ ಅಂಚುಗಳಲ್ಲಿ ತೋರ್ಪಡಿಸುತ್ತ "ನಾನ್ಯಾರೆಂದು ಹೇಳಲೇ?'' ಎಂದು ತನ್ನ ನಿಲುವಂಗಿಯನ್ನೂ ತಲೆಗೆ ಸುತ್ತಿದ ಪಾಗುವನ್ನೂ ಕಿರುಗಡ್ಡವನ್ನೂ ಕಳಚಿ ಬಿಟ್ಟನು. "ಈಗ ನೋಡು. ನನ್ನ ಪರಿಚಯುವಾಯಿತೆ? ದ್ರವ್ಯಾಕಾಂಕ್ಷೆಯಿಂದ ನಂದೂಲಾಲ ಮತ್ತು ಯದುಕುಲನಾಥನ ಒಳಸಂಚಿಗೆ ಸೇರಿ, ಸುಳ್ಳು ಮೊಕದ್ದಮೆಯನ್ನು ಹೂಡಿ, ಯಾವಾತನನ್ನು ದ್ವೀಪಾಂತರವಾಸಕ್ಕೆ ಅಟ್ಟಿದೆಯೋ ಆ ತ್ರೈಲೋಕ್ಯನಾಥನನ್ನು ಈಗಲಾದರೂ ಗುರುತಿಸುವೆಯಾ? ಅಧಿಕಾರೋನ್ಮತ್ತನಾಗಿ ದುಷ್ಪ್ರವರ್ತನಕ್ಕೆ ಕೈ ಹಚ್ಚಿದಾಗ "ದೇವರೊಬ್ಬನು ಇದ್ದಾನೆ, ಆತನ ಅನುಲ್ಲಂಘ್ಯವಾದ ನಿಯಮಕ್ಕನುಸಾರವಾಗಿ ನೀನು ಕರ್ಮದ ಫಲವನ್ನು ತಿನ್ನುವೆ ಎಂಬ ವಿಚಾರವಾದರೂ ನಿನ್ನಲ್ಲಿ ಬಂತೆ? ನಿನ್ನ ಪಾಷಾಣ ಹೃದಯವು ನಿನ್ನ ಹೆಂಡತಿಯ ಹೃದಯಾಂತಃಕರಣದಲ್ಲಿ ಬಲು ಚೆನ್ನಾಗಿ ಒಪ್ಪುತಿತ್ತು. ಈಗ ಅವಳನ್ನು ನೀನೇಕೆ ಹಿಂಬಾಲಿಸಲಾರೆ! ಅವಳು ನಿನ್ನನ್ನು 'ಬಾ, ಬಾ' ಎಂದು ಕೈ ಬೀಸಿ ಕರೆಯುತ್ತ ಇದ್ದಾಳೆ. ಇಗೊ ನೋಡು'' ಎಂದು ತಾಯಿ ಮತ್ತು ಬಾಲಕನ ಮೃತ ದೇಹಗಳ ಕಡೆಗೆ ತೋರಿಸಿದನು. ಶಿರೋಭ್ರಮಣವಾಗುತ್ತ ಮುರಾರಿ ರಾಯನು ಮೂರ್ಛೆಹೋದನು.

ಅಷ್ಟರಲ್ಲಿ ಅಲ್ಲಿ ಬಂದ ಮಾಲಿನಿ "ಅಯ್ಯೋ! ನನ್ನ ತಾತನಿಗೂ ನನಗೂ ಗತಿ ಯಾರು?'' ಎಂದು ಚೀರಿದಳು. ಜಂಗಬಹದ್ದೂರನು ಅವಳನ್ನು ಸಂತೈಸಿ "ಮಗೂ ಹೆದರ ಬೇಡ. ಈ ಸತಿಪತಿಯರಿಬ್ಬರೂ ತಾವು ಮಾಡಿದ ಘೋರ ಪಾಪಗಳ ಪ್ರಾಯಶ್ಚಿತ್ತವನ್ನು ದೇಹಯಜ್ಞದಿಂದ ಪೂರೈಸಿದರು. ನಿಷ್ಕಳಂಕಳಾದ ನೀನೂ ನಿನ್ನ ತಾತನೂ ಅನಾಥರಾದಿರಿ ಎಂದು ಭೀತಿಪಡಲು ಕಾರಣವಿಲ್ಲ. ನಿಮ್ಮನ್ನು ನನ್ನ ಉಮದಾಬಾದಿಗೆ ಕರೆದುಕೊಂಡು ಹೋಗಲಿಕ್ಕೆ ನನ್ನ ಬಂಡಿಯು ಕಾದಿದೆ. ನಿನ್ನ ತಾತನನ್ನೂ ಸಿದ್ಧಪಡಿಸು. ನಿಮ್ಮ ಶ್ರೇಯಃಚಿಂತನೆಯ ಭಾರವು ನನ್ನ

ದೆಂದು ತಿಳಿ. ಅಲ್ಲಿಗೆ ಹೋದ ಮೇಲೆ ನಾನೇ ನಿಮ್ಮ ತಾತನಿಗೆ ಎಲ್ಲವನ್ನೂ ವಿಸ್ತರಿಸಿ ಹೇಳುವೆನು. ಈಗೇನೂ ಆತನಿಗೆ ಹೇಳದೆ ಸಮಾಧಾನ ಹೇಳಿ ಕರೆದುಕೊಂಡು ಹೋಗು.', ಎಂದು ಸಂತೈಸಿ ಅವಳನ್ನು ಕಳುಹಿಸಿದನು. "ಇಲ್ಲಿಗೆ ನನ್ನ ಸೇಡಿನ ಯಜ್ಞದ ದ್ವಿತೀಯಾ ಹುತಿಯಾಯಿತು" ಎಂದು ಕೋಣೆಯಲ್ಲಿ ಬಿದ್ದವರ ಕಡೆಗೆ ನೋಡುತ್ತ ಮನೆಯಿಂದ ಕೆಳಗೆ ಇಳಿದು ಇನ್ನೊಂದು ಬಂಡಿಯನ್ನು ಹತ್ತಿ ಮಾಲಿನಿ ಮತ್ತು ಅವಳ ಅಜ್ಜನನ್ನು ಜಂಗಬಹದ್ದೂರನು ಹಿಂಬಾಲಿಸಿದನು.

---

## ಇಪ್ಪತ್ತೆಂಟನೆಯ ಅಧ್ಯಾಯ

### ಮೂರನೆ ಋಣವಿಮೋಚನೆ

ನಂದೂಲಾಲನು ಕಚೇರಿಯಿಂದ ಹೊರಬಿದ್ದವನೇ ತನ್ನ ಬಂಡಿಯಲ್ಲಿ ತನ್ನ ಮನೆಗೆ ಹೋದನು. ಹೋಗುತ್ತ "ನನ್ನ ಕೈಹಿಡಿದವಳು ಈ ರೀತಿಯಾಗಿ ನನಗೆ ಕಲಂಕವನ್ನು ತಂದೊಡ್ಡಿದಳಲ್ಲ! ಇಂಥ ಭವಣೆಯನ್ನು ಯಾರು ಹಾರೈಸಿದ್ದರು?" ಎಂದು ಮನಸ್ಸಿನೊಳಗೆ ಕುದಿಯುತ್ತ, ಬೈಠಕಖಾನೆಯನ್ನು ಪ್ರವೇಶಿಸಿ, ತಲೆಯ ಮೇಲೆ ಕೈಯಿಟ್ಟು ಯೋಚಿಸುತ್ತ ಒಬ್ಬನೆ ಕುಳಿತನು. ಆಗ್ಗೆ ಆಫೀಸಿನ ಗುಮಾಸ್ತರು ಸಾಯಂಕಾಲ 5 ಗಂಟೆಯ ಸಮಯವಾದ್ದರಿಂದ ತಂತಮ್ಮ ವಸತಿಗಳಿಗೆ ಹೊರಟುಹೋದರು. ಅಷ್ಟರಲ್ಲಿ ತಂತಿ ಆಫೀಸಿನ ಪೇದೆಯೊಬ್ಬನು ಒಂದು ತಂತಿವರ್ತಮಾನವನ್ನು ತಂದುಕೊಟ್ಟನು. ನಂದೂಲಾಲನು ಅದನ್ನು ಓದಿನೋಡಿ "ಓಹೊ! ಪೆಟ್ಟಿನ ಮೇಲೆ ಪೆಟ್ಟು, ಗುದ್ದಿನ ಮೇಲೆ ಗುದ್ದು!" ಎಂಬಂತಾಯಿತು, ಮುಂಬಯಿ ಸಂಸ್ಥಾನದ ಹತ್ತಿಯನ್ನೆಲ್ಲ ನಾನೊಬ್ಬನೆ ಬೆಲೆಗೆ ಪಡೆದು ಸ್ವೇಚ್ಛೆಯಾಗಿ ಧಾರಣೆಯನ್ನು ಏರಿಸಿ, ವಿಲಾಯತಿಯವರಿಂದ ಕೋಟ್ಯಾವಧಿ ಹಣಸಂಪಾದನೆ ಮಾಡಬೇಕೆಂದು ನಿರ್ಧಾರವಾಡಿ ನನ್ನಲ್ಲಿ ಬಂದ ಶೇವಣಾತಿಗಳಿಂದ ಮುಳೆಸುರಿಸಿದೆನು. 'ಈಗ ಬಂದ ನೀರು ಇದ್ದ ನೀರನ್ನೂ ಕೊಚ್ಚಿಕೊಂಡು ಹೋಯಿತು' ಎಂಬಂತಾಯಿತು. ಮುಂಬಯಿಯ ವೊಟ್ಸನ್ ಕಂಪೆನಿಯವರು ಅಮೇರಿಕದಿಂದ ಹತ್ತಿಯನ್ನು ವಿಲಾಯತಿಯ ವರ್ತಕರಿಗೆ ತರಿಸಿ

ಕೊಟ್ಟದ್ದರಿಂದ ಇಲ್ಲಿಯ ಅರಳೆಗೆ ಧಾರಣೆಯು ಒಂದಕ್ಕೆ ಅರ್ಧ ತಗ್ಗಿದೆ. ಮೂಟೆಗಳಲ್ಲೆಲ್ಲ ಹತ್ತಿ ಸೇರಿಕೊಂಡುದರಿಂದ ನನ್ನ ತಲೆಯಲ್ಲಿ ಕೂಡಾ ಹತ್ತಿಯಿಲ್ಲದಂತಾಗಿದೆ' ಎಂದು ಹೇಳುವಷ್ಟರಲ್ಲಿ ವೋಲ್ಟನ ಕಂಪೆನಿಯ ಒಂದು ಚಕ್ಕನ್ನು ವಟಾಯಿಸಲಿಕ್ಕೆ ಜಂಗಬಹದ್ದೂರರ ಕಡೆಯಿಂದ ಗಫೂರನು ಒಳಗೆ ಬಂದು ಬಿಟ್ಟನು. ಚಕ್ಕನ್ನು ಓದಿನೋಡಿ "ಹತ್ತು ಲಕ್ಷರೂಪಾಯಿ ಈಗೆಲ್ಲಿಂದ ಕೊಡಲಿ!" ಎಂದು ಯೋಚಿಸುತ್ತ ಗಫೂರನ ಕಡೆಗೆ ನೋಡಿ "ನಾಳೆ 10 ಗಂಟೆಗೆ ಬಾ, ಈಗ ಬೇಂಕು ಗಳೆಲ್ಲ ಮುಚ್ಚಿರಬೇಕು. ಹಣವನ್ನು ನಾಳೆ ಕೊಡುವೆನು" ಎಂದು ಹೇಳಿ ಹಿಂದಕ್ಕಟ್ಟಿದನು.

ಆ ಮೇಲೆ ತನ್ನ ಬೀಗದ ಕೋಣೆಯ ಬಾಗಿಲನ್ನು ತೆರೆದು ಅದರಲ್ಲಿ ಎಷ್ಟು ಶಿಲುಕು ಉಳಿದಿದೆ ಎಂದು ಲೆಕ್ಕ ಮಾಡಿ ನೋಡಿದನು. ಬರೆ ಒಂದು ಲಕ್ಷ ರೂಪಾಯಿಯ ನೋಟುಗಳಿದ್ದವು. "ಜಂಗಬಹದ್ದೂರ ನಿಗೆ ಹಣಕೊಡುವುದಕ್ಕೆ ಇದು ಸಾಲದು, ದೂರದ ಊರಿಗೆ ತಲೆತಪ್ಪಿಸಿ ಕೊಂಡು ಓಡಿ ಹೋದರೆ ಒಬ್ಬನಿಗೆ ಸುಖದಿಂದ ಜೀವನ ನಡಿಸುವುದಕ್ಕೆ ಇದು ಧಾರಾಳವಾಗಿ ಸಾಕು" ಎಂದು ನೆನಸಿ ಆ ಹಣದ ನೋಟು ಗಳನ್ನೆಲ್ಲ ತನ್ನ ಒಳಕಿಸೆಯಲ್ಲಿ ತೂರಿಸಿಕೊಂಡು ತನ್ನ ಹೆಂಡತಿ ಮತ್ತು ಮಗಳಿಗೆ ತಿಳಿಸದೆ ಕತ್ತಲಾದೊಡನೆ ನೆಟ್ಟಗೆ ರೈಲ್ವೆಸ್ಟೇಶನ್ನಿಗೆ ಹೋಗಿ ರೈಲುಹತ್ತಿದನು. ಬೆಳಕು ಹರಿಯುವಷ್ಟರಲ್ಲಿ ರೈಲಿನಿಂದ ಇಳಿದು ಅಲ್ಲಿ ಹೊರಗೆ ಕಾದಿರುವ ಬಂಡಿಯಲ್ಲಿ ಹತ್ತಿದನು. ಬಂಡಿಯಾಳು ಕುದುರೆ ಯನ್ನು ಚಪ್ಪರಿಸಿದನು. ರಾತ್ರೆ ಯೋಚನೆಯಿಂದ ನಿದ್ರೆಗೆಟ್ಟ ನಂದೂ ಲಾಲನಿಗೆ ಬಂಡಿಯಲ್ಲಿ ನಿದ್ರೆ ಹತ್ತಿದ್ದು ಸಾಯಂಕಾಲದ ವರೆಗೆ ಅವನಿಗೆ ಎಚ್ಚರವಾಗಲೇ ಇಲ್ಲ. ಸುಮಾರು ಸಾಯಂಕಾಲ 5 ಗಂಟೆ ಸಮಯ ದಲ್ಲಿ ಅವನು ಕಣ್ಣುಗಳನ್ನು ತಿಕ್ಕುತ್ತ ಎಚ್ಚತ್ತು ಬಂಡಿಯವನಿಗೆ ನೋಡಿ "ಎಲೊ! ನನ್ನಾ ತಂದೆ ಎಲ್ಲಿ?" ಎಂದು ವಿಚಾರಿಸಿದನು.

**ಬಂಡಿಯಾಳು**:—"ನಿನ್ನ ತಂದೆಯೆಲ್ಲಿ ಎಂದು ನಂಗೇನು ಗೊತ್ತೊ?"

**ನಂದೂ:**— ಎಲೋ ನಿನ್ನ ತಮಾಷೆ ಗಿಮಾಷೆ ನನ್ನೊಂದಿಗೆ ಬೇಡ. ನಿನ್ನ ಬಂಡಿಯಲ್ಲಿ ನನ್ನನ್ನು ಇಲ್ಲಿಗೆ ಯಾತಕ್ಕೆ ಕರತಂದೆ?

**ಬಂಡಿಯಾಳು:**— ಕರಾತಂದೆ ಯಾತಕ್ಕಂತಿಯಾ? ಮಾರೀಗೆ ಹಬ್ಬಾ ಮಾಡೋಕೆ. ಇಗೊ ನಮ್ಮ ತಾಯಿ ಅಲ್ಲಿ ಐದಾಳೆ. ಅವ್ಳಿಗೆ 'ಅಮಾಸೆ ಹುಣ್ಮೆಗೆ ಒಂದು ಕರಾತಂದು ಕೊಡ್ತೇನೆ ಮಾತಾಯಿ!' ಎಂದರೆ ನಮ್ಮ ಬೆಳೆಗಿಳೆ ನೆಟ್ಟಗೆ ಬರುತ್ತೆ. ಇಲ್ಲಾ, ನಮ್ಗೆ ತಿನ್ನೋಕೇ ಗೆತಿ ಇಲ್ಲಾ!

ನಂದೂಲಾಲನು "ಇಲಿ ಬಾಯಿಂದ ತಪ್ಪಿಸಿ ಹುಲಿ ಬಾಯಲ್ಲಿ ಬಿದ್ದೆ. ಇವನು ಯಾರೊ ಕಳ್ಳನು! ಇದೆಂಥ ಮಾರಿ!" ಎಂದು ತನ್ನಷ್ಟಕ್ಕೆ ಅಂದುಕೊಂಡನು. ಬಂಡಿಯೊಳಗೆ ಕೊನೆಯ ಎರಡು ಶಬ್ದಗಳು ಮಾತ್ರ ಕೇಳಿಸಿದವು. ಆಗ ಅವನು:—

"ಮಾರೀನ ಕಾಣ್ಬೇಕಂತಿಯಾ? ಆಂಗೆ ಕಾಣೋಕೆ ಶಿಕ್ತಾಳೇನು? ನಮ್ಮ ಕುಲ್ದೋವ್ರೆಲ್ಲ ಬರ್ಬೇಕು. ನಿಂಗೆ ತಣ್ಣೀರು ಮಿಾಸಬೇಕು. ಹೂ ಮಾಲೆ ಕಟ್ಬೇಕು. ವಾಲ್ಗ ಬರ್ಬೇಕು, ಆಗ ಮಾರೀನ ಕಾಣ್ಸ್ತೇನೆ. ಈಗೆಲ್ಲಿ ಮಾರೀನ ಕಾಣ್ತಿ?" ನಂದೂ ಲಾಲನು "ಈತನೊಡನೆ ಚರ್ಚಿಸಿ ಉಪಯೋಗವಿಲ್ಲ, ಈತನನ್ನು ಉಬ್ಬಿಸಿ ಕಿವಿರಂಗು ಮಾಡಬೇಕು. ಬಿಂಕದ ಮಾತುಗಳಿಂದ ಈ ಮೂರ್ಖನು ಎಲ್ಲಾದರೂ ರೇಗಿ ನನ್ನ ಪ್ರಾಣಕ್ಕೆ ಅಪಾಯ ತಂದಾನು" ಎಂದು ನೆನಸಿ "ಎಲೊ ಹಾಗಲ್ಲಪ್ಪಾ! ನನ್ನನ್ನು ಮಾರಿಗೆ ಬಲಿಕೊಡುವ ಬದಲಾಗಿ ಜೀವಂತವಾಗಿ ಹೋಗ ಬಿಟ್ಟರೆ ನಿನಗೆ ದುಡ್ಡು ಕೊಟ್ಟೇನಲ್ಲ!"

**ಬಂಡಿಯಾಳು:**— ನಂಗೆ ದುಡ್ಡು ಕೊಡ್ತಿ ಅಂತಿಯಾ? ಏಟು ಕೊಡ್ತಿ?

**ನಂದೂಲಾಲ:**— ನಿನಗೆ ನೂರು ರೂಪಾಯಿ ಕೊಡುತ್ತೇನೆ.

**ಬಂಡಿಯಾಳು:**—100 ರೂಪಾಯಿ ಅಂದರೆ ಏಟು ಆಗತ್ತೆ? ಬಗಸೆ ತುಂಬಾ ಆಗತ್ತೇನು?

**ನಂದೂ:**— ಹೂಂ! ಹೂಂ!

**ಬಂಡಿಯಾಳು**:—ಅದೇನು ದೊಡ್ದು. ನಮ್ಮ ದನಿ ಈ ತಾವಿಗೆ ಒಮ್ಮೆ ಬಂದ್ಬಿಟ್ಟರೆ ನಾಕ್ನಾಕು ಬಗಸೆ ಕೊಡ್ತಾರಲ್ಲ, ನಮ್ಗೆ!

**ನಂದೂಲಾಲ**:—ಮತ್ತೇನು ಕೊಡಬೇಕೆನ್ನುತ್ತಿ?

**ಬಂಡಿಯಾಳು**:—ನಂಗೆ ನಿನ್ನ ಲೆಕ್ಕ ಪೊಕ್ಕಾ ತಿಳೀದು. ಇಲ್ಲಿಂದ ಆ ಗುಡ್ಡೆ ನೆತ್ತಿ, ಅಲ್ಲಿಂದ ಆ ಗುಡ್ಡೆ ನೆತ್ತಿ, ಅಲ್ಲಿಂದ ಈಚೆ ಗುಡ್ಡೆ ನೆತ್ತಿ—ಇದರೊಳಗೆ ಭೂಮಿ ಕಾಣಿ ನನ್ದು ಮಾಡಿಕೊಡ್ತೀಯಾ?

**ನಂದೂಲಾಲ**:—ಹುಂ, ಅಷ್ಟು ಕೊಟ್ಟೇನು.

**ಬಂಡಿಯಾಳು**:—"ಹಾಂಗಾದ್ರಪ್ಪೊ ನಿನ್ನ ತಾವಾ ಒಳ್ಳೇ ರೊಕ್ಕಾ ಐಯ್ತೆ. ಅದೇನು ಕಾಂಬಾ!" ನಂದೂಲಾಲನು ತನ್ನ ಕಿಸೆಯಲ್ಲಿದ್ದ ಒಂದು ನೋಟನ್ನು ತೋರಿಸಿದನು.

**ಬಂಡಿಯಾಳು**:—ಅದೇನು ಕಾಗ್ದ ಚೂರು? ಅದು ನಂಗೇಕೆ? ನಂಗೆ ಬೊಂಬೆ ರೂಪಾಯಿ ಕೊಡ್ತೀಯಾ?

**ನಂದೂ**:—ಇದನ್ನು ಪೇಟೆಗೆ ಕೊಂಡು ಹೋದರೆ ನಿನಗೆ ಬೊಂಬೆ ರೂಪಾಯಿ ಸಿಕ್ಕೀತು.

**ಬಂಡಿಯಾಳು**:—ಅಟಕ್ಕೆಲ್ಲ ಎಯ್ಟು ಸೇರು ರಾಗಿ, ಒಂದು ಸೇರು ಹುರ್ಳಿ, ಎಯ್ಡು ಸೇರು ಮೆಣ್ಸು, ಒಂದು ಕಾಸಿನ ಎಣ್ಣೆ ಈಟು ಸಿಕ್ಕಿತಾ?

**ನಂದೂ**:—ಅದಕ್ಕೂ ಹೆಚ್ಚು ಸಿಕ್ಕೀತು.

**ಬಂಡಿಯಾಳು**:—ಅದೇನೊ ನಿನ್ನ ಮೋಡಿ! ನಿನ್ನ ಮಾತನ್ನ ನಂಬೋಕಿಲ್ಲ. ನಮ್ಮ ಅಣ್ಣ ಸಾವಳ್ಯಾ ಬರ್ಲಿ. ಎಲೊ ಸಾವಳ್ಯಾ! ಹೆಂಗೂ ಇವನ್ನ ತಂದ ಬಿಟ್ಟೆ. ಏನು ರಂಗು ಮಾಡ್ತಾನೆ! ಇವನ ಗೊತ್ತು ನಿಂಗೇ ಬಂದೀತು ಕಣೊ. ನಂಗೆ ಗೊತಾಗುಕಿಲ್ಲೆ!

**ಸಾವಳ್ಯ**:—(ದೂರದಿಂದ) ಏನಪ್ಪೊ! ಇವನ್ನ ನಮ್ಮ ಮನಿಗೆ ಶೇರಿಸಿ ಬೀಗ ಹಾಕ್ಬಿಡು, ಕಣೊ!

**ನಮ್ಮಪ್ಪ**:—ನಮ್ಮ ದನಿ ಬಂದ ಮೇಲೆ ಹೆಂಗೆ ಬೇಕು ಹಾಂಗೆ ಮಾಡ್ಲಿ. ನಮ್ಗ್ಯಾಕೆ ದೊಡ್ಡೋರ ಪಂಚಾತ್ಕೆ.

ನಂದೂಲಾಲನು ಈ ಅಣ್ಣನೊಡನಾದರೂ ಮೆತ್ತಗೆ ಮಾತನಾಡಿ ತನ್ನ ಕೆಲಸ ಪೂರೈಸಿಕೊಳ್ಳಬೇಕೆಂದು "ಎಲೊ ಸಾವಳ್ಯಾ! ನಿನ್ನ ಧನಿ ಯಾರೊ?" ಎಂದು ಪ್ರಶ್ನಿಸಿದನು.

**ಸಾವಳ್ಯಾ**:—ಅದ್ಯಾರೊ ದೊಡ್ಡ ಮನ್ಸರು. ಅವರ ಹೆಸ್ರು ನಂಗೆ ಬರೋಕಿಲ್ಲ. ಅದೇನೊ ಈಟು ಉದ್ದ ಅಯ್ತೆ.

**ನಂದೂ**:—ಇಗೊ ನನಗೆ ಹೊಟ್ಟೆ ಹಸಿದಿದೆ. ಏನಾದರೂ ತಿಂಡಿ ಸಿಗಲಾರದೇ?

**ಸಾವಳ್ಯಾ**:—"ನಿಂಗೇನು ಬೇಕು? ಇಗೊ ಅಲ್ಲಿ ನಮ್ಮ ಗೌಡಾ ಬರ್ತಾನೆ, ಅವನ್ನ ಕೇಳಿಕೊ." ನಂದೂಲಾಲನು ಅವನನ್ನು ಕರೆದು ಎಲೊ ನನಗೆ ಹಸಿವೆ ಆಗಿದೆ. ದುಡ್ಡು ಕೊಟ್ಟರೆ ಇಲ್ಲೇನೂ ತಿಂಡಿ ಸಿಗಲಾರದೇ?

**ಗೌಡ**:—ಓಹೊ! ನಮ್ಮ ಧನಿಗಳ ದಯೆಯಿಂದ ಅದಕ್ಕೇನು ಕಡಿಮೆ?

**ನಂದೂ**:—ನಿಮ್ಮ ಧನಿಗಳು ಯಾರು? ಈ ಬಂಡಿಯಾಳು ನನ್ನನ್ನು ಇಲ್ಲೇಕೆ ಕರೆದುತಂದನು?

**ಗೌಡ**:—ಯಾಕೆಂದು ನಮ್ಮ ಧನಿಗಳೇ ತಿಳಿಸುವರು.

**ನಂದೂ**:—ಅವರು ಯಾವಾಗ ಬರುವರು?

**ಗೌಡ**:—ಏಳೆಂಟು ದಿನಗಳಲ್ಲಿ ಬರುವರು.

**ನಂದೂ**:—ಅಷ್ಟರ ವರೆಗೆ ನಾನಿಲ್ಲಿ ಉಪವಾಸ ಬಿದ್ದು ಸಾಯ ಬೇಕೇ?

**ಗೌಡ**:—ಇಲ್ಲ ಇಲ್ಲ! ಇಲ್ಲೊಂದು ಖಾನಾವಳಿ ಇವೆ. ದುಡ್ಡು ಕೊಟ್ಟರೆ ಆತನು ಬೇಕಾದ್ದು ಮಾಡಿ ಇಕ್ಕುತ್ತಾನೆ.

**ನಂದೂ**:—ಚೆನ್ನಾಗಿ ಹೇಳಿದೆ. ದೊಡ್ಡ ಊರುಗಳಲ್ಲಿ ವಾಸ ಮಾಡಿಕೊಂಡು ಇದ್ದ ನಮಗೆ ಈ ಹಳ್ಳಿಗಾಡಿನ ಅನ್ನ ರುಚಿಸದು. ಅವನನ್ನು ಕರೆಸು, ನನಗೆ ತಿಂಡಿ ಊಟ ಪರಿಷ್ಕಾರವಾಗಬೇಕು.

ಅದನ್ನು ಕೇಳಿ ಗೌಡನು ಖಾನಾವಳಿಯ ಯಜಮಾನನನ್ನು ಕರೆದು ತಂದನು.

**ಖಾನಾವಳಿ:**—ನನ್ನನ್ನು ಏತಕ್ಕೆ ಕರೆಸಿದಿರಿ?

**ನಂದೂ:**—"ನನಗೆ ನಿನ್ನೆ ರಾತ್ರಿ ನಿದ್ದೆಗೆಟ್ಟು ಬೆಳಗ್ಗೆ ತಿಂಡಿ ಇಲ್ಲದೆ ತುಂಬಾ ಆಯಾಸವಾಗಿದೆ. ನನಗೆ ಊಟಕ್ಕೆ ತಯಾರಾಗಲಿ, ಆ ಮಧ್ಯೆ ಒಂದು ಕಪ್ ಚಾ ಮತ್ತು ತಿಂಡಿ ತಕ್ಕೊಂಡು ಬಾ." ಖಾನಾವಳಿ ಯವನು ಒಂದು ದೊಡ್ಡ ತಟ್ಟೆಯಲ್ಲಿ ಬಗೆ ಬಗೆಯ ತಿಂಡಿ, ಒಂದು ಕಪ್ ಚಾ ಇಟ್ಟುಕೊಂಡು ಬಂದನು. ಆ ಮೇಲೆ ಈ ಲಾಡಿಗೆ ಒಂದೊಂದಕ್ಕೆ 50 ರೂಪಾಯಿ, ಒಂದು ಕಪ್ ಕಾಫಿಗೆ 100 ರೂಪಾಯಿ, ಒಂದು ಕಪ್ ಚಾಕ್ಕೆ 100 ರೂಪಾಯಿ ಎಂದು ಬೇರೆ ಬೇರೆ ವಸ್ತುಗಳ ಬೆಲೆಯನ್ನು ಹೇಳುತ್ತಾ 50ರಿಂದ 1000 ರುಪಾಯಿ ವರೆಗೆ ವಸ್ತುಗಳ ಧಾರಣೆ ಹೇಳುತ್ತ ಬಂದನು.

**ನಂದೂ:**—ಅದೇನು ಅಷ್ಟು ಬೆಲೆ? ನೀವು ಧಾರಾಳವಾಗಿ ಸುಲಿಗೆ ಮಾಡುತ್ತೀರೆಂದು ಕಾಣುತ್ತದೆ.

**ಖಾನ:**—ಹಾಗಲ್ಲ ಸ್ವಾಮಿ! ಇಲ್ಲಿಗೆ ಸಾಮಾನು ಗಟ್ಟದ ಬುಡದಲ್ಲಿ 300 ಮೈಲು ದೂರದ ಪೇಟೆಯಿಂದ ಬರಬೇಕು. ಇಲ್ಲಿ ಏನೂ ಸಿಗಲಾರದು. ಹೀಗಾಗಿ ಒಂದು ರಾತ್ಲು ಭಾರದ ಸಾಮಾನು ಹೊರಲಿಕ್ಕೆ ಸುಮಾರು 50 ರೂಪಾಯಿ ತಗಲುತ್ತದೆ. ಆದ್ದರಿಂದ ನಿಮ್ಮ ಬಯಲು ಸೀಮೆಯಲ್ಲಿ ಸಿಗುವ ಬೆಲೆಗೆ ಇಲ್ಲಿ ಯಾವುದೂ ಸಿಗಲಾರದು. ಇದಲ್ಲದೆ ತಮ್ಮಂಥ ದೊಡ್ಡ ಮನುಷ್ಯರು ಮಾತ್ರ ಇಲ್ಲಿ ಅಪರೂಪವಾಗಿ ಬರುತ್ತಾರೆ. ಅವರು ಕೇಳಿದೊಡನೆ ಅವರಿಗೆ ಸಾಹಿತ್ಯ ತಯಾರಿಸಿಕೊಡಬೇಕಾದುದರಿಂದ ಅನೇಕ ಸಾಮಾನು ಮುಂದಾಗಿ ಇಲ್ಲಿ ತರಿಸಿಡಬೇಕಾಗುತ್ತದೆ.

**ನಂದೂಲಾಲ:**—"ಸರಿ. ಹಾಗಾದರೆ ಎರಡು ಕಪ್ ಚಾ ಮತ್ತು ಒಂದು ಲಡ್ಡು ತನ್ನಿರಿ," ಎಂದು ತರಿಸಿ ಅದರಿಂದ ಸ್ವಲ್ಪವೂ ಹೊಟ್ಟೆ ತಣ್ಣಗಾಗದೆ ಇನ್ನು ತರಿಸಿದನು. ಇಷ್ಟರಲ್ಲಿ 1000 ರೂಪಾಯಿ ವೆಚ್ಚ ವಾಯಿತು. ಅನಂತರ "ಇವರ ಸುಟ್ಟ ಧನಿ ಯಾರಪ್ಪಾ! ಅವರು ಬರುವ ವರೆಗೆ ನನ್ನ ಹಣವೆಲ್ಲ ವೆಚ್ಚವಾಗಬಹುದೇ? ಒಂದು ಫಲಾಹಾರ ಕ್ಕೇನೆ 1000 ರೂಪಾಯಿ ವೆಚ್ಚವೆಂದರೇನು? ಆಗಲಿ. ಈಗ ಒಂದು ಊಟವನ್ನಾದರೂ ಹೊಟ್ಟೆತುಂಬ ಉಂಡು ಆ ಮೇಲೆ ಇವರ ಗೌಡನಿಗೆ

ನನ್ನಲ್ಲಿದ್ದ ಹಣದ ಅಧಿಕಾಂಶವನ್ನು ಕೊಟ್ಟು ಒಮ್ಮೆ ಹೇಗೂ ಇಲ್ಲಿಂದ ಬಿಡುಗಡೆಯಾಗಲೇ ಬೇಕು" ಎಂದು ನಿಶ್ಚಯಿಸಿದನು. ಊಟ ಮುಗಿ ಯುವಷ್ಟರಲ್ಲಿ 10,000 ರೂಪಾಯಿಗೆ ಬೀಲನ್ನು ಖಾನಾವಳಿಯವನು ಕೊಟ್ಟನು. ಆ ಹಣವನ್ನು ತೆತ್ತು ನಂದೂಲಾಲನು ಮೆಲ್ಲಗೆ ಗೌಡನನ್ನು ಒಂದು ಬದಿಗೆ ಕರೆದು "ಇಗೊಳ್ಳಪ್ಪಾ! ನನ್ನಲ್ಲಿ ಇನ್ನೂ 90,000 ರೂಪಾಯಿಗಳಿವೆ. ಅದರಲ್ಲಿ ಅರ್ಧಾಂಶ ನಿನಗೂ ನಿನ್ನ ಪಾಳ್ಯಕ್ಕೂ ಹಂಚಿ ಕೊಡುವೆನು. ಒಮ್ಮೆ ನನ್ನನ್ನು ಇಲ್ಲಿಂದ ಬಯಲು ಸೀಮೆಗೆ ಕರೆದು ಕೊಂಡು ಹೋಗಿಬಿಡು, ಮಹಾರಾಯಾ!" ಎಂದು ದೈನ್ಯದಿಂದ ಹೇಳಿದನು.

ಅದಕ್ಕೆ ಗೌಡನು "ಇಗೊಳ್ಳಿ! ನಾವು ನಮ್ಮ ಧನಿಗಳ ಉಪ್ಪನ್ನು ತಿಂದು ಬೆಳೆದ ಮಾವಳಿಗಳು. ಲಂಚ ಖುಷುವತ್ತಿನಿಂದ ಬೆಳೆದವರಲ್ಲ. ಧನಿಯ ಅಪ್ಪಣೆಯಿಲ್ಲದೆ ನಿನ್ನನ್ನು ಬಿಡುಗಡೆಮಾಡಲಾರೆವು. ಆದರೆ ನಿನ್ನ ಪುಣ್ಯಕ್ಕೆ 8 ದಿನಗಳನಂತರ ಬರಲಿಕ್ಕೆ ನಮ್ಮ ಧನಿಗಳು ಇಗೊ ಈಗಲೇ ಬಂದು ಬಿಟ್ಟರು" ಎಂದು ಅವರಿಬ್ಬರು ನಿಂತಲ್ಲಿಗೆ ತಗ್ಗಿನಿಂದ ಯಾರೊ ಹತ್ತಿ ಬರುವುದನ್ನು ತೋರಿಸಿದನು. ಆ ವ್ಯಕ್ತಿಯು ಹತ್ತಿರ ಬರುತ್ತಲೆ ಆತನು ಷಂಷೇರ ಜಂಗಬಹದ್ದೂರನೆಂದು ತಿಳಿದು ನಂದೂ ಲಾಲನಿಗೆ ಪರಮಾಶ್ಚರ್ಯವಾಯಿತು.

**ಜಂಗ:**—ನಂದೂಲಾಲಸೇಟರೆ? ನನ್ನ ಚಕ್ಕಿನ ಹಣಕ್ಕಾಗಿ ನಿಮ್ಮನ್ನು ಇಲ್ಲಿವರೆಗೆ ಹುಡುಕಿಕೊಂಡು ಬರಬೇಕಾಯಿತು, ಕಂಡಿರಾ! ನೀವು ಹೇಳದೆ ಬಂದುದನ್ನು ಕೇಳಿ ನಿಮ್ಮ ಹೆಂಡತಿಯು ನಿಮ್ಮನ್ನು ಹುಡುಕಿ—ಎಲ್ಲಿಗೊ ಹೋಗಿಬಿಟ್ಟಳು. ಹಲವು ಜನರಿಗೆ ನೀವು ಹಣ ಕೊಡಲಾರದೆ ಪಲಾಯನ ಮಾಡಿದಿರಿ ಎಂದು ಗುಜುಗುಜು ವರ್ತ ಮಾನ ಹುಟ್ಟಿ ಸರಕಾರದವರು ನಿಮ್ಮ ಮನೆಮಾರು ಜಪ್ತಿಮಾಡಿ ಬೀಗ ಮುದ್ರೆ ಮಾಡಿರುವರು. ಆ ವಿಚಾರವನ್ನೆಲ್ಲಾ ನೋಡಿಕೊಳ್ಳದೆ ನೀವು ನಿಶ್ಚಿಂತೆಯಿಂದ ಈ ಕಾಡುಗುಡ್ಡೆಗಳಲ್ಲಿ ಬೆಟ್ಟದ ತಪ್ಪಲಲ್ಲಿ ಶೀತ ವಾಯು ಸೇವನೆಗಾಗಿ ಬಂದುದೇ ಪರಮಾಶ್ಚರ್ಯ! ಒಂದೆರಡು ದಿನ ಅಲ್ಲಿ ನಿಂತು ಅದನ್ನೆಲ್ಲ ವ್ಯವಸ್ಥೆಮಾಡಿ ಬರಬಹುದಿತ್ತಲ್ಲ!

**ನಂದೂಲಾಲ**:—ಮಹಾರಾಯಾ! ನೀನು ಸರ್ವಾಂತರ್ಯಾಮಿ ಯಂತೆ ಕಾಣುತ್ತಿರುವೆ. ಒಂದು ಕಡೆ ನನ್ನೊಡನೆ ಸ್ನೇಹವನ್ನು ಬೆಳಿಸಿ ನನ್ನ ಪತ್ನಿಯ ಗುಟ್ಟನ್ನು ಬಹಿರಂಗವಾಗಿ ಕೋರ್ಟಿನಲ್ಲಿ ಪ್ರಕಟಿಸಿ ನನಗೆ ಅಪಮಾನವಾಗುವಂತೆ ಮಾಡಿದೆ. ವೊಟ್ಸನ್ ಕಂಪೆನಿಯ ಹೆಸರಿನಲ್ಲಿ ಹುಂಡಿಗಳನ್ನೂ ಚೆಕ್ಕುಗಳನ್ನೂ ವಟಾಯಿಸುವ ನೆವದಿಂದ ನನ್ನ ಬೊಕ್ಕಸವನ್ನೆಲ್ಲ ಬರಿದಾಗಿ ಮಾಡಿದೆ?

**ಜಂಗ**:—ಅಷ್ಟೆಯೇ! ಮುಂಬಾಯಿ ಪಟ್ಟಣಕ್ಕೆ ಬರುವ ಹತ್ತಿಯ ಪೈರನ್ನೆಲ್ಲ ಒಟ್ಟಿಗೆ ಪಡೆದು ಒಮ್ಮೆಯೇ ಧಾರಣೆ ಏರಿಸಿ, ಕೋಟ್ಯಾವಧಿ ಹಣಸಂಪಾದನೆ ಮಾಡಬೇಕೆಂದು ನಿನ್ನಲ್ಲಿ ದುರಿಚ್ಛೆ ಬಂದಾಗ, ಅದನ್ನು ಎದುರಿಸಿ ವೊಟ್ಸನ ಕಂಪೆನಿಯ ಹೆಸರಿನಲ್ಲಿ ಅಮೇರಿಕದ ಅರಳೆಯನ್ನು ತರಿಸಿ ಮುಂಬಾಯಿ ಅರಳೆಯ ಬೆಲೆ ತಗ್ಗುವಂತೆ ಮಾಡಿ ನಿನ್ನ ತಲೆಯು ಹತ್ತಿಯೂ ಒಣಗಿ ಹೋಗುವಂತೆ ಮಾಡಿದೆನೆಂದೂ ಯಾಕೆ ಹೇಳಲಾರೆ?

**ನಂದೂ**:—ಊರು ಬಿಟ್ಟು ಓಡಿಹೋಗುವೆನೆಂದರೂ ಈ ಕಳ್ಳ ಕಾಕರ ಕೈಯಲ್ಲಿ ನಾನು ಸಿಕ್ಕಿಬೀಳುವಂತೆ ಮಾಡಿ ನನ್ನನ್ನು ಪೀಡಿಸುವೆ. ಒಂದು ಕಡೆಯಲ್ಲಿ ದ್ವಾರಕನಾಥನಿಗೂ ಇನ್ನೊಂದು ಕಡೆಯಲ್ಲಿ ಮುರಾರಿ ರಾಯನಿಗೂ ಏಕ ಕಾಲದಲ್ಲಿಯೇ ವಿವಿಧ ಕಷ್ಟಗಳನ್ನು ತಂದೊಡ್ಡಿದೆ. ಈ ಮೂರು ಮಂದಿಗೂ ಹಿಡಿದ ಶನಿಯೇ ಮೂರ್ತಿಮಂತವಾಗಿ ಇಲ್ಲಿಗೆ ಬಂದು ನನ್ನ ಮುಂದೆ ನಿಂತಿರುವೆಯಾ? ನಿನಗೆ ನಾವು ಮಾಡಿದ ಅಪರಾಧವೇನು, ಹೇಳು.

**ಜಂಗ**:—ನಂದೂಲಾಲ! ಸಾಂಗಲಿಯ ಜಮೀನುದಾರ ವಿಶ್ವನಾಥಪಂತನನ್ನು ಬಲ್ಲೆಯಾ? ಬಹು ಪುರಾತನ ಕಥೆ. ಆದರೂ ಚೆನ್ನಾಗಿ ನೆನಪು ಮಾಡಿ ಹೇಳು.

**ನಂದೂ**:—ಏನು? ನೀನು ಅವರ ಪಿಶಾಚವೇ?

**ಜಂಗ**:—ತಡೆ ತಡೆ! ವಿಶ್ವನಾಥಪಂತರ ಕೊಲೆ ಮತ್ತು ಅವರ ಮನೆಯಲ್ಲಾದ ದರೋಡೆ ಇವುಗಳ ಸಮಾಚಾರವೇನಾದರೂ ನಿನಗೆ ಗೊತ್ತಿದೆಯೇ?

**ನಂದೂ:**—ಹೌದು, ಕೇಳಿದ್ದೆ. ಆ ಕಾಲದಲ್ಲಿ ನಾನು ಅವರ ಕಚೇರಿಯ ಪಾರುಪತ್ಯಗಾರನಾಗಿದ್ದೆ.

**ಜಂಗ:**—ವಿಶ್ವನಾಥಪಂತರಲ್ಲಿ ತ್ರೈಲೋಕ್ಯನಾಥನೆಂಬ ಗುಮಾಸ್ತ ನೊಬ್ಬನು ಇದ್ದುದು ನಿನಗೆ ನೆನಪಿದೆಯೋ?

**ನಂದೂ:**—ಹೌದು, ಏನು? ನೀನು ಆತನ ಪಿಶಾಚಿಯೆ? ಆತನು ದ್ವೀಪಾಂತರದಲ್ಲಿ ಮಡಿದನೇ?

**ಜಂಗ:**—ದುಡುಕಬೇಡ. ನೀನೂ ಯದುಕುಲನಾಥನೂ ಮುರಾರಿರಾಯನ ಬೆಂಬಲದಿಂದ ಆ ತ್ರೈಲೋಕ್ಯನಾಥನ ಮೇಲೆ ಸುಳ್ಳು ಆರೋಪವನ್ನು ಹೊರಿಸಿ ಆತನಿಗೆ ದ್ವೀಪಾಂತರವಾಸವನ್ನು ಕಲ್ಪಿಸಿ ಕೊಟ್ಟಿರಲ್ಲವೇ?

**ನಂದೂ:**—ದರೋಡೆಗೆ ಮಾತ್ರ ನಾನು ಸಮ್ಮತಿಯನ್ನಿತ್ತೆನು. ವಿಶ್ವನಾಥರನ್ನು ಕೊಲೆ ಮಾಡಲು ನಾನು ಮದ್ದತು ಮಾಡಿರಲಿಲ್ಲ. ವಿಶ್ವನಾಥಪಂತರು ಕಳ್ಳರೊಡನೆ ಕಾದಾಡಿ ಮಡಿದರೆಂದು ಯದು ಕುಲನಾಥನೇ ನನಗೆ ಹೇಳಿದನು. ಆದರೆ ಕೊಲೆ ನಡಿಯುವ ಕಾಲದಲ್ಲಿ ನಾನು ಪಂತರ ಮನೆಯಲ್ಲಿ ಕೂಡಾ ಇರಲಿಲ್ಲ.

**ಜಂಗ:**—ಸರಿ. ಇನ್ನೊಬ್ಬರಿಂದ ಕೊಲೆಕಳವುಗಳನ್ನು ಮಾಡಿಸಿ, ಅದರಲ್ಲಿ ಸಿಕ್ಕುವ ಪ್ರತಿಫಲಕ್ಕೆ ಮಾತ್ರ ನೀನು ಕೈಯೊಡ್ಡಿದೆ. ಹೇಡಿ ಯಾದ ನೀನು ನಿನಗೆ ಉಪ್ಪನ್ನವನ್ನು ಕೊಟ್ಟ ಧನಿಯ ಸಂರಕ್ಷಣೆ ಮಾಡುವ ಬದಲಾಗಿ ಈ ಆರೋಪವನ್ನು ತ್ರೈಲೋಕ್ಯನಾಥನ ಮೇಲೆ ಹೊರಿಸುವಂತೆ ಗಂಗಾರಾಮನ ಸಹಿಯಿರುವ ಸುಳ್ಳುಕಾಗದ ಮಾಡಿಸಿದೆ.

**ನಂದೂ:**—ನಿನಗೆ ಅದು ಹೇಗೆ ಗೊತ್ತಾಯಿತು?

**ಜಂಗ:**—ಗಂಗಾರಾಮನು ಬಂಗಿಯ ಅಮಲಿನಲ್ಲಿರುವಾಗ, ಆತನಿಂದ ಖಾಲಿ ಕಾಗದಕ್ಕೆ ಸಹಿ ಪಡೆದು ನಿಮಗೆ ಬೇಕಾದುದನ್ನು ಅದರಲ್ಲಿ ಬರೆದು, ತನ್ನ ಧನಿಯ ಕೆಲಸಕ್ಕಾಗಿ ದೂರದ ಪರಊರಿಗೆ ಹೋಗಿರುವ ಆ ನಿರಪರಾಧಿ ತ್ರೈಲೋಕ್ಯನಾಥನಿಗೆ ವಿನಾಕಾರಣವಾಗಿ ಶಿಕ್ಷೆಗೆ ನೀವು ಮೂವರೂ ಗುರಿಪಡಿಸಲಿಲ್ಲವೇ?

**ನಂದೂಲಾಲ:**—ನೀನು ಕಣ್ಣಾರೆ ಕಂಡಂತೆ ಹೇಳುವೆಯಲ್ಲ!

**ಜಂಗ:**— ಇಗೊ ಈ ಪತ್ರವನ್ನು ಓದಿನೋಡು. ಅದೇ ಗಂಗಾರಾಮನು ಇದನ್ನೂ ಸಾದ್ಯಂತವಾಗಿ ಬರೆದು ನನ್ನ ಕೈಗೆ ಒಪ್ಪಿಸಿದನು. ಅವನ ಸಹಿಯನ್ನು ಇನ್ನೊಮ್ಮೆ ಗುರುತಿಸುವೆಯಾ?

**ನಂದೂ:**— ಆದರೆ ತ್ರೈಲೋಕ್ಯನಾಥನ ಈ ಎಲ್ಲಾ ಸಂಕಷ್ಟಗಳ ಪೂರ್ವ ಕಥೆಯನ್ನು ಸಂಗ್ರಹಿಸಿ ತ್ರೈಲೋಕ್ಯನಾಥನ ಪರವಾಗಿ ಸೇಡನ್ನು ತೀರಿಸಲು ಮುಂದರಿಸಿದ ನೀನಾರು? ನಿನಗೆ ಲೋಕದ ಪಾರುಪತ್ಯ ನಡೆಯಿಸುವ ಭಾರವನ್ನು ಯಾರು ವಹಿಸಿಕೊಟ್ಟರು?

ಎನ್ನುವಷ್ಟರಲ್ಲಿ ಜಂಗಬಹದ್ದೂರನು ತನ್ನ ಪಾಗುವನ್ನೂ ಕಿರುಗಡ್ಡವನ್ನೂ ಕಳಚಿ ತನ್ನ ನಿಜರೂಪವನ್ನು ತೋರಿಸಿದನು.

ನಂದೂಲಾಲನು ಚಕಿತನಾಗಿ "ಹಾಗಾದರೆ ನೀನು—"

**ಜಂಗ:**— ಹೌದು ನಾನೇ ಆ ತ್ರೈಲೋಕ್ಯನಾಥನು. ನೀನು ಅಪಹಾರಮಾಡಿದ ದ್ರವ್ಯವು ಎಲ್ಲೆಲ್ಲಿ ಸೇರಬೇಕೊ ಅಲ್ಲಿಗೆ ಸೇರುವಂತೆ ವ್ಯವಸ್ಥೆಮಾಡಿರುವೆನು. ನಿನ್ನ ಘೋರ ಪಾಪವನ್ನು ತೊಳೆಯುವುದಕ್ಕೆ ಇನ್ನೂ ಗಂಗಾಯಾತ್ರೆಯೇ ಯೋಗ್ಯವೆಂದು ತಿಳಿಸಲು ಬಂದಿರುವೆನು. ನೀನು ಪೂನೆಗೆ ಹೋದೆಯಾದರೆ ನಿನಗೆ ಕ್ರಿಮಿನಲ್ ಮತ್ತು ಸಿವಿಲ್ ಮೊಕದ್ದಮೆಗಳು ಬೆಂಬತ್ತಿ ಬರುವವೆಂದು ಎಚ್ಚರಿಸಲು ಬಂದಿರುವೆನು.

ನಂದೂಲಾಲನು ತಲೆತಗ್ಗಿಸಿ ನೂತಿಲ್ಲದೆ ಕೆಳಗಿಳಿದು ಹೋದನು. ಮುಂದೆ ಅವನ ಗತಿಯೇನಾಯಿತೆಂದು ಯಾರೂ ಅರಿಯರು.

"ಇಲ್ಲಿಗೆ ಸೇಡಿನ ಯಜ್ಞದ ಮೂರನೆ ಆಹುತಿಯಾಯಿತು. ಇನ್ನೂ ನನಗೆ ಕಷ್ಟಕಾಲದಲ್ಲಿ ಅನ್ನವಿಕ್ಕಿದ ಪುಣ್ಯಾತ್ಮನ ಉಪಕಾರ ಸ್ಮರಿಸುವುದೊಂದೇ ಉಳಿದಿದೆ" ಎಂದು ಜಂಗಬಹದ್ದೂರನು ಹೊರಟು ಪೂನೆಗೆ ಹೋದನು.

---

## ಉಪಸಂಹಾರ

ಗಂಗಾರಾಮನು ಹೇಳಿದಂತೆ ತ್ರೈಲೋಕ್ಯನಾಥನಿಗೆ ದ್ವೀಪಾಂತರವಾಸವನ್ನು ಕಲ್ಪಿಸಿದ ತ್ರಿಮೂರ್ತಿಗಳ ಭವಣೆಯು ವಿಚಿತ್ರರೀತಿಯಿಂದ ಕೊನೆಗಂಡಿತು. ನಂದೂಲಾಲನು ತನ್ನ ಹೆಂಡತಿಮಕ್ಕಳನ್ನು ತೊರೆದು

ಗಂಗಾಯಾತ್ರೆಗೆ ತೆರಳಿದನು. ದುರಾಕಾಂಕ್ಷೆಯಿಂದ ಪೀಡಿತಳಾಗಿದ್ದ ಸುಲೋಚನೆಯೂ ಕೋಮಲ ಕುಮಾರನಾದ ಮೋಹನನೂ ಇಹಲೋಕ ವನ್ನು ತ್ಯಜಿಸಿದರು. ಮುರಾರಿ ರಾಯನ ಅವಸ್ಥೆ ಮಾತ್ರ ಬಹಳ ಭಯಂಕರವಾಗಿತ್ತು. ಅವನು ತನ್ನ ಚಿತ್ತಭ್ರಮೆಯಿಂದ ಹಿತ್ತಿಲಲ್ಲಿ ತಿರುಗಾಡುತ್ತ ಗುದ್ದಲಿಯನ್ನು ಹಿಡಿದು ಅಲ್ಲಲ್ಲಿ ಅಗಿಯುತ್ತ "ಓಹೊ! ಪೆಟ್ಟಿಗೆಯನ್ನು ಇಲ್ಲೆ ನಾನು ಹುಗಿದಿದ್ದೆ. ಪೆಟ್ಟಿಗೆ ಎಲ್ಲಿ? ಓಹೊ! ಇಲ್ಲಿದೆ—ಇಲ್ಲಿ ಇಲ್ಲ—ತಿಳಿಯದೆ ಹೋದೆ" ಎಂದು ಇನ್ನೊಂದು ಕಡೆಯಲ್ಲಿ ಅಗಿದು "ಈ ಸ್ಥಳವಲ್ಲ! ಮರೆತೆ. ಮಗು ಸಾಯಲಿಲ್ಲ. ಅದನ್ನು ಚಂಚಲೆಗೆ ನಾನು ತಿಳಿಸದೆ ಸುಳ್ಳು ಹೇಳಿದೆನು. ಹ! ಹ! ಹ! ಪೆಟ್ಟಿಗೆಯಲ್ಲಿ ಮಗುವು ಇಲ್ಲ. ಹಾರಿ ಹೋಯಿತೆ? ಅದು ಬಾಗಿಲ ಮೇಲೆ ಮುಚ್ಚಿದ ಮಣ್ಣನ್ನೂ ತರಗೆಲೆಯನ್ನೂ ಹೇಗೆ ಎತ್ತಿ ಹೊರಗೆ ಬಂತು?" ಎಂದು ಒಮ್ಮೆ ಆಕಾಶದ ಕಡೆಗೆ ನೋಡಿ "ಓಹೊ! ಆಕಾಶದಿಂದ ಈ ಮಗು ನನ್ನನ್ನು ನೋಡಿ ನಗುತ್ತಿದೆ. ನಗುವೆಯಾ? ನನ್ನ ಕೈಗೆ ಒಮ್ಮೆ ಸಿಕ್ಕಿದರೆ ಈ ಗುದ್ದಲಿಯಿಂದ ನಿನ್ನ ತಲೆಯನ್ನು ಜಜ್ಜಿಬಿಡುವೆನು" ಎಂದು ಹಾರುತ್ತ ಇನ್ನೊಮ್ಮೆ "ನನ್ನ ಮಗು! ಪಾಪ! ಚಂಚಲೆಯೂ ನನ್ನ ಮಾತನ್ನು ನಂಬಿ ಮೋಸ ಹೋದಳೆ? ಇಲ್ಲ. ಅವಳು ನಂದೂಲಾಲನನ್ನು ಪ್ರತಿಯಾಗಿ ಮೋಸಗೊಳಿಸಿದಳು. ಹ! ಹ! ಹ! ಅವಳು ಕೂಸನ್ನು ಹಡೆದಳೆಂದು ನಂದೂಲಾಲನಿಗೆ ತಿಳಿಯಲೇ ಇಲ್ಲ" ಎಂದು ಬಗೆ ಬಗೆಯ ವಿಕಾರಗಳನ್ನೂ ಮಾಡುತ್ತ ಭ್ರಮಿತನಾಗಿ ಅಲೆಯುತಿದ್ದನು.

ದ್ವಾರಕಾನಾಥನು ದೊಡ್ಡ ಅಪರಾಧಿಯೆಂದು ಕಮ್ಮಿಶನರು ಸರಕಾರಕ್ಕೆ ಬರೆದುದರಿಂದ ಅವನ ಬಿರುದುಗಳನ್ನು ವಜಾಮಾಡಿ ಬಹಳ ವರ್ಷಗಳ ಹಿಂದೆ ಆದ ತಕ್ಷೀರಿನ ನಿಮಿತ್ತ ಆತನಿಗೆ ಸಜೆಕೊಡಲು ಸಾಧ್ಯವಾಗದೆ ಕೆಲಸದಿಂದ ಮಾತ್ರ ನಿವೃತ್ತಿಪಡಿಸಲಾಯಿತು. ತನ್ನ ಮಗ ರಘುನಾಥನೂ ತನ್ನ ಪತ್ನಿಯಾದ ಸುಲೋಚನೆಯೂ ತನ್ನ ಮೋರೆಯ ಮೇಲೆ ದೃಷ್ಟಿಹಾಕಲಾರದೆ ಮುಂಬಯಿಗೆ ಹೊರಟು ಹೋದ ಸಮಾಚಾರದಿಂದ ತಗ್ಗಿಹೋದವನು ಯಾರಿಗೂ ತಿಳಿಯದಂತೆ ಒಂದು

ದಿನ ಆಳವಾದ ಬಾವಿಯಲ್ಲಿ ಹಾರಿ ಆತ್ಮಹತ್ಯಮಾಡಿಕೊಂಡನು. ಕುತ್ಸಿತರು ಆತನಿಗೆ ಅಮೇರಿಕದಲ್ಲಿ ಕಮ್ಮಿಶನರಾಗಿ ನೇಮಕವಾಗಿದೆ, ಅಲ್ಲಿಗೆ ಹೋಗಲಿಕ್ಕೆ ಬಾವಿಯೊಳಗೆ ಇಳಿದು ಹೋಗಿದ್ದಾನೆಂದು ಕೆಲ ಕಾಲ ಗೇಲಿ ಮಾಡುತಿದ್ದರು. ಹೀಗೆ ಈ ತ್ರಿಮೂರ್ತಿಗಳ ಮೇಲಣ ಸೇಡಿನ ಯಜ್ಞದ ಕಥೆಯು ಮುಗಿಯಿತು.

ವಿಮುದಲಾಲ ಉರ್ಫ ಭಿಕಾಜಿಯು ಗಂಗಾರಾಮನನ್ನು ಕೊಲೆ ಮಾಡಿದ ತಪ್ಪಿಗಾಗಿ ಗಲ್ಲಿಗೇರಿಸಲ್ಪಟ್ಟನು. ಪೋಪಟಲಾಲನ ಗತಿ ಏನಾಯಿತೆಂದು ಗೊತ್ತಾಗಲೇ ಇಲ್ಲ.

ಇದಾದ ನಂತರ ತ್ರೈಲೋಕ್ಯನಾಥನು ತನ್ನ ಜಂಗಬಹದ್ದೂರ ನೆಂಬ ಅವತಾರವನ್ನು ಸಂಪೂರ್ಣ ಮಾಡಿ ತನ್ನ ಅಮಿತವಾದ ಧನ ವನ್ನೆಲ್ಲ ಎರಡು ಪಾಲುಮಾಡಿ ಒಂದನ್ನು ಅಯೇಷೆಗೆ ಕೊಟ್ಟು ಅವಳು ಮೋರೋಪಂತನ ಮಗನಾದ ರಾಮದಾಸನೊಡನೆ ವಿವಾಹವಾಗು ವಂತೆಯೂ ಇನ್ನೊಂದನ್ನು ದ್ವಾರಕಾನಾಥನ ಹಿರಿ ಹೆಂಡತಿಯ ಮಗಳಾದ ಮಾಲಿನಿಗೆ ಕೊಟ್ಟು ಅವಳು ರಘುನಾಥ ಪಂತನನ್ನು ವಿವಾಹವಾಗು ವಂತೆಯೂ ಏರ್ಪಡಿಸಿ, ಯಾರಿಗೂ ತಿಳಿಯದಂತೆ ಬದರಿಕಾಶ್ರಮದ ಕಡೆಗೆ ವೈರಾಗಿಯಾಗಿ ತೆರಳಿದನು. ಈ ಸಮಾಚಾರವನ್ನು ದೊಡ್ಡ ಅಕ್ಷರಗಳಲ್ಲಿ ತನ್ನ 'ರಾಷ್ಟ್ರಮತ'ವೆಂಬ ಪತ್ರಿಕೆಯಲ್ಲಿ ಪ್ರಕಟಿಸಿದ ಗಿರಿಧರ ಲಾಲನು ತ್ರೈಲೋಕ್ಯನಾಥ ಅಥವಾ ಜಂಗಬಹದ್ದೂರರ ವಿಚಿತ್ರ ಕಥೆ ಯನ್ನು ಗ್ರಂಥರೂಪವಾಗಿ ಬರೆದು ಇತಿಹಾಸದಲ್ಲಿ ಅದಕ್ಕೆ ಸ್ಥಾನ ಕೊಟ್ಟನೆಂದು ತಿಳಿದೆವು.

